# ಸಂಪೂರ್ಣ
# ಚಾಣಕ್ಯ ನೀತಿ
## ಮೂಲ ಶ್ಲೋಕಗಳ ವ್ಯಾಖ್ಯಾನ ಸಹಿತ

Kannada





## ॥ ಅಧ್ಯಾಯ - ೧ ॥

**ಆಪತ್ಕಾಲಕ್ಕೆ ಹಣ ಉಳಿತಾಯ ಮಾಡಬೇಕು ಸ್ತ್ರೀ, ಬಾಲಕರ ಸೇವೆಗೆ ಅದನ್ನು ಮುಡಿಪಾಗಿ ಇಡಬೇಕು. ಪೂರ್ವತಃ ಸ್ವಯಂ ರಕ್ಷಣೆಗೆ ಅದನ್ನು ವಿನಿಯೋಗಿಸಬೇಕು.**

प्रणम्य शिरसा विष्णुं त्रैलोक्याधिपतिं प्रभुम्।
नानाशास्त्रोद्धृतं वक्ष्ये राजनीतिसमुच्चयम्॥

ಮೂರು ಲೋಕಗಳಿಗೂ ಅಧಿಪತಿಯಾದ ಮತ್ತು ಎಲ್ಲರಿಗೂ ಒಡೆಯನಾದ ವಿಷ್ಣುವಿಗೆ ಶಿರಬಾಗಿ ನಮಿಸಿ, ರಾಜನೀತಿಯನ್ನೆಲ್ಲಾ ಒಟ್ಟುಗೂಡಿಸಿ ಈ ಗ್ರಂಥವನ್ನು ರಚಿಸುತ್ತೇನೆ. (ಇಲ್ಲಿಹೇಳಿರುತ್ತೇನೆ).

ಭಾರತೀಯ ಪರಂಪರೆಯಲ್ಲಿ ಯಾವುದೇ ಗ್ರಂಥದ ಆರಂಭದಲ್ಲಿ ಇಷ್ಟ ದೈವವನ್ನು ಸ್ಮರಿಸುವುದು ಪದ್ಧತಿಯಾಗಿದೆ. ಅದರಂತೆ ಕೌಟಿಲ್ಯರೂ ಕೂಡ ತಮ್ಮ ಇಷ್ಟ ದೈವವಾದ ಶ್ರೀಮಹಾವಿಷ್ಣುವನ್ನು ನಿರ್ವಿಘ್ನ ಪರಿಸಮಾಪ್ತಿಗಾಗಿ ಸ್ತುತಿಸುತ್ತ, ತಮ್ಮ ವಿಶೇಷ ಜ್ಞಾನದ ವಿಷಯವಾದ ರಾಜನೀತಿಯನ್ನು ಈ ಕೃತಿಯಲ್ಲಿ ಜನರಿಗೆ ತಿಳಿಸಿರುತ್ತಾರೆ. ॥೧॥

अधीत्येदं यथाशास्त्रं नरो जानाति सत्तमः।
धर्मोपदेशविख्यातं कार्याकार्यं शुभाशुभम्॥

ಸತ್ತಮನೆಂದರೆ ಶ್ರೇಷ್ಠನಾದ ವ್ಯಕ್ತಿಯು. ಅಂತಹ ಮನುಷ್ಯರು ಈ ಗ್ರಂಥವನ್ನು

ಪಠಿಸುವುದರಿಂದ ಶಾಸ್ತ್ರವಿಹಿತವೂ, ಧರ್ಮೋಪದೇಶವೆಂದು ಪ್ರಖ್ಯಾತವೂ ಆಗಿರುವ ಶುಭ ಮತ್ತು ಅಶುಭಕರ್ಮಗಳ ಮಾಹಿತಿಯನ್ನು ಪಡೆಯುತ್ತಾನೆ.

ಯಾವುದೇ ಕೆಲಸವನ್ನು ಪ್ರಾರಂಭಿಸುವ ಮೊದಲು ಅದರ ಒಳಿತು ಮತ್ತು ಕೆಡಕುಗಳನ್ನು ಶಾಸ್ತ್ರೀಯವಾಗಿ ವಿವೇಚಿಸುವುದು ಒಳ್ಳೆಯದು. ಶ್ರೇಷ್ಠವಾದ ವ್ಯಕ್ತಿಯು ಚಾಣಕ್ಯ ನೀತಿಶಾಸ್ತ್ರದಂತಹ ಗ್ರಂಥಗಳನ್ನು ಓದಿ, ಶಾಸ್ತ್ರಸಂಮತ ಮತ್ತು ಶಾಸ್ತ್ರ ನಿಷಿದ್ಧವಾದ ಕರ್ಮಗಳ ಜ್ಞಾನವನ್ನು ಪಡೆಯುತ್ತಾನೆ. ಅದಕ್ಕೆ ತಕ್ಕಂತೆ, ನಂತರ ಅಶುಭಕರ್ಮಗಳನ್ನು ತ್ಯಜಿಸಿ, ಶುಭಕರ್ಮಗಳನ್ನು ಅರಿಸಿಕೊಳ್ಳುವುದರ ಮೂಲಕ ಒಳ್ಳೆಯ ಫಲವನ್ನು ಪಡೆಯುತ್ತಾನೆ. ಇಲ್ಲಿ 'ವಿಖ್ಯಾತ' ಎಂದು ಹೇಳಿರುವುದರಿಂದ, ಈ ಗ್ರಂಥದಲ್ಲಿ ಹೇಳಿರುವ ಸಂಗತಿಗಳು ಪ್ರಸಿದ್ಧವಾಗಿದ್ದು, ಶಾಸ್ತ್ರಸಂಮತವೂ, ವಿದ್ವಾಂಸರ ಒಪ್ಪಿಗೆಗೆ ಪಾತ್ರವಾಗಿರುವುವೆಂದೂ ತಿಳಿದುಬರುತ್ತದೆ. ॥೨॥

**तदहं सम्प्रवक्ष्यामि लोकानां हितकाम्यया।**
**येन विज्ञानमात्रेण सर्वज्ञत्वं प्रपद्यते॥**

ಆದುದರಿಂದ ನಾನು ಲೋಕಹಿತವನ್ನು ಬಯಸುತ್ತಾ ಇದನ್ನು ಚೆನ್ನಾಗಿ ತಿಳಿಸಿಕೊಡುತ್ತೇನೆ. ಇಲ್ಲಿರುವ ವಿಷಯಗಳನ್ನು ಅರಿತ ಮಾತ್ರದಿಂದ ಮನುಷ್ಯನು ಸರ್ವಜ್ಞತ್ವವನ್ನು ಹೊಂದುತ್ತಾನೆ.

ಈ ಕೃತಿಯಲ್ಲಿ ಜನರ ಜೀವನವನ್ನು ಸುಧಾರಿಸಲು ಮತ್ತು ಒಳ್ಳೆಯ ನಡವಳಿಕೆಯನ್ನು ಹೊಂದಲು ಬೇಕಾದ ಎಲ್ಲ ವಿಷಯಗಳನ್ನೂ ಶಾಸ್ತ್ರಕಾರರು ಚೆನ್ನಾಗಿ ವಿವರಿಸುವುದರಿಂದ, ಇದನ್ನು ಚೆನ್ನಾಗಿ ಪಠಿಸಿದ ಮಾನವನ್ನು ಸರ್ವಜ್ಞನೆನಿಸುತ್ತಾನೆ. ॥೩॥

**मूर्खशिष्योपदेशेन दुष्टस्त्रीभरणेन च।**
**दुःखितैः सम्प्रयोगेण पण्डितोऽप्यवसीदति॥**

ಈ ಶ್ಲೋಕದಲ್ಲಿ ಎಂತಹ ಶಿಷ್ಯರಿಗೆ ಉಪದೇಶ ಮಾಡಬೇಕೆಂಬುದನ್ನು ಶಾಸ್ತ್ರಕಾರರು ಸೂಚಿಸಿರುತ್ತಾರೆ. ಮೂರ್ಖನಾದ ಶಿಷ್ಯನಿಗೆ ಇಂತಹ ನೀತಿಯನ್ನು ಹೇಳುವುದರಿಂದ ಪ್ರಯೋಜನವಾಗುವುದಿಲ್ಲ. ಹಾಗೆಯೇ ಮನೆಯಲ್ಲಿ ಸ್ತ್ರೀ ದುಷ್ಟಸ್ವಭಾವದವಳಾದರೆ ಅವಳ ಪಾಲನೆಯು ದುಃಖದಾಯಕವೇ ಆಗುತ್ತದೆ. ದುಃಖದಲ್ಲಿರುವವರ ಸಂಬಂಧದಿಂದ ತಾವೂ ದುಃಖವನ್ನು ಅನುಭವಿಸಬೇಕಾಗುತ್ತದೆ. ಈ ಮೂರು ರೀತಿಯ ಕಾರ್ಯಗಳಿಂದ ಪಂಡಿತನಾದವನೂ ಕೂಡ ನಾಶಹೊಂದುತ್ತಾನೆ.

ಮೂರ್ಖ ಶಿಷ್ಯನಿಂದ ಅವನ ಪಾಂಡಿತ್ಯವು ವ್ಯರ್ಥವಾಗುತ್ತದೆ. ದುಷ್ಟ ಸ್ತ್ರೀಯಿಂದ ಆರ್ಥಿಕಸ್ಥಿತಿ ಹಾಳಾಗುತ್ತದೆ. ದುಃಖಿಗಳ ಸಂಪರ್ಕದಿಂದ ಮನಃಶಾಂತಿ ಹಾಳಾಗುತ್ತದೆ. ಇಂತಹ ಅಪ್ರಯೋಜಕವಾದ ಕೆಲಸಗಳನ್ನು ಮಾಡಬಾರದೆಂಬುದು ಇಲ್ಲಿಯ ನೀತಿಯಾಗಿದೆ. ಪಂಡಿತನಾದವನು ಸರಿಯಾದ ಶಿಷ್ಯರಿಗೆ ವಿದ್ಯಾದಾನ ಮಾಡುತ್ತ, ಕುಲಸ್ತ್ರೀಯೊಡನೆ ಮತ್ತು ಸಂತೋಷಚಿತ್ತರಾದ ಮಿತ್ರರೊಡನೆ ಜೀವನ ನಡೆಸಿದರೆ ಆವನ ಪಾಂಡಿತ್ಯವು ವೃದ್ಧಿಯಾಗಿ ಪ್ರಯೋಜಕವೂ ಆಗುತ್ತದೆ. ||೪||

दुष्टा भार्या शठं मित्रं भृत्यश्चोत्तरदायकः।
ससर्पे च गृहे वासो मृत्युरेव न संशयः॥

ನಾಲ್ಕನೆಯ ಶ್ಲೋಕದಲ್ಲಿ ಹೇಳಿದ ಅರ್ಥವನ್ನೆ ಆಚಾರ್ಯರು ಇಲ್ಲಿ ಇನ್ನೂ ವಿಶದವಾಗಿ ತಿಳಿಸಿರುತ್ತಾರೆ. ದುಷ್ಟಳಾದ ಹೆಂಡತಿ, ಧೂರ್ತನಾದ ಮಿತ್ರ, ಎದುರುತ್ತರ ಕೊಡುವ ಸೇವಕರು, ಸರ್ಪವು ಓಡಾಡುತ್ತಿರುವ ಮನೆ, ಇವುಗಳ ಜೊತೆ ವಾಸಮಾಡುವುದು ಮೃತ್ಯುವಿಗೆ ಆಹ್ವಾನ ನೀಡಿದಂತೆ. ಸದ್ಗೃಹಿಣಿಯು ಹೇಗೆ ಮನೆಯನ್ನು ಸ್ವರ್ಗಸಮವಾಗಿ ಮಾಡಬಲ್ಲಳೋ ಹಾಗೆಯೇ ಪತಿಹಿತಳಲ್ಲದ ಸ್ತ್ರೀಯು ಮನೆಯನ್ನು ನರಕಸದೃಶವಾಗಿ ಪರಿವರ್ತಿಸುತ್ತಾಳೆ. ಅಂತಹ ಸ್ತ್ರೀಯೊಡನೆ ಸಂಸಾರಮಾಡುವುದು ದುಃಖದಾಯಕವಾದುದು. ನಂಬಿಸಿ ಮೋಸ ಮಾಡುವಂತಹ ಧೂರ್ತರಾದ ಸ್ನೇಹಿತರು ಮನುಷ್ಯನನ್ನು ಕೆಟ್ಟ ಮಾರ್ಗಕ್ಕೆ ಎಳೆದು ಜೀವನವನ್ನು ಹಾಳುಮಾಡಬಲ್ಲರು. ಸೇವಕರು ಒಡೆಯುವ ಆಜ್ಞೆಯನ್ನು ಮನ್ನಿಸಿ ಅದರಂತೆ ಈ ಕೆಲಸ ಮಾಡುವುದಾದರೆ ಅವರಿಂದ ಉತ್ತಮವಾದ ಕೆಲಸಗಳನ್ನು ಮಾಡಿಸಬಹುದು. ಅವರೇ ಎದುರುತ್ತರ ಕೊಡುವಂತೆ ಆದರೆ ಗೃಹಸ್ಥನ ಸ್ಥಿತಿ ಶೋಚನೀಯವಾಗುತ್ತದೆ. ಇಂತಹವರ ಜೊತೆಯಲ್ಲಿ ಮನೆಯಲ್ಲಿ ವಾಸಮಾಡುವುದು ಸರ್ಪವಿರುವ ಮನೆಯಲ್ಲಿ ವಾಸಮಾಡುವಂತೆ ದುಃಖದಾಯಕವಾದುದು. ||೫||

आपदर्थे धनं रक्षेद् दारान् रक्षेद्धनैरपि।
आत्मानं सततं रक्षेद् दारैरपि धनैरपि॥

ಆಪತ್ಕಾಲಕ್ಕಾಗಿ ಹಣವನ್ನು ಕೂಡಿಡಬೇಕು. ಹೆಂಡತಿಗೆ ಏನಾದರೂ ಆಪತ್ತು ಒದಗಿದರೆ ಹಣವನ್ನು ಖರ್ಚುಮಾಡಿಯಾದರೂ ಹೆಂಡತಿಯನ್ನು ಉಳಿಸಿಕೊಳ್ಳಬೇಕು. ಆದರೆ ತನಗೇ ಆಪತ್ತು ಒದಗಿದಾಗ ಹೆಂಡತಿಯನ್ನು, ಹಣವನ್ನು ಕಡೆಗಣಿಸಿ ತನ್ನನ್ನ ತಾನು ಮೊದಲು ರಕ್ಷಿಸಿಕೊಳ್ಳಬೇಕು.

ಹಣವು ಎಲ್ಲ ಸಮಯಗಳಲ್ಲಿಯೂ ಒಂದೇ ಸಮನಾಗಿ ಸಂಪಾದನೆಯಾಗದಿರಬಹುದು. ಕ್ಷಾಮ ಮುಂತಾದ ಆಪತ್ತಿನ ಕಾಲಕ್ಕಾಗಿ, ಹೆಚ್ಚು ಹಣವನ್ನು ಸಂಪಾದನೆ ಮಾಡಿದಾಗ ಉಳಿಸಿಕೊಳ್ಳಬೇಕು. ಆಗ ದುರ್ಭಿಕ್ಷದ ಕಾಲದಲ್ಲಿ ಜೀವನಕ್ಕೆ ಸಮಸ್ಯೆಯಾಗದು. ಹಣವನ್ನು ಪತ್ನಿಗಾಗಿ ಖರ್ಚುಮಾಡಬೇಕಾದ ಸಂದರ್ಭದಲ್ಲಿ ಹಣದ ಆಸೆಯನ್ನು ಬಿಟ್ಟು, ಪತ್ನಿಯನ್ನು ಚೆನ್ನಾಗಿ ನೋಡಿಕೊಳ್ಳಬೇಕು. ಸಂತುಷ್ಟಳಾದ ಸ್ತ್ರೀಯೇ ಪುರುಷನಿಗೆ ಒಂದು ಆಸ್ತಿಯಿದ್ದಂತೆ. ಕೆಲವು ಸಲ ತನಗೇ ಆಪತ್ತು ಒದಗಿ, ಉಳಿದುದನ್ನು ಉಳಿಸಿಕೊಳ್ಳಲು ಆಗದಿರಬಹುದು. ತಾನು ಬದುಕಿದ್ದರೆ, ಮುಂದೆ ಧನದಾನ್ಯಾದಿಗಳನ್ನು ಮತ್ತೆ ಸಂಪಾದನೆ ಮಾಡಬಹುದು. ಆದ್ದರಿಂದ ಅತಿ ಕಠಿಣವಾದ ಕಡೆ. ಎಲ್ಲವನ್ನು ತ್ಯಾಗಮಾಡಿ ತನ್ನನ್ನು ತಾನು ಕಾಪಾಡಿಕೊಳ್ಳಬೇಕಾಗುತ್ತದೆ. ।।೬।।

आपदर्थे धनं रक्षेच्छ्रीमतां कुत आपदः।
कदाचिच्चलिता लक्ष्मीः सञ्चितोऽपि विनश्यति।।

ಆಪತ್ಕಾಲಕ್ಕಾಗಿ ಹಣವನ್ನು ಕೂಡಿಡಬೇಕು. ಸಾಧಾರಣವಾದ ಸಂಪಾದನೆಯಿಂದ ವ್ಯಕ್ತಿಗೆ ಹೆಚ್ಚು ಹಣವನ್ನು ಸಂಗ್ರಹಿಸಿ ಇಡುವುದು ಕಷ್ಟ. ಅಂತಹವನು ಕೂಡ ಮಿತವ್ಯಯವಾದ ಸಂಸಾರ ನಡೆಸಿ,ಕಷ್ಟಕಾಲಕ್ಕಾಗಿ ಸ್ವಲ್ಪ ಹಣವನ್ನು ಇಡಲೇಬೇಕು. ಶ್ರೀಮಂತರಾದವರಿಗೆ ಇಂತಹ ಯೋಚನೆಯಿಲ್ಲ. ಅವರ ಬಳಿ ಕೂಡಿಡದೆ ಇದ್ದರೂ ಅಪಾರವಾದ ಸಂಪತ್ತು ಇರುವುದರಿಂದ, ಆಪತ್ಕಾಲವೆಂಬುದೇ ಅವರಿಗೆ ಇರುವುದಿಲ್ಲ. ಆದರೆ ಲಕ್ಷ್ಮಿಯೇನಾದರೂ ಅಂತಹವರ ಕೈಬಿಟ್ಟರೆ, ಎಷ್ಟೇ ಹಣವಿದ್ದರೂ ಯಾವುದಾದರೂ ಒಂದು ವಿಧದಲ್ಲಿ ಎಲ್ಲವೂ ನಾಶವಾಗುತ್ತದೆ. ಆದ್ದರಿಂದ ಶ್ರೀಮಂತನೂ ಕೂಡ ಚಂಚಲೆಯಾದ ಲಕ್ಷ್ಮಿಯ ವಿಚಾರವಾಗಿ ಎಚ್ಚರಿಕೆಯಿಂದ ವರ್ತಿಸಬೇಕು. ದುರದೃಷ್ಟದಿಂದ ಲಕ್ಷ್ಮಿಯು ಕೈಬಿಟ್ಟರೆ, ಎಷ್ಟೇ ಹಣವಿದ್ದರೂ ಸಮಯದಲ್ಲಿ ಉಪಯೋಗಕ್ಕೆ ಬರದೆ ಇರಬಹುದು. ಹಾಗೆಂದ ಮಾತ್ರಕ್ಕೆ ಆಪತ್ಕಾಲಕ್ಕೆ ಸಹಾಯವಾಗಲೆಂದು ಹಣವನ್ನು ಕೂಡಿಡುವುದು ತಪ್ಪಲ್ಲ. ।।೭।।

यस्मिन् देशे न सम्मानो न वृत्तिर्न च बान्धवाः।
न च विद्याऽऽगमः कश्चित् तं देशं परिवर्जयेत्।।

ಯಾವ ದೇಶದಲ್ಲಿ ಗೌರವ ಸಿಕ್ಕುವುದಿಲ್ಲವೋ, ಸರಿಯಾದ ಉದ್ಯೋಗ ಮಾಡಲು ಆಗುವುದಿಲ್ಲವೋ, ಪ್ರೀತಿಯಿಂದ ಕಾಣುವ ಬಂಧುಗಳು ಇರುವುದಿಲ್ಲವೋ, ವಿದ್ಯಾರ್ಜನೆಗೆ ಅವಕಾಶವಿಲ್ಲವೋ ಅಂತಹ ದೇಶವನ್ನು ವರ್ಜಿಸುವುದೇ ಲೇಸು.

ಮನುಷ್ಯನು ಸಂತೋಷವಾಗಿ ಇರಬೇಕಾದರೆ ಗೌರವ, ಒಳ್ಳೆಯ ಉದ್ಯೋಗ, ಹಿತರಾದ ಬಂಧು-ಮಿತ್ರರು ಮತ್ತು ಶಿಕ್ಷಣ ಸೌಲಭ್ಯಗಳು ಬೇಕು. ಇವುಗಳಿಗೆ ಅವಕಾಶವಿಲ್ಲದಿದ್ದರೆ ಅವನು ಪ್ರತಿಕ್ಷಣವೂ ದುಃಖ ಮತ್ತು ಅವಮಾನವನ್ನು ಸಹಿಸಬೇಕಾಗುತ್ತದೆ. ಅಂತಹ ಕೀಳಾದ ಜೀವನವನ್ನು ಪರಿಚಿತವಾದ ಬಂಧುಗಳ ಮಧ್ಯೆ ನಡೆಸುವುದಕ್ಕಿಂತ ಅಪರಿಚಿತವಾದ ದೇಶಕ್ಕೆ ಹೋಗಿಬಿಡುವುದು ಲೇಸು. ||೮||

श्रोत्रियो धनिकः राजा नदी वैद्यस्तु पञ्चमः।
पञ्च यत्र न विद्यन्ते न तत्र दिवसं वसेत्॥

ಹಿಂದಿನ ಪದ್ಯದ ಅಭಿಪ್ರಾಯವನ್ನೆ ಮುಂದುವರಿಸುತ್ತಾ, ಆಚಾರ್ಯರು ಎಂತಹ ದೇಶವು ವಾಸಕ್ಕೆ ಅಯೋಗ್ಯವಾದುದು ಎಂಬುದನ್ನು ಈ ಶ್ಲೋಕದಲ್ಲಿ ಹೇಳಿರುತ್ತಾರೆ. ಶ್ರೋತ್ರಿಯನಾದ ಬ್ರಾಹ್ಮಣ, ಶ್ರೀಮಂತರು, ಉತ್ತಮನಾದ ರಾಜ, ಜಲಪೂರ್ಣವಾದ ನದಿ ಮತ್ತು ವೈದ್ಯ, ಇವರು ಐವರು ಯಾವ ಸ್ಥಳದಲ್ಲಿ ಇರುವುದಿಲ್ಲವೋ ಅಂತಹ ದೇಶದಲ್ಲಿ ಒಂದು ದಿನವೂ ವಾಸ ಮಾಡಬಾರದು.

ಶ್ರೋತ್ರಿಯರೆಂದರೆ ವೇದವಿದ್ಯಾಪಾರಂಗತರು.ಇಂತಹ ಬ್ರಾಹ್ಮಣರಿಂದ ಧರ್ಮದ ಸಂರಕ್ಷಣೆಯಾಗುವುದರಿಂದ ಶ್ರೋತ್ರಿಯರು ಇರುವ ದೇಶವು ಧರ್ಮಯುಕ್ತವಾಗಿದ್ದು, ಜನರಲ್ಲಿ ಅಧರ್ಮಾಸಕ್ತಿಯಿರುವುದಿಲ್ಲ. ಧನಿಕರಾದವರು ದೇಶದಲ್ಲಿ ಇದ್ದರೆ, ವ್ಯವಸಾಯ, ವಾಣಿಜ್ಯ ಮುಂತಾದವುಗಳು ಅಭಿವೃದ್ಧಿ ಹೊಂದಿ ದೇಶ ಸುಭಿಕ್ಷವಾಗಿರುವುದು. ರಾಜನು ಸಮರ್ಥನಾಗಿದ್ದರೆ ಪ್ರಜೆಗಳು ಅವನ ಆಶ್ರಯದಲ್ಲಿ ಸುಖವಾಗಿರುತ್ತಾರೆ. ಅದ್ದರಿಂದಲೇ, 'ಯಥಾರಾಜಾ ತಥಾ ಪ್ರಜಾಃ' ಎಂಬ ಮಾತು ಪ್ರಸಿದ್ಧವಾಗಿರುವುದು. ನದಿಯದಡದಲ್ಲಿ ಇರುವ ಊರುಗಳು ಬೇಗ ಮುಂದುವರಿಯುತ್ತವೆ. ಜನರ ಜೀವನದ ಆಧಾರವೇ ನೀರು. ಇದರ ಜೊತೆಗೆ ಉತ್ತಮ ವೈದ್ಯಕೀಯ ಸೌಲಭ್ಯವೂ ಅತ್ಯವಶ್ಯಕ. ಇವುಗಳಲ್ಲಿ ಯಾವುದು ಇಲ್ಲದಿದ್ದರೂ ಜೀವನ ದುರ್ಭರವಾಗುತ್ತದೆ. ಅಂತಹ ಸ್ಥಳವನ್ನು ತ್ಯಜಿಸುವುದೇ ಉತ್ತಮ.||೯||

लोकयात्रा भयं लज्जा दाक्षिण्यं त्यागशीलता।
पञ्च यत्र न विद्यन्ते न कुर्यात् तत्र संस्थितिम्॥

ಈ ಶ್ಲೋಕದಲ್ಲಿಯೂ ಕೂಡ ಆಚಾರ್ಯರು ಜೀವನಕ್ಕೆ ಬೇಕಾದ ಅಂಶಗಳನ್ನು ಒತ್ತಿ ಹೇಳಿರುತ್ತಾರೆ. ಲೋಕಯಾತ್ರೆ ಎಂದರೆ ನಿತ್ಯ ಜೀವನಕ್ಕೆ ಬೇಕಾದ ಆಶ್ರಯ ಮತ್ತು ಅನುಕೂಲತೆಗಳು. ಅದಕ್ಕಾಗಿ ಸರಿಯಾದ ಮಾರ್ಗವನ್ನು ಮಾತ್ರ ಅನುಸರಿಸಬೇಕು.

ದುರ್ಮಾರ್ಗವನ್ನು ಅನುಸರಿಸಿದರೆ ರಾಜನು ಶಿಕ್ಷಿಸಿಯಾನೆಂಬ ಭಯವಿರಬೇಕು. ಭಯವೆಂಬುದೇ ಇಲ್ಲದಿದ್ದರೆ ಶಕ್ತರಾದವರು ದುರ್ಬಲರನ್ನು ಪೀಡಿಸಿ ಲೂಟಿ ಮಾಡುತ್ತಾರೆ. ದುಷ್ಟರಿಗೆ ಇಂತಹ ಭಯವಿದ್ದರೆ, ಸಜ್ಜನರಿಗೆ ಲಜ್ಜೆಯೇ ಕೆಟ್ಟಕೆಲಸಗಳಿಂದ ನಿರೋಧಿಸುತ್ತದೆ. ನಾಲ್ಕು ಜನರು ಮೆಚ್ಚುವಂತಹ ಕೆಲಸ ಮಾಡಬೇಕೇ ಹೊರತು, ನಾಚಿಕೆಪಡುವಂತಹ ಕೆಲಸಕ್ಕೆ ಕೈಹಾಕಬಾರದು. ದಾಕ್ಷಿಣ್ಯವೆಂದರೆ ಸೌಜನ್ಯ ಮತ್ತು ಇತರರ ಮನಸ್ಸನ್ನು ಅನುಸರಿಸಿ ನಡೆಯುವುದು. ಇದು ಸಜ್ಜನರ ಲಕ್ಷಣ. ತ್ಯಾಗಶೀಲತೆಯೆಂದರೆ ದಾನಬುದ್ಧಿ, ದಾನಕ್ಕಿಂತ ಉತ್ತಮವಾದ ಧರ್ಮವಿಲ್ಲ. ಮೇಲೆ ಹೇಳಿದ ಐದು ಗುಣಗಳೂ ಎಲ್ಲಿ ಜನರಲ್ಲಿ ಇರುತ್ತವೆಯೋ ಅದು ವಾಸಮಾಡಲು ಉತ್ತಮವಾದ ಸ್ಥಳವಾಗಿದೆ. ಈ ಐದೂ ಎಲ್ಲಿ ಇಲ್ಲವೋ ಅಲ್ಲಿ ವಾಸಮಾಡಬಾರದು. ||೧೦||

**जानीयात् प्रेषणे भृत्यान् बान्धवान् व्यसनाऽऽगमे।**
**मित्रं चापत्तिकालेषु भार्यां च विभवक्षये॥**

ಪ್ರೇಷಣವೆಂದರೆ ಕಳುಹಿಸುವುದು. ಭೃತ್ಯರನ್ನು ಅಂದರೆ ಸೇವಕರನ್ನು ಯಾವುದಾದರೂ ಕೆಲಸದ ನಿಮಿತ್ತ ಕಳುಹಿಸಿಕೊಟ್ಟಾಗ ಅವರು ಕೆಲಸವನ್ನು ನಿರ್ವಹಿಸುವ ರೀತಿಯಿಂದ ಅವರ ಯೋಗ್ಯತೆಯನ್ನು ಅಳೆಯಬಹುದು. ಹಾಗೆಯೇ ಆಪತ್ಕಾಲದಲ್ಲಿ ಬಾಂಧವರ ಯೋಗ್ಯತೆ ಗೊತ್ತಾಗುತ್ತದೆ. ಸಮಯದಲ್ಲಿ ಸಹಾಯಮಾಡುವವನೇ ನಿಜವಾದ ಮಿತ್ರನು. 'ಆಪದ್ಗತಂ ಚ ನ ಜಹಾತಿ' ಎಂಬುದೇ ಸನ್ಮಿತ್ರನ ಲಕ್ಷಣವು. ಹೆಂಡತಿಯ ಸ್ವಭಾವವನ್ನು ಪರೀಕ್ಷಿಸಬೇಕಾದರೆ ಹಣದ ಮುಗ್ಗಟ್ಟು ತಲೆದೋರುವ ಕಾಲವಾಗಬೇಕು. ಬೇಕಾದಷ್ಟು ಭೋಗಭಾಗ್ಯಗಳಿರುವವನನ್ನು ಸ್ತ್ರೀಯರು ಓಲೈಸುತ್ತಾರೆ. ಆದರೆ ಅವನು ದರಿದ್ರನಾದ ಕೂಡಲೇ ತಿರಸ್ಕಾರದಿಂದ ಕಾಣುತ್ತಾರೆ. ಪತಿವ್ರತೆಯಾದ ಸ್ತ್ರೀ ಮಾತ್ರ ತನ್ನ ಪತಿಯನ್ನು ಬಡತನ-ಸಿರಿತನವನ್ನು ಲೆಕ್ಕಿಸದೆ ಒಂದೇ ಸಮನಾಗಿ ಪ್ರೀತಿಸುದಲ್ಲದೆ, ಬಡತನವನ್ನು ಎದುರಿಸಲು ಬೇಕಾದ ಮನಃಸ್ಥೈರ್ಯವನ್ನು ನೀಡುತ್ತಾಳೆ. ||೧೧||

**आतुरे व्यसने प्राप्ते दुर्भिक्षे शत्रु-संकटे।**
**राजद्वारे श्मशाने च यस्तिष्ठति स बान्धवः॥**

ಆತುರನೆಂದರೆ ವ್ಯಾಧಿ ಮುಂತಾದವುಗಳಿಂದ ಪೀಡಿತನಾಗುವುದು. ವ್ಯಸನವೆಂದರೆ ದುಃಖ. ದುರ್ಭಿಕ್ಷವೆಂದರೆ ಕ್ಷಾಮದ ಸಮಯ. ಶತ್ರುಗಳು ಮೇಲೆ ಬಿದ್ದು ಸಂಕಟವುಂಟಾಗುವುದು ಮತ್ತೊಂದು ಕಷ್ಟದ ಸಮಯ. ರಾಜದ್ವಾರವೆಂದರೆ

ಅರಮನೆಯ ಹೆಬ್ಬಾಗಿಲು. ರಾಜದರ್ಶನಕ್ಕಾಗಿ ಹೋಗುವ ಸಂದರ್ಭದಲ್ಲಿ ನಡವಳಿಕೆಯ ಬಗ್ಗೆ ಸೂಚನೆ ನೀಡುವ ಗೆಳೆಯನಿದ್ದರೆ ಅನುಕೂಲ. ಶ್ಮಶಾನವೆಂದರೆ ಅಂತಿಮಯಾತ್ರೆಯ ಸಂದರ್ಭ. ಅಲ್ಲಿಯೂ ಕೂಡ ಯಾರೂ ಜೊತೆಯಲ್ಲಿ ಇರುತ್ತಾರೋ ಅವನೇ ನಿಜವಾದ ಬಂಧುವು. ಮನುಷ್ಯನು ಸುಖವಾಗಿದ್ದಾಗ ಅವನಿಗೆ ಬಂಧುಗಳ ಅಗತ್ಯ ಬೀಳುವುದಿಲ್ಲ. ಆದರೆ ಮೇಲೆ ಹೇಳಿದ ಕಷ್ಟಕಾಲಗಳಲ್ಲಿ ಬಂಧುಗಳ ನೆರವು ಅಗತ್ಯವಾಗಿ ಬೇಕಾಗುತ್ತದೆ. ಇಂತಹ ಅವಶ್ಯವಾದ ಸಂದರ್ಭಗಳಲ್ಲಿ ನಿಜವಾದ ಬಂಧುವು ತಾನಾಗಿಯೇ ಹೋಗಿ ಬೇಕಾದ ಸಹಾಯವನ್ನು ಮಾಡುತ್ತಾನೆ. ಕೇವಲ ಸಂಬಂಧಮಾತ್ರದಿಂದ ಬಂಧುಗಳಾಗಿ ಇರುವವರು ವ್ಯಕ್ತಿಯು ಸುಖ ಸಮೃದ್ಧಿಗಳಿಂದ ಕೂಡಿರುವಾಗ ಅವನನ್ನು ಅನುಸರಿಸಿ, ಕಷ್ಟಕಾಲದಲ್ಲಿ ಅವನನ್ನು ತೊರೆಯುತ್ತಾರೆ. ||೧೨||

**यो ध्रुवाणि परित्यज्य अध्रुवं परिसेवते।**
**ध्रुवाणि तस्य नश्यन्ति अध्रुवं नष्टमेव हि॥**

ಯಾರು ನಿಶ್ಚಿತವಾದ ಫಲವುಳ್ಳ ಕೆಲಸಗಳನ್ನು ಪರಿತ್ಯಜಿಸಿ, ಅನಿಶ್ಚಿತವಾದ ಕೆಲಸಗಳನ್ನು ಸ್ವೀಕರಿಸುತ್ತಾರೆಯೋ ಅವರಿಗೆ ನಿಶ್ಚಿತವಾದ ಫಲಗಳಂತೂ ಸಿಕ್ಕುವುದಿಲ್ಲ. ಅನಿಶ್ಚಿತವಾದ ಫಲಗಳು ಸಿಕ್ಕುವುದೂ ಸಾಧ್ಯವಿಲ್ಲ.

ಕೆಲವು ಕೆಲಸಗಳಲ್ಲಿ ಫಲವು ದೊರೆಯುವುದು ಖಚಿತವಾಗಿರುತ್ತದೆ. ಪಂಡಿತನಾದವನು ಅಂತಹ ಕೆಲಸಗಳನ್ನು ಅನಾದರಣೆ ಮಾಡಿ, ಫಲವು ಸಂದೇಹಾಸ್ಪದವಾಗಿರುವ ಕೆಲಸಗಳನ್ನು ಸ್ವೀಕರಿಸಬಾರದು. 'A bird in hand is better than two in the bush' ಎಂಬ ಇಂಗ್ಲೀಷ್ ಗಾದೆ ಮಾತು ಇದಕ್ಕೆ ಸಮಾನಾರ್ಥಕವಾದುದು. ||೧೩||

**वरयेत् कुलजां प्राज्ञो विरूपामपि कन्यकाम्।**
**रूपवतीं न नीचस्य विवाहः सदृशे कुले॥**

ಬುದ್ಧಿವಂತನಾದವನು ಒಳ್ಳೆಯ ಕುಲದಲ್ಲಿ ಹುಟ್ಟಿದ ಕನ್ಯೆಯನ್ನು ಅವಳು ಕುರೂಪಿಯಾದರೂ ವರಿಸಬೇಕು. ಆದರಂತೆಯೇ ರೂಪವತಿಯಾದವಳು ನೀಚವಾದ ಕುಲದವಳಾದರೆ ಅವಳನ್ನು ವಿವಾಹವಾಗಬಾರದು.

ಕುಲವನ್ನು ನೋಡಿ ಹೆಣ್ಣನ್ನು ತರಬೇಕೆಂದು ನಮ್ಮಲ್ಲಿ ಗಾದೆಯ ಮಾತಿದೆ. ಒಳ್ಳೆಯ ಕುಲದಲ್ಲಿ ಹುಟ್ಟಿದ ಹೆಣ್ಣುಮಕ್ಕಳು ಒಳ್ಳೆಯ ಸಂಸ್ಕಾರವುಳ್ಳವರಾಗಿರುತ್ತಾರೆ. 'ತಾಯಿಯಂತೆ ಮಗಳು, ನೂಲಿನಂತೆ ಸೀರೆ'ಯಲ್ಲವೇ. ಅಂತಹ ಶೀಲವಂತಳಾದ ಹೆಣ್ಣು

ಕುರೂಪಿಯಾದರೂ ಗಂಡನಿಗೂ ಅವರ ಮನೆಯವರಿಗೂ ಸಂತೋಷವನ್ನು ನೀಡಬಲ್ಲಳು. ಅದಿಲ್ಲದೆ ರೂಪವತಿಯಾದರೂ ಸದ್ಗುಣಿಯಲ್ಲದ ಯುವತಿಯು ಗಂಡನ ಮನೆಯಲ್ಲಿ ಹೊಂದಿಕೊಂಡು ಬಾಳಲಾರದೆ, ಎಲ್ಲರನ್ನೂ ದುಃಖಕ್ಕೆ ಈಡುಮಾಡುತ್ತಾಳೆ. ಅದುದರಿಂದ ಆಂತರಿಕ ಸೌಂದರ್ಯವನ್ನು ನೋಡಬೇಕೇ ಹೊರತು ಬಾಹ್ಯ ಸೌಂದರ್ಯವನ್ನಲ್ಲ. ॥೧೪॥

नखीनां च नदीनां च शृंगीणां शस्त्रपाणिनाम्।
विश्वासो नैव कर्तव्यो स्त्रीषु राजकुलेषु च॥

ನಖಿಗಳೆಂದರೆ ಉಗುರುಗಳೇ ಪ್ರಧಾನ ಆಯುಧವಾಗಿ ಉಳ್ಳ ಹುಲಿ, ಚಿರತೆ ಮುಂತಾದ ಪ್ರಾಣಿಗಳು. ಇವು ದುಷ್ಟಮೃಗಗಳಾದುದರಿಂದ, ಎಷ್ಟೇ ಸಾಧುವಾಗಿ ತೋರಿದರೂ ಅವುಗಳ ಮೇಲೆ ವಿಶ್ವಾಸವನ್ನಿಡಬಾರದು. ನದಿಯೂ ಕೂಡ ಕೆಲವು ಕಡೆ ಆಳ ಕಡಿಮೆಯಿರಬಹುದು. ಮುಂದಿನ ಹೆಜ್ಜೆಯಲ್ಲಿಯೇ ಆಳವಾಗಿರಬಹುದು. ಸುಳಿಗಳು, ಮೊಸಳೆಯಂತಹ ಪ್ರಾಣಿಗಳು ಇರಬಹುದು. ಇದ್ದಕ್ಕಿದ್ದ ಹಾಗೆಯೇ ಎಲ್ಲಿಯೋ ಮಳೆ ಬಿದ್ದು ನೀರು ಬಂದು ನದಿಯಲ್ಲಿ ಪ್ರವಾಹವುಂಟಾಗಬಹುದು. ಎಷ್ಟೇ ಚತುರ ಈಜುಗಾರನಾದರೂ ನೀರಿನ ವಿಷಯದಲ್ಲಿ ಎಚ್ಚರಿಕೆಯಿಂದ ಇರಬೇಕು.

ಶೃಂಗಗಳೆಂದರೆ ಕೊಂಬುಗಳುಳ್ಳ ಎತ್ತು, ಗೂಳಿ ಮುಂತಾದ ಪ್ರಾಣಿಗಳು. ಇವು ಕೋಪಗೊಂಡರೆ ಕೊಂಬಿನಿಂದ ತಿವಿದು ಕೊಂದುಬಿಡುತ್ತವೆ. ಇಂತಹ ಪ್ರಾಣಿಗಳೂ ಯಾವಾಗ ಮೇಲೇರಿ ಬರುತ್ತವೆಂದು ಹೇಳುವುದು ಕಷ್ಟ. ಕೈಗಳಲ್ಲಿ ಆಯುಧ ಹಿಡಿದಿರುವವನನ್ನು ಹಾಗೆಯೇ ನಂಬಬಾರದು. ಯುಕ್ತಾಯುಕ್ತ ವಿವೇಚನೆಯಿಲ್ಲದಿದ್ದರೆ ಅವನು ಯಾವಾಗ ಬೇಕಾದರೂ ತನ್ನಲ್ಲಿರುವ ಆಯುಧವನ್ನು ಪ್ರಯೋಗಿಸಬಹುದು. ಇದೇ ರೀತಿ ಸ್ತ್ರೀಯರನ್ನು ಮತ್ತು ರಾಜವಂಶದವರನ್ನೂ ಕೂಡ ಬಹಳವಾಗಿ ನಂಬಿ, ಹೆಚ್ಚಿನ ವಿಶ್ವಾಸವನ್ನು ಇಡಬಾರದೆಂದು ಆಚಾರ್ಯರು ಎಚ್ಚರಿಸುತ್ತಿದ್ದಾರೆ. ॥೧೫॥

विषादप्यमृतं ग्राह्यममेधयादपि काञ्चनम्।
नीचादप्युत्तमा विद्या स्त्रीरत्नं दुष्कुलादपि॥

ವಿಷದ ಜೊತೆಯಲ್ಲಿ ಅಮೃತವಿದ್ದರೆ, ವಿಷವನ್ನು ಬೇರ್ಪಡಿಸಿ ಅಮೃತವನ್ನು ಪಡೆದುಕೊಳ್ಳಬೇಕು. ಹಾಗೆಯೇ ಕೊಳಕಾದ ಮಲದ ನಡುವೆ ಬಿದ್ದಿದ್ದರೂ ಚಿನ್ನವನ್ನು ತೆಗೆದುಕೊಳ್ಳಬೇಕು. ನೀಚನೊಬ್ಬನಲ್ಲಿ ಉತ್ತಮವಾದ ವಿದ್ಯೆಯಿದ್ದರೆ ಅದನ್ನು ಅವನಿಂದ ಕಲಿತುಕೊಳ್ಳಬಹುದು. ಉತ್ತಮಳಾದ ಸ್ತ್ರೀರತ್ನವೇನಾದರೂ ದುಷ್ಟಲ ಪ್ರಸೂತಳಾಗಿದ್ದರೂ

ಅವಳ ಕುಲವನ್ನು ಕಡೆಗಣಿಸಿ ಅಂತಹ ಸ್ತ್ರೀಯನ್ನು ಸ್ವೀಕರಿಸಬಹುದು. ಅಮೃತ, ಚಿನ್ನ, ವಿದ್ಯೆ ಮತ್ತು ಸ್ತ್ರೀರತ್ನಗಳು ಅನರ್ಘ್ಯವಾದ ವಸ್ತುಗಳು. ಅವು ತಮ್ಮ ಜೊತೆಯಲ್ಲಿರುವ ಕೆಟ್ಟವಸ್ತುಗಳಿಂದ ದೂಷಿತವಾಗುವುದಿಲ್ಲ.।।೧೬।।

स्त्रीणां द्विगुण आहारो बुद्धिस्तासां चतुर्गुणा।
साहसं षड्गुणं चैव कामोऽष्टगुण उच्यते॥

ಸ್ತ್ರೀಯರು ಪುರುಷರಿಗಿಂತ ಎರಡು ಪಟ್ಟು ಆಹಾರವನ್ನು ಸೇವಿಸುತ್ತಾರೆ. ಅವರ ಬುದ್ಧಿವಂತಿಕೆಯೂ ಪುರುಷರಿಗಿಂತ ನಾಲ್ಕು ಪಟ್ಟು ಅಧಿಕವಾಗಿರುತ್ತದೆ. 'ಸ್ತ್ರೀಬುದ್ಧಿಃ ಪ್ರಳಯಾಂತಕಃ' ಎಂಬ ಗಾದೆ ಮಾತಿದೆ. ಅವರು ಪುರುಷರಿಗಿಂತಲೂ ಆರುಪಟ್ಟು ಹೆಚ್ಚು ಸಾಹಸಪ್ರಿಯರು. ಕಾಮಾಸಕ್ತಿಯಂತೂ ಎಂಟುಪಟ್ಟು ಅಧಿಕವಾಗಿರುತ್ತದೆ.

ಇಲ್ಲಿ ಹೇಳಿರುವ ಅಂಶಗಳು ಸಂದೇಹಾಸ್ಪದವೆನಿಸುತ್ತದೆ. ಪ್ರತಿಯೊಬ್ಬರೂ ಸೇವಿಸುವ ಆಹಾರವು, ಅವರ ದೇಹದ ಗಾತ್ರ, ಅವರು ಮಾಡುವ ಕೆಲಸ ಮುಂತಾದ ವಿಷಯಗಳನ್ನು ಅವಲಂಬಿಸುತ್ತದೆ. ಕೆಲವು ಮನೆಗಳಲ್ಲಿ ಸ್ತ್ರೀಯರು ಮಕ್ಕಳ ಪಾಲನೆ, ಮನೆಗೆಲಸ, ಹೊಲದ ಕೆಲಸ, ಹೊರಗಡೆ ದುಡಿತ ಮುಂತಾಗಿ ಹಲವು ಕ್ಷೇತ್ರಗಳಲ್ಲಿ ದುಡಿಯಬೇಕಾಗುತ್ತದೆ. ಅವರಿಗೆ ವಿಶ್ರಾಂತಿಯೆಂಬುದು ಅಪರೂಪದ ವಸ್ತುವಾಗಿರುತ್ತದೆ. ಅಂತಹ ಸ್ತ್ರೀಯರಿಗೆ ಸಹಜವಾಗಿ ಹೆಚ್ಚು ಆಹಾರ ಬೇಕಾಗಬಹುದು. ಆದರೆ ಆಹಾರದ ಪ್ರಮಾಣವನ್ನು ಹಾಗೆ ಸಾಧಾರಣೀಕರಣಗೊಳಿಸುವುದು ಸರಿಯಲ್ಲ.

ಬುದ್ಧಿಯ ವಿಷಯವೂ ಅಷ್ಟೆ. ಅದರಲ್ಲಿ ಸ್ತ್ರೀ ಪುರುಷಭೇದಕ್ಕಿರುವ ವಂಶವಾಹಿನಿಗಳು, ಬೆಳೆಯುವ ಪರಿಸರ ಹೆಚ್ಚು ಪರಿಣಾಮ ಬೀರುತ್ತವೆ. ಜೊತೆಗೆ ಹೊರಗಿನ ವಿಷಯಗಳಲ್ಲಿ ಪುರುಷರು ಬುದ್ಧಿವಂತರಾದರೆ, ಮನೆಯಲ್ಲಿ ಸ್ತ್ರೀಯರು ತಮ್ಮ ಅನುಭವದಿಂದ ಸಮಯೋಚಿತ ನಿರ್ಧಾರಗಳನ್ನು ಕೈಗೊಳ್ಳಬಲ್ಲರು.

ಸ್ತ್ರೀಯರ ಸಾಹಸಪ್ರಿಯತೆ ಕೂಡಾ ಪ್ರತಿಯೊಬ್ಬರಿಗೂ ಬದಲಾಗುತ್ತದೆ. ಇದನ್ನು ಯಾವ ಮಾನದಿಂದಲೂ ಅಳೆಯಲು ಸಾಧ್ಯವಿಲ್ಲ. ಕಾಮದ ವಿಷಯದಲ್ಲಿಯೂ ಲಜ್ಜಾಭೂಷಣರಾದ ಸ್ತ್ರೀಯರು ಪುರುಷರನ್ನು ಮೀರಿಸುತ್ತಾರೆಂದು ಭಾವಿಸುವುದು ಸರಿಯೆನಿಸಲಾರದು.



## ॥ ಅಧ್ಯಾಯ - ೨ ॥

ಮನಸ್ಸಿನಿಂದ ಯೋಜಿಸಿದ ಕಾರ್ಯವನ್ನು ವಾಣಿಯಿಂದ ಪ್ರಕಟಿಸದೇ ಉತ್ತಮ ರೂಪದಲ್ಲಿ ಫಲಿಸಲು ಯೋಚಿಸಬೇಕು. ಮೌನವಾಗಿದ್ದು ಅದನ್ನು ಕಾರ್ಯರೂಪಕ್ಕೆ ತರಬೇಕು.

अनृतं साहसं माया मूर्खत्वमतिलुब्धता।
अशौचत्वं निर्दयत्वं स्त्रीणां दोषा: स्वभावजा:॥

ಸುಳ್ಳು ಹೇಳುವುದು, ಸಾಹಸಕಾರ್ಯಗಳಲ್ಲಿ ಕೈಹಾಕುವುದು, ಮೋಹಿಸುವ ಸ್ವಭಾವ, ಮೂರ್ಖತೆ, ದುರಾಸೆ, ಶುಚಿತ್ವವಿಲ್ಲದಿರುವಿಕೆ, ನಿರ್ದಯತೆ ಇವು ಸ್ತ್ರೀಯರ ಸ್ವಭಾವ ಸಹಜವಾದ ಗುಣಗಳು.

ಆಚಾರ್ಯರು ಸ್ತ್ರೀಯರ ಬಗ್ಗೆ ಕಾಠಿನ್ಯವನ್ನು ವ್ಯಕ್ತಪಡಿಸಿವುದನ್ನು ಈ ಕೃತಿಯಲ್ಲಿ ಕಾಣುತ್ತೇವೆ. ಆದು ಅವರ ಕಾಲದ ವಿಶ್ಲೇಷಣೆ ಅಥವಾ ಅವರ ಅನುಭವದ ಪರಿಣಾಮವಿರಬಹುದು. ಮೇಲೆ ಹೇಳಿರುವ ಸ್ವಭಾವಗಳು ಮನುಷ್ಯರಲ್ಲಿ ಸಹಜವಾಗಿ ಕಂಡುಬರುತ್ತವೆಯೇ ಹೊರತು ಸ್ತ್ರೀಯರಲ್ಲಿ ಮಾತ್ರವಲ್ಲ. ಸ್ತ್ರೀ ಪುರುಷರಿಬ್ಬರಲ್ಲಿಯೂ ಒಳ್ಳೆಯ ಗುಣವಂತರು ಮತ್ತು ಕೆಟ್ಟವರು ಇರುವುದು ಸಾಧ್ಯ. ॥೧॥

भोज्यं भोजनशक्तिश्च रतिशक्तिर्वरांगना।
विभवो दानशक्तिश्च नाऽल्पस्य तपस: फलम्॥

ತಿನ್ನಲು ಯೋಗ್ಯವಾದ ಉತ್ತಮವಾದ ಪದಾರ್ಥಗಳು, ಅವುಗಳನ್ನು ತಿಂದು ಅರಗಿಸಿಕೊಳ್ಳುವ ಶಕ್ತಿ, ಸ್ತ್ರೀಯರೊಡನೆ ಸಂಭೋಗಶಕ್ತಿ, ಅದಕ್ಕೆ ತಕ್ಕಂತೆ ಶ್ರೇಷ್ಠವಾದ ಯುವತಿಯರು, ಬೇಕಾದಷ್ಟು ಐಶ್ವರ್ಯ ಮತ್ತು ಅದನ್ನು ದಾನಮಾಡುವ ಶಕ್ತಿ, ಇವು ಅಲ್ಪ ತಪಸ್ಸಿನಿಂದ ದೊರೆಯತಕ್ಕವುಗಳಲ್ಲ.

ಕೆಲವರಿಗೆ ಬೇಕಾದಷ್ಟು ಭೋಜನದ್ರವ್ಯಗಳು ಲಭ್ಯವಾಗಬಹುದು. ಆದರೆ ಅವುಗಳನ್ನು ತಿಂದು ಜೀರ್ಣಿಸಿಕೊಳ್ಳುವ ಶಕ್ತಿಯೇ ಇರುವುದಿಲ್ಲ. ಮತ್ತೆ ಕೆಲವರಿಗೆ ಒಳ್ಳೆಯ ಜೀರ್ಣಶಕ್ತಿಯಿದ್ದರೂ ಅದಕ್ಕೆ ತಕ್ಕಷ್ಟು ಭೋಜ್ಯ ಪದಾರ್ಥಗಳು ಸಿಕ್ಕುವುದಿಲ್ಲ. ಸುಂದರಿಯಾದ ಸ್ತ್ರೀಯರ ವಿಷಯದಲ್ಲಿಯೂ ಹೀಗೆಯೇ ಆಗಬಹುದು. ಧನಿಕರಾದವರು ಜಿಪುಣರಾಗಿರುವುದೇ ಹೆಚ್ಚು. ದಾನಮಾಡಬೇಕೆಂಬ ಮನಸ್ಸುಳ್ಳವರ ಬಳಿ ಸಾಕಷ್ಟು ಹಣವೇ ಇರುವುದಿಲ್ಲ. ಇವೆಲ್ಲವು ಒಬ್ಬನಲ್ಲಿಯೇ ಕೂಡಬೇಕಾದರೆ ಪೂರ್ವಜನ್ಮದ ಸುಕೃತವೇ ಸರಿ. ॥೨॥

**यस्य पुत्रो वशीभूतो भार्या छन्दाऽनुगामिनी।**
**विभवे यश्च सन्तुष्टस्तस्य स्वर्ग इहैव हि॥**

ಯಾರ ಮಗನು ತಂದೆಗೆ ಅಧೀನನಾಗಿ ಅವನ ಮಾತಿನಂತೆಯೇ ನಡೆಯುವನೋ, ಯಾರ ಪತ್ನಿಯು ಪತಿಯ ಮನಸ್ಸನ್ನು ಅರಿತು ನಡೆಯುತ್ತಾಳೆಯೋ, ಯಾರು ತನ್ನಲ್ಲಿರುವ ಸಂಪತ್ತಿನಿಂದಲೇ ತೃಪ್ತನಾಗಿರುತ್ತಾನೋ ಅವನಿಗೆ ಈ ಭೂಲೋಕವೇ ಸ್ವರ್ಗಪ್ರಾಯವಾಗುವುದು.

ಸಾಮಾನ್ಯವಾಗಿ ಮಕ್ಕಳು ಪ್ರಾಪ್ತವಯಸ್ಕರಾದ ಕೂಡಲೇ ತಮ್ಮ ಇಚ್ಛೆಯಂತೆ ನಡೆಯಲು ಬಯಸುತ್ತಾರೆ. ಅವರಿಗೆ ತಂದೆಯ ಮಾತಿನ ಮೇಲೆ ಲಕ್ಷ್ಯವಿರುವುದಿಲ್ಲ. ಮಾತಾಪಿತೃಗಳಿಗೆ ವಿಧೇಯನಾದ ಪುತ್ರನನ್ನು ಪಡೆದವನು ನಿಜಕ್ಕೂ ಭಾಗ್ಯವಂತನು. ಪತಿಯ ಚಿತ್ತವನ್ನು ಅನುಸರಿಸಿ ನಡೆಯುವ ಪತ್ನಿಯು ಮನೆಯನ್ನು ಸ್ವರ್ಗಸಮವಾಗಿಸುವಳು. ಆದ್ದರಿಂದಲೇ 'ಗೃಹಿಣೀ ಗೃಹಮುಚ್ಯತೇ,' ಎಂಬ ಮಾತು ಬಂದಿರುವುದು ಇವೆರಡೂ ಇರುವುದರ ಜೊತೆಗೆ ಮನುಷ್ಯನು ತನಗೆ ಇರುವ ಆದಾಯದಿಂದ ತೃಪ್ತಿಯ ಜೀವನವನ್ನು ನಡೆಸುವಂತಾದರೆ ಅವನಿಗೆ ಸ್ವರ್ಗ ಬೇರೆ ಬೇಕಿಲ್ಲ 'ಬೆಚ್ಚನ್ನ ಮನೆಯಾಗಿ, ವೆಚ್ಚಕ್ಕೆ ಹೊನ್ನಾಗಿ, ಇಚ್ಛೆಯಾ ಸತಿಯಾಗೆ ಸ್ವರ್ಗಕ್ಕೆ ಕಿಚ್ಚು ಹಚ್ಚೆಂದ ಸರ್ವಜ್ಞ' ಎಂದು ಸರ್ವಜ್ಞಕವಿ ಹಾಡಿದ್ದಾನೆ. ॥೩॥

**ते पुत्रा ये पितुर्भक्ताः स पिता यस्तु पोषकः।**

तन्मित्रं यस्य विश्वासः सा भार्या यत्र निर्वृतिः।।

ಯಾರು ತಂದೆಯಲ್ಲಿ ಭಕ್ತಿಯನ್ನು ಉಳ್ಳವರಾಗಿರುತ್ತಾರೋ ಅವರೇ ನಿಜವಾದ ಪುತ್ರರು. ಯಾರು ಅವರನ್ನು ಪ್ರೀತಿಯಿಂದ ಸಲಹುತ್ತಾನೋ ಅವನೇ ತಂದೆಯು. ಯಾರಲ್ಲಿ ವಿಶ್ವಾಸವಿಡಬಹುದೋ ಅವನೇ ಒಳ್ಳೆಯ ಮಿತ್ರನು. ಯಾರಿಂದ ಶಾಂತಿ, ನೆಮ್ಮದಿ ಮತ್ತು ಆನಂದ ದೊರೆಯುತ್ತದೆಯೋ ಅವಳೇ ನಿಜವಾದ ಪತ್ನಿಯು.

ಮನೆಯಲ್ಲಿ ಶಾಂತಿ ಮತ್ತು ಆನಂದವಿರಬೇಕಾದರೆ, ಮಕ್ಕಳು ತಂದೆಯ ಮಾತುಗಳನ್ನು ಪಾಲಿಸಬೇಕು. ತಂದೆಯೂ ಅವರನ್ನು ಪ್ರೀತಿಯಿಂದ ಪಾಲಿಸುತ್ತ ಅವರ ಬೇಕುಬೇಡಗಳನ್ನು ಗಮನಿಸಬೇಕು. ಇದರ ಜೊತೆ ವಿಶ್ವಾಸಪಾತ್ರರಾದ ಮಿತ್ರರಿದ್ದರೆ ಮತ್ತು ಪತಿವ್ರತೆಯಾದ ಮಡದಿಯಿದ್ದರೆ ಅಂತಹ ಮನೆ ಶಾಂತಿಯ ತವರೂರಾಗಿರುತ್ತದೆ. ।।೪।।

परोक्षे कार्यहन्तारं प्रत्यक्षे प्रियवादिनम्।
वर्जयेत्तादृशं मित्रं विषकुम्भं पयोमुखम्।।

ಕೆಲವರು ಮಿತ್ರರಂತಿದ್ದು ಎದುರಿಗೆ ಬಹಳ ಪ್ರಿಯವಾಗಿ ಮಾತನಾಡುತ್ತಾರೆ. ಹಿಂದಿನಿಂದ ಕೆಲಸಗಳಿಗೆ ತೊಂದರೆಯನ್ನುಂಟುಮಾಡುತ್ತಾರೆ. ಅಂತಹ ಮಿತ್ರರು ಮೇಲೆ ಮಾತ್ರ ಹಾಲು ಮತ್ತು ಒಳಗೆ ವಿಷ ತುಂಬಿರುವ ಗಡಿಗೆಗೆ ಸಮಾನರು. ಅಂತಹ ಮಿತ್ರರನ್ನು ಕೂಡಲೇ ಬಿಡಬೇಕು.

ಪ್ರತ್ಯಕ್ಷದಲ್ಲಿ ಹಿತರಂತೆ ವರ್ತಿಸಿ, ಬೆನ್ನಿಗೆ ಚೂರಿ ಹಾಕುವ ಕೆಲಸ ಮಾಡುವ ಜನರು ಬಹಳ ಅಪಾಯಕಾರಿಯಾದವರು. ಅವರನ್ನು ಸ್ವಲ್ಪವೂ ನಂಬಬಾರದು. ಗಡಿಗೆಯಲ್ಲಿ ಮೇಲೆ ಮಾತ್ರ ಹಾಲು ತುಂಬಿಸಿದ್ದರೆ ಒಳಗಿರುವ ವಿಷ ಗೊತ್ತಾಗುವುದಿಲ್ಲ. ಅದನ್ನು ಪರೀಕ್ಷೆ ಮಾಡಿಯೇ ತಿಳಿಯಬೇಕು. ಮಿತ್ರರನ್ನು ಹಾಗೆ ಪರೀಕ್ಷೆಮಾಡಿ ಸ್ವೀಕರಿಸಬೇಕು. ।।೫।।

न विश्वसेत् कुमित्रे च मित्रे चाऽपि न विश्वसेत्।
कदाचित् कुपितं मित्रं सर्वं गुह्यं प्रकाशयेत्।।

ನಿಜವಾದ ಮಿತ್ರನಲ್ಲದವನಲ್ಲಿ ವಿಶ್ವಾಸವನ್ನು ಇಡಬಾರದು. ಮಿತ್ರನಾದವನಲ್ಲಿಯೂ ಅತಿಯಾದ ವಿಶ್ವಾಸವನ್ನು ಇಟ್ಟು ತಮ್ಮ ರಹಸ್ಯಗಳನ್ನೆಲ್ಲ ಅವನಿಗೆ ಹೇಳಿಬಿಡಬಾರದು. ಅಂತಹ ಮಿತ್ರನು ಮುಂದೆ ಯಾವುದಾದರೂ ಸಂದರ್ಭದಲ್ಲಿ ಕೋಪಗೊಂಡರೆ ತನಗೆ ತಿಳಿದ ರಹಸ್ಯಗಳನ್ನೆಲ್ಲ ಪ್ರಕಾಶಪಡಿಸಿ ಗೆಳೆಯನನ್ನು ಅವಮಾನ ಮತ್ತು ಹಿಂಸೆಗೆ ಗುರಿಪಡಿಸಬಹುದು.

ಮಿತ್ರನಾಗಲು ಯೋಗ್ಯನಲ್ಲದ ವ್ಯಕ್ತಿಯಲ್ಲಿ ಸಾಮಾನ್ಯವಾಗಿ ಯಾರೂ ತುಂಬು ವಿಶ್ವಾಸವನ್ನು ಇಡುವುದಿಲ್ಲ. ಆದರೆ ಮಿತ್ರನೆಂದು ನಾವು ಭಾವಿಸಿಕೊಂಡಿರುವ ವ್ಯಕ್ತಿಯನ್ನು ನಂಬಿಬಿಡುತ್ತೇವೆ. ಮಾತನಾಡುತ್ತ ಅವನೊಡನೆ ನಮ್ಮ ರಹಸ್ಯವಿಷಯಗಳನ್ನು ಹೇಳಿಬಿಡಬಹುದು. ಅವನು ಸದಾಕಾಲವೂ ಮಿತ್ರನಾಗಿಯೇ ಮುಂದುವರಿಯದಿರಬಹುದು. ಮುಂದೆ ಯಾವಾಗಲಾದರೂ ಪರಸ್ಪರ ಮನಸ್ತಾಪವುಂಟಾದರೆ, ಅವನು ತನ್ನ ಮಿತ್ರನಾಗಿದ್ದವನ ಕುಂದುಕೊರತೆಗಳನ್ನು ಪ್ರಕಟಪಡಿಸಿ, ತನ್ನ ಪ್ರಯೋಜನವನ್ನು ಸಾಧಿಸಿಕೊಳ್ಳುವ ಸಾಧ್ಯತೆಯಿರುತ್ತದೆ.॥೬॥

मनसा चिन्तितं कार्यं वाचा नैव प्रकाशयेत्।
मन्त्रेण रक्षयेद् गूढं कार्ये चाऽपि नियोजयेत्॥

ಒಂದು ಕೆಲಸವನ್ನು ಮಾಡಬೇಕೆಂದು ಯೋಚಿಸಿದರೆ, ಕೆಲಸವಾಗುವ ಮೊದಲೇ ಅದನ್ನು ಎಲ್ಲರಲ್ಲಿಯೂ ಹೇಳಿಕೊಂಡು ಬರಬಾರದು. ಕೆಲಸಕ್ಕೆ ಬೇಕಾದ ಮಂತ್ರಾಲೋಚನೆ, ಸಲಹೆಗಳನ್ನು ಪಡೆಯಬೇಕು. ಆದರೆ ರಹಸ್ಯವನ್ನು ಹೊರಗೆಡಹಬಾರದು. ಸರಿಯಾದ ಸಲಹೆಗಳನ್ನು ವಿಚಾರಮಾಡಿ ಕೆಲಸದಲ್ಲಿ ಯೋಚಿಸಿ ಕಾರ್ಯಸಿದ್ಧಿಯನ್ನು ಪಡೆಯಬೇಕು.

ಒಂದು ಕೆಲಸವನ್ನು ಮಾಡಬೇಕಾದರೆ ಅದರ ಬಗ್ಗೆ ಮನಸ್ಸಿನಲ್ಲಿ ವಿಚಾರಮಾಡುತ್ತೇವೆ. ಆ ಘಟ್ಟದಲ್ಲಿಯೇ ಅದನ್ನು ಬಹಿರಂಗ ಪಡಿಸಿದರೆ ಕೆಲಸಕ್ಕೆ ಅಡ್ಡಿಯನ್ನು ಮಾಡುವವರು, ಮನಬಂದಂತೆ ಸಲಹೆ ಕೊಡುವವರು ಮುಂತಾದವರಿಗೆ ಅನುಕೂಲವಾಗುತ್ತದೆ. ಉದ್ದೇಶವನ್ನು ಮನಸ್ಸಿನಲ್ಲಿಯೇ ಇಟ್ಟುಕೊಂಡು ಸರಿಯಾದವರಲ್ಲಿ ಮಂತ್ರಾಲೋಚನೆ ಮಾಡಿ, ಸಮಯಕ್ಕೆ ತಕ್ಕಂತೆ ಉತ್ತಮ ಸಲಹೆಗಳನ್ನು ಕಾರ್ಯದಲ್ಲಿ ಯೋಚಿಸಿದರೆ ಉತ್ತಮ ಫಲಿತಾಂಶವನ್ನು ಪಡೆಯಬಹುದು. ॥೭॥

कष्टं च खलु मूर्खत्वं कष्टं च खलु यौवनम्।
कष्टं तु कष्टतरं चैव परगेहनिवासनम्॥

ಮೂರ್ಖನಾಗಿರುವುದು ಬಹಳ ಕಷ್ಟದ ವಿಷಯ. ಯೌವನದಲ್ಲಿ ಯುಕ್ತಾಯುಕ್ತಾ ವಿವೇಚನೆಯಿರುವುದಿಲ್ಲವಾಗಿ ಅದು ಮನುಷ್ಯನ ಜೀವನದ ಕಷ್ಟದ ಕಾಲವಾಗಿದೆ. ಇನ್ನೊಬ್ಬರ ಮನೆಯಲ್ಲಿ ವಾಸಮಾಡುವುದಂತೂ ಅತ್ಯಂತ ಕಠಿನವಾದುದು.

ಮೂರ್ಖತನವೆಂಬುದು ಅತ್ಯಂತ ಕಷ್ಟದ ಅವಸ್ಥೆ. ಅವನು ಎಲ್ಲರಿಂದಲೂ ಅಪಹಾಸ್ಯಕ್ಕೆ ಪಾತ್ರನಾಗಬೇಕಾಗುತ್ತದೆ. ಯೌವನದ ದಿನಗಳಲ್ಲಿಯೂ ವಿಪರೀತ ಶಕ್ತಿ ಮತ್ತು

ಉತ್ಸಾಹ ಇರುವುದರಿಂದ ಜನರು ಪೂರ್ವಾಪರ ವಿವೇಚನೆಯಿಲ್ಲದೆ ಕೆಲಸಗಳಿಗೆ ಕೈಹಾಕುತ್ತಾರೆ ಆದ್ದರಿಂದ ಯೌವನವೆಂಬುದು ಕಷ್ಟದ ಕಾಲ. ಇವೆರಡಕ್ಕಿಂತಲೂ ಕಠಿನವಾದುದೆಂದರೆ ಇನ್ನೊಬ್ಬರ ಮನೆಯಲ್ಲಿ ವಾಸಮಾಡಬೇಕಾದ ಸ್ಥಿತಿ. ಅಲ್ಲಿ ಸ್ವಾತಂತ್ರ್ಯವಾಗಲೀ, ಪ್ರೀತಿಯ ವಾತಾವರಣವಾಗಲೀ ಮನೆಯವರಿಗೆ ಗೌರವವಾಗಲೀ ಇರುವುದಿಲ್ಲ. ಅಂತಹ ಕಡೆಯಿರುವುದು ಮುಳ್ಳಿನ ಮೇಲೆ ಇದ್ದಂತೆ. ।।೮।।

**शैले शैले न माणिक्यं मौक्तिकं न गजे गजे।**
**साधवो न हि सर्वत्र चन्दनं न वने वने॥**

ಪ್ರತಿ ಪರ್ವತದಲ್ಲಿಯೂ ಮಾಣಿಕ್ಯವು ದೊರಕುವುದಿಲ್ಲ. ಪ್ರತಿ ಆನೆಯ ಹಣೆಯಲ್ಲಿ ಮುತ್ತು ಇರುವುದಿಲ್ಲ. ಸಾಧುಗಳು ಎಲ್ಲ ಕಡೆಗಳಲ್ಲಿ ಇರುವುದಿಲ್ಲ. ಎಲ್ಲ ಕಾಡುಗಳಲ್ಲಿಯೂ ಗಂಧದ ಮರವು ಬೆಳೆಯುವುದಿಲ್ಲ.

ಪರ್ವತಗಳಲ್ಲಿ ಅನೇಕ ರೀತಿಯ ಖನಿಜಗಳು ದೊರೆಯಬಹುದು. ಆದರೆ ಮಾಣಿಕ್ಯದಂತಹ ಅಮೂಲ್ಯವಾದ ವಸ್ತುಗಳು ಕೆಲವು ಕಡೆಗಳಲ್ಲಿ ಮಾತ್ರ ಸಿಗಬಹುದು. ಹಿಂದೆ ಕೆಲವು ಆನೆಗಳಲ್ಲಿ ಮಸ್ತಕಗಳಲ್ಲಿ ಮುತ್ತು ಇರುತ್ತದೆಂದು ಜನರಲ್ಲಿ ನಂಬಿಕೆಯಿತ್ತು. ಆದರೆ ಎಲ್ಲ ಆನೆಗಳಲ್ಲಿಯೂ ಮುತ್ತು ಇರುವುದಿಲ್ಲ ಹಾಗೆಯೇ ಎಲ್ಲರೂ ಸತ್ಪುರುಷರಾಗಿರಲು ಸಾಧ್ಯವಿಲ್ಲ. ಎಷ್ಟೋ ಲಕ್ಷಾಂತರ ಜನಗಳಲ್ಲಿ ಒಬ್ಬ ನಿಜವಾದ ಸಾಧುವು ಇರಬಹುದು. ಕಾಡುಗಳಲ್ಲಿ ಬೇರೆ ಬೇಕಾದಷ್ಟು ವೃಕ್ಷಗಳಿರಬಹುದು, ಗಂಧದ ಮರದಂತೆ ಅಮೂಲ್ಯವಾದ ಮರಗಳು ಬಹಳ ಇರುವುದಿಲ್ಲ. ಅಂದರೆ ಅನರ್ಘ್ಯವಾದ ವಸ್ತುಗಳು ಪ್ರಪಂಚದಲ್ಲಿ ಬಹಳ ವಿರಳವಾಗಿರುತ್ತವೆ. ।।೯।।

**पुत्राश्च विविधैः शीलैर्नियोज्याः सततं बुधैः।**
**नीतिज्ञाः शीलसम्पन्ना भवन्ति कुलपूजिताः॥**

ಬುದ್ಧಿವಂತರಾದವರು ತಮ್ಮ ಮಕ್ಕಳಿಗೆ ಯಾವಾಗಲೂ ಬೇರೆ ಬೇರೆ ರೀತಿಯ ಒಳ್ಳೆಯ ಗುಣ ಮತ್ತು ನಡತೆಗಳನ್ನು ಉಪದೇಶಿಸಬೇಕು. ನೀತಿಶಾಸ್ತ್ರವನ್ನು ತಿಳಿದು ಆಚರಿಸುವ ಮತ್ತು ಒಳ್ಳೆಯ ನಡತೆಯಿಂದ ಕೂಡಿದ ಆ ಮಕ್ಕಳು ತಮ್ಮ ವಂಶಕ್ಕೆ ಗೌರವವನ್ನು ತರುತ್ತಾರೆ.

ಮಕ್ಕಳಿಗೆ ಚಿಕ್ಕ ವಯಸ್ಸಿನಲ್ಲಿ ತಂದೆತಾಯಿಗಳು ಒಳ್ಳೆಯ ನಡತೆಯನ್ನು ಕಲಿಸಿಕೊಡಬೇಕು. ಈ ರೀತಿ ಉತ್ತಮವಾದ ಶೀಲ ಮತ್ತು ನೀತಿಯನ್ನು ರೂಢಿಸಿಕೊಂಡ ಮಕ್ಕಳು ಮುಂದೆ ಸತ್ಪ್ರಜೆಗಳಾಗಿ ಎಲ್ಲರಿಂದಲೂ ಗೌರವಕ್ಕೆ ಪಾತ್ರರಾಗುತ್ತಾರೆ. ಅಂತಹ

ಮಕ್ಕಳಿಂದ ಕುಲವು ಕೀರ್ತಿಸಂಪನ್ನವಾಗುತ್ತದೆ. ।।೧೦।।

माता शत्रु पिता वैरी येन बालो न पाठितः।
न शोभते सभामध्ये हंसमध्ये बको यथा।।

ಯಾವ ತಂದೆತಾಯಿಗಳು ಮಕ್ಕಳಿಗೆ ಸರಿಯಾದ ವಿದ್ಯಾಭ್ಯಾಸವನ್ನು ಕೊಡಿಸುವುದಿಲ್ಲವೋ ಅಂತಹ ತಂದೆತಾಯಿಯರೇ ಆ ಮಕ್ಕಳಿಗೆ ಶತ್ರುಗಳು. ಸರಿಯಾದ ಶಿಕ್ಷಣವಿಲ್ಲದ ಆ ಮಕ್ಕಳು ಹಂಸಗಳ ಮಧ್ಯೆ ಇರುವ ಬಕಪಕ್ಷಿಯ ಹಾಗೆ ವಿದ್ವಾಂಸರು ಇರುವ ಸಭೆಗಳಲ್ಲಿ ಶೋಭಿಸುವುದಿಲ್ಲ.

ಮಕ್ಕಳು ಚಿಕ್ಕವರಾಗಿರುವಾಗ ಅವರನ್ನು ಸರಿಯಾದ ರೀತಿಯಲ್ಲಿ ತಿದ್ದಿ, ಒಳ್ಳೆಯ ಶಿಕ್ಷಣ ಕೊಡಿಸುವುದು ಮಾತಾಪಿತೃಗಳ ಕರ್ತವ್ಯವಾಗಿದೆ. ಈ ರೀತಿ ಮಾಡದಿದ್ದರೆ ಅವರೇ ತಮ್ಮ ಮಕ್ಕಳಿಗೆ ಶತ್ರುಗಳೆನಿಸುತ್ತಾರೆ. ಅಂತಹ ಮಕ್ಕಳು ಸಭೆಗಳಲ್ಲಿ ನಡೆದುಕೊಳ್ಳಬೇಕಾದ ರೀತಿ ನೀತಿ ಮತ್ತು ವಿದ್ವಾಂಸರಿಗೆ ಸರಿಯಾಗಿ ನಿಲ್ಲಬಲ್ಲ ಪಾಂಡಿತ್ಯವಿಲ್ಲದೆ ಅವಮಾನಕ್ಕೆ ಗುರಿಯಾಗುತ್ತಾರೆ. ಹಂಸಗಳ ಮಧ್ಯದಲ್ಲಿ ಬಕಪಕ್ಷಿಯೊಂದು ಇದ್ದರೆ, ಎಲ್ಲರೂ ಹಂಸಗಳ ಸೌಂದರ್ಯ ಮತ್ತು ಗಾಂಭೀರ್ಯವನ್ನು ಹೊಗಳಿ, ಬಕಪಕ್ಷಿಯನ್ನು ಹಾಸ್ಯಮಾಡುತ್ತಾರೆ. ಹಾಗೆಯೇ ಪಂಡಿತರ ಮಧ್ಯೆ ಇರುವ ಮೂರ್ಖನು ಅಪಮಾನಿತನಾಗುತ್ತಾನೆ. ಈ ಸ್ಥಿತಿಗೆ ಅವನ ತಂದೆತಾಯಿಗಳೇ ಕಾರಣರು.।।೧೧।।

लालनाद् बहवो दोषास्ताडनाद् बहवो गुणाः।
तस्मात्पुत्रं च शिष्यं च ताडयेन्न तु लालयेत्।।

ಮಕ್ಕಳನ್ನು ಅತಿಯಾಗಿ ಮುದ್ದಿಸುವುದರಿಂದ, ಮಕ್ಕಳು ಹಟಮಾರಿತನ ಮುಂತಾದ ದುರ್ಗುಣಗಳನ್ನು ಕಲಿಯುತ್ತಾರೆ. ತಪ್ಪು ಮಾಡಿದಾಗ ಮಕ್ಕಳನ್ನು ಶಿಕ್ಷಿಸಬೇಕಾಗುತ್ತದೆ. ಶಿಕ್ಷೆಗೆ ಹೆದರಿ ಮಕ್ಕಳು ಹಿರಿಯರಿಗೆ ವಿಧೇಯರಾಗಿ ನಡೆದುಕೊಂಡು ಸದ್ಗುಣಗಳನ್ನು ಕಲಿಯುತ್ತಾರೆ. ಆದ್ದರಿಂದ ಮಕ್ಕಳನ್ನಾಗಲಿ, ಶಿಷ್ಯರನ್ನಾಗಲಿ ಶಿಕ್ಷಿಸಬೇಕೇ ಹೊರತು ಅತಿಯಾಗಿ ಮುದ್ದಿಸಬಾರದು.

ತಾಯಿತಂದೆಯರಿಗೆ ತಮ್ಮ ಮಕ್ಕಳ ಮೇಲೆ ಬಹಳ ಮಮತೆ ಇರುತ್ತದೆ. ಹಾಗೆಂದ ಮಾತ್ರಕ್ಕೆ ಮಗು ಹೇಳಿದುದನ್ನೆಲ್ಲ ನಡೆಸಿಕೊಡುವುದು ತಪ್ಪು. ಮಗುವಿಗೆ ತಿಳಿಯದ ವಯಸ್ಸು. ಅದು ತನಗೆ ಬೇಕೆನಿಸುದುದನ್ನೆಲ್ಲ ಕೇಳಿ ಹಟಮಾಡಬಹುದು. ಆದರೆ ಯಾವುದು ಸೂಕ್ತ, ಯಾವುದು ಅಯುಕ್ತ ಎಂದು ತಿಳಿದಿರುವ ಹಿರಿಯರು ಮಗುವಿಗೆ ಬುದ್ಧಿ ಹೇಳಬೇಕು. ಕೆಲವು ಸಲ ಶಿಕ್ಷೆಯನ್ನು ಕೊಡಬೇಕಾಗುತ್ತದೆ. ಆಗ ಮಗುವಿಗೆ

ಯಾವುದನ್ನು ಕೇಳಿದರೆ ಶಿಕ್ಷೆಯಾಗುತ್ತದೆ, ಯಾವುದು ತಪ್ಪೆಂದು ಮನವರಿಕೆಯಾಗುತ್ತದೆ. ಕ್ರಮವಾಗಿ ಅದು ವಿಧೇಯತೆ, ವಿನಯ ಮುಂತಾದ ಒಳ್ಳೆಯ ಗುಣಗಳನ್ನು ರೂಢಿಸಿಕೊಂಡು ಉತ್ತಮ ವ್ಯಕ್ತಿಯಾಗಲು ಸಾಧ್ಯ. ಆದ್ದರಿಂದ ತಪ್ಪು ಮಾಡಿದಾಗ ಮಗುವನ್ನು ಶಿಕ್ಷಿಸಲು ಹಿಂಜರಿಯಬಾರದು. ಇಲ್ಲದಿದ್ದರೆ ನಾವೇ ನಮ್ಮ ಮಕ್ಕಳಿಗೆ ಶತ್ರುಗಳಾಗುತ್ತೇವೆ.

ಗುರುವು ಶಿಷ್ಯನ ವಿಷಯದಲ್ಲಿಯೂ ಹಾಗೆಯೇ ಕೆಲವು ಸಲ ಕಠಿನವಾಗಿ ವರ್ತಿಸಬೇಕಾಗುತ್ತದೆ. ಇದರಿಂದ ಶಿಷ್ಯನು ಶಿಸ್ತು, ಸಂಯಮ ಮುಂತಾದ ಗುಣಗಳನ್ನೂ, ಉತ್ತಮವಾದ ವಿದ್ಯೆಯನ್ನೂ ಕಲಿಯಲು ಅನುಕೂಲವಾಗುತ್ತದೆ. ||೧೨||

**श्लोकेन वा तदर्धेन पादेनैकाक्षरेण वा।**
**अबन्ध्यं दिवसं कुर्याद् दानाध्ययन कर्मभिः॥**

ವೇದಾಧ್ಯಯನ ಅಂದಿನ ಕಾಲದಲ್ಲಿ ಅವಶ್ಯ ಕರ್ಮವಾಗಿತ್ತು. ಪ್ರತಿದಿನವೂ ಒಂದು ಶ್ಲೋಕವನ್ನಾಗಲೀ, ಅರ್ಧಶ್ಲೋಕವನ್ನಾಗಲೀ, ಕಾಲುಭಾಗ (ಒಂದು ಪಾದ)ವನ್ನಾಗಲೀ, ಕಡೆಗೆ ಒಂದು ಅಕ್ಷರವನ್ನಾಗಲೀ ಪಠಿಸಲೇ ಬೇಕೆಂದು ಆಚಾರ್ಯರು ಹೇಳುತ್ತಾರೆ. 'ಸ್ವಾಧ್ಯಾಯ ಪ್ರವಚನಾಭ್ಯಾಂ ನ ಪ್ರಮದಿತವ್ಯಂ' ಎಂಬ ತೈತ್ತಿರೀಯಕದ ಮಂತ್ರವೂ ಇದನ್ನೇ ಹೇಳುತ್ತದೆ. ಹೀಗೆ ಅಧ್ಯಯನ ಮತ್ತು ದಾನಕರ್ಮಗಳಿಂದ ದಿನವು ವ್ಯರ್ಥವಾಗದಂತೆ ನೋಡಿಕೊಳ್ಳಬೇಕು.

ಒಂದು ದಿನ ಅಧ್ಯಯನ ತಪ್ಪಿದರೂ ಮತ್ತು ಒಂದು ದಿನ ದಾನಕರ್ಮದಿಂದ ವಂಚಿತನಾದರೂ ಆ ದಿನವು ವ್ಯರ್ಥವಾದಂತೆಯೇ ಸರಿ. ಹಾಗೆ ವ್ಯರ್ಥವಾಗಲು ಬಿಡದೆ ಪ್ರತಿದಿನವೂ ತಮ್ಮ ನಿತ್ಯ ನೈಮಿತ್ತಕ ಕರ್ಮಗಳನ್ನು ತಪ್ಪದೇ ಆಚರಿಸಬೇಕು. ||೧೩||

**कान्तावियोगः स्वजनापमानः ऋणस्य शेषः कुनृपस्य सेवा।**
**दरिद्रभावो विषमा सभा च विनाग्निनैते प्रदहन्ति कायम्॥**

ಪತ್ನಿಯ ವಿಯೋಗ, ಸ್ವಜನರಲ್ಲಿ ಅಪಮಾನ, ಸಾಲದ ಹೊರೆ, ದುಷ್ಟನಾದ ರಾಜನ ಸೇವೆ, ಬಡತನ, ಸಮಾನರಿಲ್ಲದ ಸಭೆ ಇವುಗಳೆಲ್ಲವೂ ಬೆಂಕಿಯಲ್ಲದಿದ್ದರೂ ಬೆಂಕಿಯಂತೆ ಶರೀರವನ್ನು ಸುಡುತ್ತವೆ.

ಪತ್ನಿಯು ಪತಿಗೆ ಅತ್ಯಂತ ಆಪ್ತಳು. ಅವಳ ವಿಯೋಗವು ಅತ್ಯಂತ ದುಃಖದಾಯಕವಾದುದು. ಬಂಧುಗಳು ತಿರಸ್ಕಾರದಿಂದ ಕಂಡರೆ ಆ ದುಃಖವು ಮನಸ್ಸನ್ನೇ ದಹಿಸುತ್ತದೆ. ಸಾಲವೆಂಬುದು ಶೂಲವಿದ್ದಂತೆ. ಸಾಲದ ಸ್ವಲ್ಪ ಭಾಗವು ಉಳಿದರೂ ಬಡ್ಡಿ

ಸೇರುತ್ತ ಹೋಗಿ ದೊಡ್ಡ ಹೊರೆಯಾಗುತ್ತದೆ. ಋಣವೆಂಬ ಪದವನ್ನು ಇನ್ನೊಬ್ಬರ ಉಪಕಾರ ಮುಂತಾದ ಹಂಗಿನ ಅರ್ಥದಲ್ಲಿ ತೆಗೆದುಕೊಂಡರೂ ಈ ಋಣವು ಸಂಚಿತವಾಗುತ್ತ ಹೋಗುತ್ತದೆ. ಅಧಿಕಾರಿ ದುಷ್ಟನಾದರೆ ತನ್ನ ಕೈ ಕೆಳಗಿನವರು ಮಾಡುವ ಎಲ್ಲ ಕೆಲಸಗಳಲ್ಲಿಯೂ ತಪ್ಪನ್ನೇ ಕಾಣುತ್ತಾನೆ. ಅಂತಹವರ ಸೇವೆ ಮಾಡಿ ಅವರನ್ನು ತೃಪ್ತಿಗೊಳಿಸುವುದು ಅಸಾಧ್ಯ. ಬಡತನವಂತೂ ಬಹಳ ದುಃಖದಾಯಕವಾದ ಸ್ಥಿತಿ. ದೈನಂದಿನ ಅವಶ್ಯಕತೆಗಳ ಅಭಾವದ ಜೊತೆಗೆ ಇದು ಬಂಧುಗಳ ಮಧ್ಯೆ ಅನಾದರವನ್ನು ಉಂಟುಮಾಡುತ್ತದೆ. ಯಾವುದೇ ಸಭೆ ಮತ್ತು ಸಮಾರಂಭಗಳಲ್ಲಿ ಸಮಾನಶೀಲ ವ್ಯಸನವುಳ್ಳವರು ಇಲ್ಲದಿದ್ದರೆ ನಾವು ಒಂಟಿತನ, ಬೇಸರ ಮತ್ತು ಕೆಲವು ಸಲ ಅಪಮಾನವನ್ನು ಕೂಡ ಸಹಿಸಬೇಕಾಗುತ್ತದೆ. ಆದುದರಿಂದಲೇ ಇವೆಲ್ಲವೂ ಬೆಂಕಿಯಂತೆ ದಹಿಸುವ ಅಂಶಗಳೆಂದು ಆಚಾರ್ಯರು ಹೇಳಿರುತ್ತಾರೆ.॥೧೪।

नदीतीरे च ये वृक्षाः परगेहेषु कामिनी।
मन्त्रिहीनाश्च राजानः शीघ्रं नश्यन्त्यसंशयम्॥

ನದಿಯ ತೀರದಲ್ಲಿ ಬೆಳೆದಿರುವ ಮರಗಳು, ಇನ್ನೊಬ್ಬರ ಮನೆಯಲ್ಲಿ ವಾಸಮಾಡುತ್ತಿರುವ ಸ್ತ್ರೀ, ಮಂತ್ರಾಲೋಚನೆಯಿಲ್ಲದ ರಾಜರು ನಿಃಸಂಶಯವಾಗಿ ಬೇಗನೆ ನಾಶಹೊಂದುತ್ತಾರೆ. ನದಿಯ ದಡದಲ್ಲಿ ಬೆಳೆದಿರುವ ಮರಗಳು, ನದಿಯಲ್ಲಿ ಪ್ರವಾಹ ಬಂದರೆ ಬುಡ ಸಡಿಲಗೊಂಡು ಬಿದ್ದು ಹೋಗುವುವು. ಪರಗೃಹದಲ್ಲಿ ವಾಸಮಾಡುವ ಸುಂದರಳಾದ ಸ್ತ್ರೀಗೆ ಮನೆಯವರಿಂದ ಆಪತ್ತು ತಪ್ಪಿದುದಲ್ಲ.ಹಾಗೆಯೇ ರಾಜರು ಯಾವ ಕೆಲಸವನ್ನು ಮಾಡಬೇಕಾದರೂ ಬುದ್ಧಿವಂತರಾದ ಮಂತ್ರಿಗಳ ಜೊತೆ ಸಮಾಲೋಚನೆ ಮಾಡಿ ಮುಂದುವರಿಯಬೇಕು. ಇಲ್ಲದಿದ್ದರೆ ಅಂತಹ ಕೆಲಸಗಳು ಊರ್ಜಿತವಾಗುವುದಿಲ್ಲ. ಈ ಎಲ್ಲವೂ ಆತಂಕಕಾರಿಯಾದ ಸ್ಥಿತಿಯಲ್ಲಿಯೇ ಇರುವುದರಿಂದ ಬೇಗನೆ ನಾಶಹೊಂದಬೇಕಾಗುವುದು.॥೧೫॥

बलं विद्या च विप्राणां राज्ञां सैन्यं बलं तथा।
बलं वित्तं च वैश्यानां शूद्राणां परिचर्यकम्॥

ಬ್ರಾಹ್ಮಣರಿಗೆ ವಿದ್ಯೆಯೇ ಬಲವು. ರಾಜರಿಗೆ ಸೈನ್ಯವೇ ಬಲವು. ವೈಶ್ಯರಿಗೆ ಐಶ್ವರ್ಯವೇ ಬಲವಾದರೆ ಶೂದ್ರನಿಗೆ ಸೇವೆ ಮಾಡುವುದೇ ಬಲ.

ಈ ಶ್ಲೋಕದಲ್ಲಿ ಆಚಾರ್ಯರು ಚಾತುರ್ವರ್ಣಗಳ ಕರ್ತವ್ಯವನ್ನು ನೆನಪಿಸುತ್ತಿದ್ದಾರೆ. ಬ್ರಾಹ್ಮಣನಾದವನು ಒಳ್ಳೆಯ ವಿದ್ಯಾಭ್ಯಾಸವನ್ನು ಮಾಡಿದರೆ ಅವನಿಗೆ ಸಮಾಜದಲ್ಲಿ

ಗೌರವವು ದೊರೆಯುತ್ತದೆ. ಅವನು ತನ್ನ ವಿದ್ಯೆಯ ಬಲದಿಂದ ಎಲ್ಲಿ ಬೇಕಾದರೂ ಜೀವನ ನಡೆಸಬಲ್ಲನು. ರಾಜನು ಸೈನ್ಯದ ಸಹಾಯದಿಂದ ಶತ್ರುಗಳಿಂದ ರಕ್ಷಿಸಿ, ಸಮರ್ಥವಾಗಿ ರಾಜ್ಯಭಾರ ಮಾಡಬಲ್ಲನು. ಪ್ರಜೆಗಳೂ ಸುರಕ್ಷಿತರೂ, ಸಂತುಷ್ಟರೂ ಆಗಿರುತ್ತಾರೆ. ವೈಶ್ಯನಲ್ಲಿ ಸಾಕಷ್ಟು ಧನವಿದ್ದರೆ ಅದನ್ನು ತೊಡಗಿಸಿ ವ್ಯಾಪಾರಮಾಡಿ ಅಭಿವೃದ್ಧಿಗೆ ಬರಬಲ್ಲನು. ಇದಾವುದನ್ನು ಅರಿಯದ ಶೂದ್ರನು ಸೇವಾವೃತ್ತಿಯನ್ನು ಅನುಸರಿಸಿ ತನ್ನ ಒಡೆಯನನ್ನು ಮೆಚ್ಚಿಸಿದರೆ ಅವನು ಕೊಡುವ ಧನದಿಂದ ತೃಪ್ತನಾಗಿ ಜೀವನ ನಡೆಸಬಹುದು. ||೧೬||

निर्धनं पुरुषं वेश्या प्रजा भग्नं नृपं त्यजेत्।
खगा वीतफलं वृक्षं भुक्त्वा चाऽभ्यागता गृहम्॥

ವೇಶ್ಯೆಯು ಧನಹೀನನಾದ ಪುರುಷನನ್ನು ತ್ಯಜಿಸುವಳು. ಪ್ರಜೆಗಳು ಸೋತು ಭಗ್ನನಾದ ರಾಜನನ್ನು ತ್ಯಜಿಸುತ್ತಾರೆ. ಪಕ್ಷಿಗಳು ಹಣ್ಣು ಇಲ್ಲದ ಮರಗಳನ್ನು ತ್ಯಜಿಸುತ್ತವೆ. ಅತಿಥಿಗಳು ಭೋಜನದ ನಂತರ ಆ ಮನೆಯನ್ನು ಬಿಟ್ಟು ಹೊರಟುಹೋಗುತ್ತಾರೆ.

ಪ್ರತಿಯೊಬ್ಬರೂ ತಮ್ಮ ಪ್ರಯೋಜನಕ್ಕಾಗಿಯೇ ಇನ್ನೊಬ್ಬರನ್ನು ಆಶ್ರಯಿಸುತ್ತಾರೆಂಬ ಸತ್ಯಾಂಶವನ್ನು ಆಚಾರ್ಯರು ಈ ಶ್ಲೋಕದಲ್ಲಿ ತೋರಿಸಿಕೊಟ್ಟಿರುತ್ತಾರೆ. ಧನವಂತನಾದ ಪುರುಷನನ್ನು ವೇಶ್ಯೆಯು ಪ್ರೀತಿಸುವಂತೆ ನಟಿಸಿ, ಅವನಲ್ಲಿರುವ ಹಣವನ್ನೆಲ್ಲ ದೋಚುತ್ತಾಳೆ. ನಂತರ ಅವನನ್ನು ದೂರಸರಿಸಿ ಮತ್ತೊಬ್ಬ ಶ್ರೀಮಂತನನ್ನು ಆಶ್ರಯಿಸುತ್ತಾಳೆ. ಪ್ರಜೆಗಳೂ ಕೂಡ ಸೋತು ಭಂಗಹೊಂದಿದ ರಾಜನು ತಮ್ಮನ್ನು ಕಾಪಾಡಲಾರನೆಂದು ತಿಳಿದು ಬಲಿಷ್ಠನಾದ ರಾಜನನ್ನು ಆಶ್ರಯಿಸುತ್ತಾರೆ. ಹಣ್ಣು ತುಂಬಿದ್ದಾಗ ಮರವನ್ನು ಅನೇಕ ಪಕ್ಷಿಗಳು ಆಶ್ರಯಿಸುತ್ತವೆ. ತಮಗೆ ಪ್ರಯೋಜನವಿಲ್ಲದಾಗ ಬಿಟ್ಟು ಹೋಗುತ್ತವೆ. ಹಾಗೆಯೇ ಅತಿಥಿಗಳು ಊಟದ ನಂತರ ಹೊರಟು ಹೋಗುತ್ತಾರೆ. ಇಂತಹ ಜನರಿಂದ ಪ್ರೀತಿ ಪರೋಪಕಾರಗಳನ್ನು ಬಯಸುವುದು ವ್ಯರ್ಥ. ||೧೭||

गृहीत्वा दक्षिणां विप्रास्त्यजन्ति यजमानकम्।
प्राप्तविद्या गुरुं शिष्या दग्धाऽरण्यं मृगास्तथा॥

ಹಿಂದಿನ ಶ್ಲೋಕದ ಅರ್ಥವನ್ನೇ ಆಚಾರ್ಯರು ಈ ಶ್ಲೋಕದಲ್ಲಿ ಮುಂದುವರಿಸಿರುತ್ತಾರೆ. ಬ್ರಾಹ್ಮಣರು ಯಜಮಾನನಿಂದ ದಕ್ಷಿಣೆಯನ್ನು ಸ್ವೀಕರಿಸಿ ಅವನಿಗಾಗಿ ಪೂಜಾದಿಗಳನ್ನು ನೆರವೇರಿಸುತ್ತಾರೆ. ತಮ್ಮ ಕೆಲಸವಾದನಂತರ ಅವರು

ಯಜಮಾನನ್ನು ಬಿಟ್ಟು ಹೊರಟುಹೋಗಿ ಪೂಜಾದಿಗಳನ್ನು ಮಾಡಿಸುವ ಮತ್ತೊಬ್ಬ ಯಜಮಾನನ ಬಳಿಗೆ ಹೋಗುತ್ತಾರೆ. ಶಿಷ್ಯರು ಗುರುಗಳ ಬಳಿ ವಿದ್ಯಾಭ್ಯಾಸಕ್ಕಾಗಿ ಬರುತ್ತಾರೆ. ತಮ್ಮ ಶಿಕ್ಷಣ ಪೂರ್ಣವಾಗುವವರೆಗೆ ಗುರುಗಳ ಆಜ್ಞೆಯನ್ನು ಪಾಲಿಸುತ್ತ ಇರುತ್ತಾರೆ. ವಿದ್ಯಾಭ್ಯಾಸವು ಮುಗಿದ ಕೂಡಲೇ ಮುಂದಿನ ಆಶ್ರಮಕ್ಕಾಗಿ ಅನುಜ್ಞೆ ಪಡೆದು ಹೊರಟುಹೋಗುತ್ತಾರೆ. ಕಾಳ್ಗಿಚ್ಚಿನಿಂದ ಕಾಡು ಏನಾದರೂ ದಗ್ಧವಾಗಿ ಹೋದರೆ ಜೀವಂತವಾಗಿ ಉಳಿದ ಪ್ರಾಣಿಗಳಿಗೆ ಅಲ್ಲಿ ಜೀವಿಸಲು ಬೇಕಾದ ಆಹಾರಾದಿಗಳು ಸಿಕ್ಕುವುದಿಲ್ಲ. ಅವು ಅಂತಹ ಅರಣ್ಯವನ್ನು ತ್ಯಜಿಸಿ ಬೇರೆ ಕಡೆ ಹೋಗುತ್ತವೆ. ಹೀಗೆ ಎಲ್ಲರೂ ತಮಗೆ ಅನುಕೂಲವಾದ ಮತ್ತು ಅವಶ್ಯಕವಾದ ಕಡೆಗಳಲ್ಲಿ ಮಾತ್ರ ವಾಸ ಮಾಡಲು ಬಯಸುತ್ತಾರೆ. ||೧೮||

दुराचारी दुरदृष्टिर्दुराऽऽवासी च दुर्जनः।
यन्मैत्री क्रियते पुम्भिर्नरः शीघ्रं विनश्यति॥

ದುರ್ಜನನು ದುಷ್ಟವಾದ ಆಚಾರ, ಕೆಟ್ಟದಾದ ಅದೃಷ್ಟ ಮತ್ತು ದುಷ್ಟವಾದ ವಾಸಸ್ಥಾನಗಳನ್ನು ಹೊಂದಿರುತ್ತಾನೆ. ಇಂತಹವನೊಂದಿಗೆ ಸ್ನೇಹವನ್ನು ಮಾಡಿದ ಮನುಷ್ಯನು ಬೇಗನೆ ನಾಶ ಹೊಂದುತ್ತಾನೆ.

ದುಷ್ಟನಾದವನ ಆಚಾರ, ವ್ಯವಹಾರ, ವಾಸಸ್ಥಾನ ಮುಂತಾದವುಗಳೆಲ್ಲವೂ ಅವನಿಗೆ ತಕ್ಕಂತೆ ಕ್ರೂರವಾಗಿಯೇ ಇರುತ್ತವೆ. ಅಂತಹ ಜನರೊಂದಿಗೆ ಮೈತ್ರಿಯುಂಟಾದರೆ ಕ್ರಮವಾಗಿ ಅವನಲ್ಲಿಯೂ ದುರ್ವ್ಯವಹಾರಗಳು ಪ್ರಚೋದಿತವಾಗುತ್ತವೆ. ಇದರಿಂದ ಅವನು ಶೀಘ್ರವಾಗಿ ನಾಶ ಹೊಂದುತ್ತಾನೆ. ||೧೯||

समाने शोभते प्रीतिः राज्ञि सेवा च शोभते।
वाणिज्यं व्यवहारेषु दिव्या स्त्री शोभते गृहे॥

ಸಮಾನವಾದ ಶೀಲ, ಸ್ವಭಾವ, ಅಂತಸ್ತು ಇರುವವರಲ್ಲಿ ಉಂಟಾಗುವ ಗೆಳೆತನವು ಶೋಭೆಯನ್ನು ತರುತ್ತದೆ. ರಾಜನ ಸೇವೆಯೂ ಒಳಿತನ್ನು ಉಂಟುಮಾಡುತ್ತದೆ. ಅನೇಕ ರೀತಿಯ ವ್ಯವಹಾರಗಳಲ್ಲಿ ವ್ಯಾಪಾರವು ಉತ್ತಮವಾದ ಕಾಯಕವು. ಹಾಗೆಯೇ ಉತ್ತಮಳಾದ ಸ್ತ್ರೀಯು ಮನೆಗೆ ಶೋಭೆಯನ್ನುಂಟು ಮಾಡುತ್ತಾಳೆ.

ನಮಗಿಂತ ಉತ್ತಮರಾದವರಲ್ಲಿ ಅಥವಾ ಕೀಳಾದವರಲ್ಲಿ ಮಾಡಿದ ಸ್ನೇಹವು ಊರ್ಜಿತವಾಗುವುದಿಲ್ಲ. 'ಸಮಾನ ಶೀಲವ್ಯಸನೇಷು ಸಖ್ಯಂ' ಎಂದು ನೀತಿ ವಾಕ್ಯವಿದೆ. ರಾಜನ ಸೇವೆಯಿಂದ ಜೀವನ ಮಾಡಬೇಕಾದ ಸನ್ನಿವೇಶವು ಒದಗಿದರೆ

ಲಾಭದಾಯಕವಾದುದು. ರಾಜನು ಸೇವೆಗೆ ಅರ್ಹನಾದುದರಿಂದ ಅವನ ಸೇವೆಯು ಹೀನವೆನಿಸುವುದಿಲ್ಲ. ಸ್ವಂತವಾದ ಉದ್ದಿಮೆ ವ್ಯವಹಾರಗಳನ್ನು ನಡೆಸುವುದಾದರೆ ವ್ಯಾಪಾರವು ಉತ್ತಮವಾದುವೆಂದು ಆಚಾರ್ಯರ ಅಭಿಪ್ರಾಯ. ಉತ್ತಮಳಾದ ಸ್ತ್ರೀಯು ಮನೆಗೆ ಶೋಭೆಯೇ ಹೊರತು ಉಳಿದ ಯಾವುದೇ ಅಲಂಕಾರ ಐಶ್ವರ್ಯಗಳಲ್ಲ. 'ಗೃಹಿಣೀ ಗೃಹಮುಚ್ಯತೇ' ಎಂಬ ಉಕ್ತಿಯು ಪ್ರಸಿದ್ಧವಾದುದು. ॥೨೦॥

## ಅಧ್ಯಾಯದ ಸಾರಾಂಶ

ಆರಂಭದಲ್ಲಿ ಸ್ತ್ರೀಯರ ಬಗ್ಗೆ ಗಮನ ನೀಡಲಾಗಿದೆ. ಮನುಜ ಕುಲದಲ್ಲಿನ ವ್ಯಕ್ತಿಗಳಲ್ಲಿ ಗುಣ ದೋಷಗಳು ಕಂಡುಬರುತ್ತವೆ. ಕೆಲವು ವ್ಯಕ್ತಿಗಳು ಸಾಧನ ಸಂಪನ್ನರಾದರೂ ವಸ್ತುಗಳ ಭೋಗಿಸುವ ಕ್ಷಮತೆಯಿಂದ ವಂಚಿತರಾಗಿರುವರು ಅಥವಾ ಸವಿಯುವ ರಹಸ್ಯಗಳನ್ನರಿಯರು. ತಂದೆಯು ಮಗನಲ್ಲಿ ಹಾಗೂ ಮಗ ತಂದೆಗೆ ಪರಸ್ಪರ ಗೌರವದಿಂದ ವ್ಯವಹರಿಸಿದಲ್ಲಿ ಕುಟುಂಬಕ್ಕೆ ಸರ್ವದಾ ಸುಃಖ ಪ್ರಾಪ್ತಿಯಾಗುವುದು.

ಜಗತ್ತು ವೈವಿಧ್ಯಮಯ. ವ್ಯಕ್ತಿಗಳ ಮುಂದೆ ಬಣ್ಣಕಟ್ಟಿ ಆಕ್ಕರೆ ತೋರಿಸಿ ಹಿಂಬದಿಯಲ್ಲಿ ತೆಗಳುವರು. ಗೋಸುಂಬಿ ಪ್ರಕೃತಿ ಜನರಿಂದ ದೂರವಿರಲು ಆಚಾರ್ಯರು ಎಚ್ಚರಿಸುವರು. ಮನಸ್ಸಿನ ಕಲ್ಪನಾ ಲಹರಿಯಲ್ಲಿ ಬಂದ ಸುಪ್ತಯೋಜನೆ ಬಗ್ಗೆ ಬಯಲು ಮಾಡದಿರಿ. ಆಪ್ತಮಿತ್ರರಲ್ಲಿ ಕೂಡ ವಿಷಯ ವಿನಿಮಯ ಮಾಡದಿರಿ. ಮುಟ್ಠಾಳತನದಿಂದ ಕಷ್ಟ ಕಾರ್ಪಣ್ಯಗಳು ಸನ್ನಿಹಿತವಾಗುವುದು. ಅನ್ಯರ ನಿವಾಸ ಸ್ಥಾನದಲ್ಲಿ ಸ್ತ್ರೀ ಆಶ್ರಯ ಪಡೆಯುವುದು ತ್ರಾಸದಾಯಕ. ಉತ್ತಮ ವಸ್ತುಗಳು, ಶ್ರೇಷ್ಠರು ಮತ್ತು ಸಜ್ಜನರು ಎಲ್ಲೆಡೆ ದೊರೆಯರು.

ಮಕ್ಕಳು ಸದ್ಗುಣಿಗಳಾಗಲು ತಂದೆ-ತಾಯಿಗಳು ಎಚ್ಚರ ವಹಿಸಬೇಕು. ಆಚಾರ್ಯರು ಅವರು ಹಾದಿ ತಪ್ಪದಂತೆ ನೋಡಿಕೊಳ್ಳಲು ಒತ್ತಾಯ ಪಡಿಸಿರುವರು. ಪ್ರತಿ ವ್ಯಕ್ತಿ ತನ್ನ ಸಮಯವನ್ನು ಕಳೆದು ಕೊಳ್ಳದೆ ಸತ್ಕಾರ್ಯಗಳಲ್ಲಿ ಪಾಲುಗೊಳ್ಳಲು ಆಚಾರ್ಯರು ಸಲಹೆ ಇತ್ತಿರುವರು. ತಮಗೆ ನಿರ್ವಹಿಸಿರುವ ಕಾರ್ಯವನ್ನು ಎಲ್ಲರೂ ಪೂರ್ಣಮಾಡಲು ತಿಳಿಸಿರುವರು.

ಮನುಜನು ತನ್ನ ನೈಜತ್ವ ಅರಿಯಲಿ. ಗಮನಕ್ಕಿಡುವ ವಿಷಯ ಏನೆಂದರೆ ವೇಶ್ಯೆಯರು ನಟಿಸುವ ಪ್ರೇಮ ಕಪಟವಾಗಿರುವುದು. ಅಂಥಹ ಸ್ತ್ರೀಯರು ಮತ್ತು ದುಷ್ಟ ಪುರುಷರ ಸಹವಾಸ ಮಾಡದಿರಿ. ತಮ್ಮ ಪ್ರೇಮ ಮತ್ತು ಸ್ನೇಹವನ್ನು ಸಮಾನ ಅಂತಸ್ತಿನವರಲ್ಲಿ ಹಂಚಿಕೊಳ್ಳುವಂತೆ ಆಚಾರ್ಯರು ಸಲಹೆ ಮಾಡಿರುವರು.





## ॥ ಅಧ್ಯಾಯ - ೨ ॥

ಎಲ್ಲಿ ಮೂರ್ಖರನ್ನು ಗೌರವಿಸುವುದಿಲ್ಲವೋ, ಎಲ್ಲಿ ಧಾನ್ಯಗಳನ್ನು ಶೇಖರಿಸಿ ಇಡಲಾಗುತ್ತದೋ, ಎಲ್ಲಿ ದಂಪತಿಗಳ ಮಧ್ಯೆ ಜಗಳವಿಲ್ಲವೋ ಅಲ್ಲಿ ಲಕ್ಷ್ಮಿ ನೆಲಸುತ್ತಾಳೆ.

कस्य दोष: कुले नास्ति व्याधिना को न पीडित:।
व्यसनं केन न सम्प्राप्तं कस्य सौख्यं निरन्तरम्॥

ಯಾವ ಕುಲದಲ್ಲಿ ತಾನೇ ದೋಷಗಳು ಇರುವುದಿಲ್ಲ? ಯಾರು ತಾನೇ ರೋಗದಿಂದ ಪೀಡಿತನಾಗುವುದಿಲ್ಲ? ದುಃಖವೆಂಬುದು ಯಾರಿಗೆ ತಾನೆ ಬರದಿರುತ್ತದೆ? ಯಾರಿಗೆ ತಾನೇ ಸುಖವು ಶಾಶ್ವತವಾಗಿರುತ್ತದೆ?

ಎಲ್ಲ ವಂಶಗಳಲ್ಲಿಯೂ ಒಂದಲ್ಲ ಒಂದು ದೋಷವು ಇದ್ದೇ ಇರುತ್ತದೆ. ಪೂರ್ಣ ಶುದ್ಧವಾದ ಕುಲವೆಂಬುದು ಯಾವುದೂ ಇಲ್ಲ. ಹಾಗೆಯೇ ಒಂದು ದಿನವೂ ರೋಗದಿಂದ ಪೀಡಿತನಾಗದ ಮನುಜನು ಇರುವುದು ಸಾಧ್ಯವಿಲ್ಲ. ಪ್ರತಿಯೊಬ್ಬರೂ ಮುಪ್ಪಿನಲ್ಲಿಯಾದರೂ ಯಾವುದಾದರೂ ರೋಗವನ್ನು ಅನುಭವಿಸಲೇ ಬೇಕಾಗುತ್ತದೆ. ಸುಖದುಃಖಗಳೂ ಕೂಡ ಹಾಗೆಯೇ. ಪ್ರತಿಯೊಬ್ಬರೂ ಜೀವನದಲ್ಲಿ ಒಮ್ಮೆಯಾದರೂ ದುಃಖವನ್ನು ಅನುಭವಿಸಬೇಕಾಗುತ್ತದೆ. ಸುಖದುಃಖಗಳು ಯಾರಿಗೂ ಶಾಶ್ವತವಲ್ಲ. ಇದನ್ನು ತಿಳಿದು ಮನುಷ್ಯನು ಧೈರ್ಯ ಮತ್ತು ಸಮಾಧಾನದಿಂದ ಬಾಳಬೇಕು. ॥೧॥

आचारः कुलमाख्याति देशमाख्याति भाषणम्।
सम्भ्रमः स्नेहमाख्याति वपुराख्याति भोजनम्॥

ಒಬ್ಬ ವ್ಯಕ್ತಿಯ ಕುಲವೆಂತಹುದೆಂಬುದನ್ನು ಅವನ ಅಚಾರದಿಂದ ತಿಳಿಯಬಹುದು. ಅವನ ಮಾತಿನ ವೈಖರಿಯಿಂದ ಅವನ ದೇಶವನ್ನು ತಿಳಿದುಕೊಳ್ಳಬಹುದು. ಯಾರನ್ನಾದರೂ ನೋಡಿದಾಗ ತೋರುವ ಸಂಭ್ರಮದಿಂದ ಅವರ ನಡುವಿನ ಸ್ನೇಹವನ್ನು ಊಹಿಸಬಹುದು. ಮನುಷ್ಯನ ದೇಹವನ್ನು ನೋಡಿ ಅವನು ಮಾಡುವ ಊಟದ ಪ್ರಮಾಣವನ್ನು ಹೇಳಬಹುದು.

ವ್ಯಕ್ತಿಯ ಸ್ವಭಾವದ ಮೇಲೆ ಅವನ ಸುತ್ತಲಿನ ವಾತಾವರಣ ಮತ್ತು ಅವನ ವಂಶದ ಹಿನ್ನಲೆ ಪರಿಣಾಮ ಬೀರುತ್ತದೆ. ಉತ್ತಮ ವಂಶದಲ್ಲಿ ಹುಟ್ಟಿದ ವ್ಯಕ್ತಿ ತನ್ನ ಮನೆಯಲ್ಲಿ ಪ್ರಚಲಿತವಾಗಿರುವ ಉತ್ತಮವಾದ ಆಚಾರಗಳನ್ನೇ ಅನುಸರಿಸುತ್ತಾನೆ. ಅವನು ಎಂತಹ ಸಂದರ್ಭದಲ್ಲಿಯೂ ಹೀನವಾದ ಆಚಾರಗಳನ್ನು ಅನುಸರಿಸುವುದಿಲ್ಲ. ವ್ಯಕ್ತಿಯ ಮಾತುಗಳು ಆಯಾ ದೇಶದ ಪರಿಸರದಿಂದ ಪ್ರಭಾವಿತವಾಗಿರುತ್ತವೆ. ನಮ್ಮಲ್ಲಿಯೇ ಕರಾವಳಿ, ಉತ್ತರ ಕರ್ನಾಟಕದ ಕನ್ನಡದ ಮಾತಿನಲ್ಲಿರುವ ವ್ಯತ್ಯಾಸವನ್ನು ಇದಕ್ಕೆ ಉದಾಹರಣೆಯಾಗಿ ಕೊಡಬಹುದು. ನೆಂಟರು, ಪರಿಚಿತರು ಬಂದಾಗ ನಾವು ತೋರುವ ಸಂಭ್ರಮ ಅಥವಾ ನಿರುತ್ಸಾಹ, ಅವರಲ್ಲಿ ನಮಗೆ ಇರುವ ಸ್ನೇಹವನ್ನು ಅನುಸರಿಸಿರುತ್ತದೆ. ಚೆನ್ನಾಗಿ ಊಟ ಮಾಡುವ ವ್ಯಕ್ತಿ ದೃಢಕಾಯನಾಗಿರುತ್ತಾನೆ. ॥೨॥

सुकुले योजयेत्कन्यां पुत्रं विद्यासु योजयेत्।
व्यसने योजयेच्छत्रुं मित्रं धर्मे नियोजयेत्॥

ಮಗಳನ್ನು ಒಳ್ಳೆಯ ಕುಲದಲ್ಲಿ ಹುಟ್ಟಿದ ವರನಿಗೆ ವಿವಾಹಮಾಡಿಕೊಡಬೇಕು. ಮಗನಿಗೆ ಒಳ್ಳೆಯ ವಿದ್ಯಾಭ್ಯಾಸವನ್ನು ಕೊಡಿಸಬೇಕು. ಶತ್ರುವನ್ನು ಸಾಧ್ಯವಾದಷ್ಟು ಸಂಕಟದಲ್ಲಿ ಸಿಲುಕುವಂತೆ ಮಾಡಬೇಕು. ಗೆಳೆಯನನ್ನು ಧರ್ಮಕಾರ್ಯಗಳಲ್ಲಿ ನಿಯೋಜಿಸಬೇಕು.

ಗೃಹಸ್ಥನೊಬ್ಬ ಸಂತೋಷದಿಂದ ಜೀವನ ಮಾಡಲು ಬೇಕಾದ ಅಂಶಗಳನ್ನು ಆಚಾರ್ಯರು ಈ ಶ್ಲೋಕದಲ್ಲಿ ವಿವರಿಸಿರುತ್ತಾರೆ. ಹೆಣ್ಣು ಮಕ್ಕಳನ್ನು ಉತ್ತಮ ವಂಶದ ವರನಿಗೆ ವಿವಾಹಮಾಡಿಕೊಟ್ಟರೆ, ಅವನು ಪತ್ನಿಯನ್ನು ಚೆನ್ನಾಗಿ ನೋಡಿಕೊಳ್ಳುವುದರಿಂದ, ಮನಸ್ಸಿಗೆ ಶಾಂತಿ,ಸಂತೋಷಗಳು ಇರುತ್ತವೆ. ಮಗನಿಗೆ

ವಿದ್ಯೆಯೇ ನಿಜವಾದ ಆಸ್ತಿ. ಅಂತಹ ವ್ಯಯವಾಗದ ಆಸ್ತಿಯನ್ನು ಅವನಿಗೆ ಕೊಟ್ಟರೆ, ಅವನು ಎಲ್ಲಿಯೇ ಹೋದರೂ, ಗೌರವ, ಹಣ ಎಲ್ಲವನ್ನೂ ಪಡೆದು ಸುಖಜೀವನ ನಡೆಸುತ್ತಾನೆ. ಶತ್ರುವನ್ನು ಗೆಲ್ಲಲು ಅತ್ಯಂತ ಉತ್ತಮವಾದ ಉಪಾಯವೆಂದರೆ, ಆವನು ನಮ್ಮ ಕಡೆಗೆ ಗಮನಕೊಡದಂತೆ ತನ್ನದೇ ಆದ ತೊಂದರೆಗಳಲ್ಲಿ ಸಿಲುಕಿಕೊಳ್ಳುವುದು. ಆಗ ಅವನ ಕಾಟವಿಲ್ಲದೆ ನಿಶ್ಚಿಂತೆಯಿಂದ ಇರಬಹುದು. ಕೊನೆಯದಾಗಿ ನಿಜವಾದ ಮಿತ್ರನನ್ನು ಅಧರ್ಮದಿಂದ ತಪ್ಪಿಸಿ, ಧರ್ಮಕಾರ್ಯಗಳನ್ನು ನಡೆಸುವಂತೆ ಪ್ರೇರೇಪಿಸಿದರೆ ಅವನಿಗೆ ಬೇಕಾದಷ್ಟು ಉಪಕಾರ ಮಾಡಿದಂತೆ ಆಗುತ್ತದೆ.॥೩॥

दुर्जनस्य च सर्पस्य वरं सर्पो न दुर्जनः।
सर्पो दंशति कालेन दुर्जनस्तु पदे पदे॥

ದುರ್ಜನರು ಮತ್ತು ಸರ್ಪಗಳ ನಡುವೆ, ದುರ್ಜನನಿಗಿಂತ ಸರ್ಪವೇ ಉತ್ತಮ. ಸರ್ಪವು ತನಗೆ ತೊಂದರೆ ಮಾಡಿದಾಗ ಮಾತ್ರ ಆ ಸಮಯದಲ್ಲಿ ಒಂದು ಸಲ ಕಚ್ಚುತ್ತದೆ. ದುಷ್ಟನಾದರೊ ಪದೇ ಪದೇ ತೊಂದರೆ ಕೊಡುತ್ತಲೇ ಇರುತ್ತಾನೆ.

ಈ ಶ್ಲೋಕದಲ್ಲಿ ಆಚಾರ್ಯರು ಹಾವು ಮತ್ತು ದುರ್ಜನರನ್ನು ತುಲನೆಮಾಡಿ, ಸರ್ಪವೇ ಉತ್ತಮವೆಂದು ತೀರ್ಮಾನಿಸುತ್ತಾರೆ. ಸರ್ಪವು ಸುಮ್ಮನೆ ಕಚ್ಚುವುದಿಲ್ಲ. ತನಗೆ ತೊಂದರೆ ಕೊಟ್ಟರೆ ಮಾತ್ರ ಒಂದು ಸಲ ಕಚ್ಚಬಹುದು. ದುಷ್ಟನಾದರೋ ತನಗೆ ತೊಂದರೆ ಮಾಡದಿದ್ದರೂ, ಇನ್ನೊಬ್ಬರಿಗೆ ತೊಂದರೆ ಕೊಡುವ ಉದ್ದೇಶದಿಂದಲೇ ಮತ್ತೆ ಮತ್ತೆ ವಿಷವನ್ನು ಕಕ್ಕುತ್ತಾನೆ. ಆದ್ದರಿಂದ ಅವನು ಸರ್ಪಕ್ಕಿಂತ ಭಯಂಕರನು.॥೪॥

एतदर्थं कुलीनानां नृपाः कुर्वन्ति संग्रहम्।
आदिमध्याऽवसानेषु न त्यजन्ति च ते नृपम्॥

ಕುಲೀನರಾದ ಜನರು ತಮ್ಮನ್ನು ನಂಬಿದವರಿಗೆ ಪ್ರಾರಂಭದಲ್ಲಿ, ಮಧ್ಯದಲ್ಲಿ ಅಥವಾ ಅಂತ್ಯದಲ್ಲಿ ಸಹಾಯಕ್ಕೆ ನಿಲ್ಲುತ್ತಾರೆ. ಯಾವಾಗಲೂ ಅವರನ್ನು ತ್ಯಜಿಸುವುದಿಲ್ಲ. ಆದುದರಿಂದ ರಾಜರುಗಳು ಅಂತಹ ಜನರನ್ನು ಹೆಚ್ಚಾಗಿ ಸಂಗ್ರಹಿಸುತ್ತಾರೆ.

ಮಹಾರಾಜರ ಸೇವೆಯನ್ನು ಮಾಡಲು ಬಹಳ ಜನ ಹಾತೊರೆಯುತ್ತಾರೆ. ಆದರೆ ರಾಜನಾದವನು ಎಲ್ಲರನ್ನೂ ತನ್ನ ಕೆಲಸಗಳಿಗೆ ನಿಯಮಿಸಿಕೊಳ್ಳಬಾರದು. ಉತ್ತಮವಂಶದಲ್ಲಿ ಹುಟ್ಟಿದವರು ಉದಾತ್ತಗುಣಗಳಿಂದ ಕೂಡಿರುತ್ತಾರೆ. ಅಂತಹವರು ರಾಜನನ್ನು ಪ್ರಾರಂಭದಿಂದ ಅಂತ್ಯದವರೆಗೂ ಅನುಸರಿಸುತ್ತಾರೆ. ಎಂತಹ

ಸಂದರ್ಭಬಂದರೂ ನಂಬಿಕೆಗೆ ದ್ರೋಹವೆಸಗುವುದಿಲ್ಲ. ರಾಜರೂ ಅವರನ್ನು ಗೌರವಿಸುತ್ತಾರೆ. ।।೫।।

प्रलये भिन्नमर्यादा भवन्ति किल सागराः।
सागरा भेदमिच्छन्ति प्रलयेऽपि न साधवः॥

ಸಾಗರಗಳು ಪ್ರಲಯಕಾಲದಲ್ಲಿ ತಮ್ಮ ಮೇರೆಯನ್ನು ಮೀರಿ ಉಕ್ಕಿ ಹರಿಯಬಹುದು. ಸಾಗರಗಳು ಮೇರೆ ಮೀರುವುದಿಲ್ಲವೆಂದು ಪ್ರಸಿದ್ಧಿಯಿದ್ದರೂ ತೀರ ಕಠಿನ ಪರಿಸ್ಥಿತಿ ಒದಗಿದಾಗ ಅವು ಬದಲಾಗುವ ಸಾಧ್ಯತೆಯಿದೆ. ಆದರೆ ಸತ್ಪುರುಷರು ಅತ್ಯಂತ ಕಠಿನ ಸ್ಥಿತಿಯಲ್ಲಿಯೂ ಮೇರೆ ಮೀರಿ ವರ್ತಿಸುವುದಿಲ್ಲ.

ನೂರಾರು ನದಿಗಳಿಂದ ನಿರಂತರವಾಗಿ ನೀರು ಸೇರುತ್ತಿದ್ದರೂ ಸಾಗರವು ಎಂದೂ ಮೇರೆ ಮೀರುವುದಿಲ್ಲ. ಆದ್ದರಿಂದಲೇ ಗಾಂಭೀರ್ಯಕ್ಕೆ ಅದನ್ನು ಉದಾಹರಿಸುತ್ತಾರೆ. ಇಂತಹ ಸಾಗರಗಳು ಪ್ರಳಯಕಾಲದಲ್ಲಿ ಉಕ್ಕಿ ಹರಿದು ಎಲ್ಲವನ್ನೂ ಕೊಚ್ಚಿಕೊಂಡು ಹೋಗುತ್ತವೆ. ಸತ್ಪುರುಷರು ಗಾಂಭೀರ್ಯದಲ್ಲಿ ಸಾಗರವನ್ನು ಮೀರಿಸುತ್ತಾರೆ. ಪ್ರಳಯದಂತಹ ಪರಿಸ್ಥಿತಿ ಒದಗಿದರೂ ಕೂಡ ಅವರು ಮೇರೆ ಮೀರಿ ವರ್ತಿಸದೆ ತಮ್ಮ ಗಾಂಭೀರ್ಯವನ್ನು ಉಳಿಸಿಕೊಳ್ಳುತ್ತಾರೆ. ।।೬।।

मूर्खस्तु परिहर्तव्यः प्रत्यक्षो द्विपदः पशुः।
भिनत्ति वाक्यशल्येन अदृष्टः कण्टको यथा॥

ಮೂರ್ಖನಾದವನು ಪಶುವಿಗೆ ಸಮಾನನು. ಪಶುವಿಗೆ ನಾಲ್ಕು ಕಾಲುಗಳಿದ್ದರೆ ಇವನಿಗೆ ಎರಡೇ ಕಾಲುಗಳೆಂಬುದೊಂದೇ ವ್ಯತ್ಯಾಸ. ಆದುದರಿಂದ ಇವನು ಎರಡು ಕಾಲಿನ ಪಶುವು, ಇಂತಹ ಮೂರ್ಖನಿಂದ ದೂರವಿರುವುದು ಲೇಸು. ಕಾಣದಂತೆ ಒಳಸೇರಿರುವ ಮುಳ್ಳು ಹೇಗೆ ಒಳಗೆ ನೋವನ್ನುಂಟು ಮಾಡುತ್ತದೆಯೋ ಹಾಗೆ. ಇವನು ತನ್ನ ಮಾತೆಂಬ ಮುಳ್ಳಿನಿಂದ ಇರಿಯುತ್ತಾರೆ.

ಮೂರ್ಖನಾದವನು ವಿಷಯಗಳನ್ನು ಅರ್ಥಮಾಡಿಕೊಳ್ಳುವ ಸಾಮರ್ಥ್ಯವನ್ನು ಹೊಂದಿರುವುದಿಲ್ಲ. ಆದುದರಿಂದ ಅವನು ಮನಸ್ಸು ಬಂದಂತೆ ಮಾತನಾಡುತ್ತಾನೆ. ತನ್ನ ಮಾತುಗಳಿಂದ ಇನ್ನೊಬ್ಬರಿಗೆ ನೋವಾಗುವುದೆಂಬುದನ್ನು ಗಮನಿಸದೆ ಅವನು ಬಾಯಿಗೆ ಬಂದಂತೆ ಹರಟುತ್ತಾನೆ. ಇಂತಹವರ ಜೊತೆ ಸ್ನೇಹ ಬೆಳೆಸಿದರೆ, ಅವನು ನಮ್ಮ ಕುಂದುಕೊರತೆಗಳನ್ನೆಲ್ಲ ಬಯಲಿಗೆಳೆದು ನೋವನ್ನುಂಟುಮಾಡುತ್ತಾನೆ. ಒಂದು ಮುಳ್ಳು ಒಳಗೆ ಸೇರಿಬಿಟ್ಟರೆ, ಅದು ಅಲ್ಲಿ ಇರುವವರೆಗೂ ಯಾತನೆಯನ್ನು ಕೊಡುತ್ತಲೇ ಇರುತ್ತದೆ.

ಅದನ್ನು ತೆಗೆದ ನಂತರವೇ ಹಿತ. ಅಂತೆಯೇ ಮೂರ್ಖನನ್ನು ದೂರವಿಟ್ಟಾಗಲೇ ಜನರಿಗೆ ಹಿತವೆನಿಸುತ್ತದೆ. ॥೭॥

रूपयौवनसम्पन्ना: विशालकुलसम्भवा:।
विद्याहीना न शोभन्ते निर्गन्धा इव किंशुका:॥

ಒಬ್ಬ ವ್ಯಕ್ತಿಯು ಸುಂದರನಾಗಿರಬಹುದು, ಯುವಕನಾಗಿರಬಹುದು, ವಿಸ್ತಾರವಾದ ಒಳ್ಳೆಯ ಕುಲದಲ್ಲಿ ಜನಿಸಿರಬಹುದು. ಅಂತಹವನು ವಿದ್ಯಾವಂತನಲ್ಲದಿದ್ದರೆ ಸುವಾಸನೆರಹಿತವಾದ ಕಿಂಶುಕವೆಂಬ ಪುಷ್ಪದಂತೆ ಶೋಭಾರಹಿತರಾಗಿರುತ್ತಾರೆ.

ರೂಪು, ಯೌವನ, ಒಳ್ಳೆಯ ವಂಶ ಇವುಗಳಿಗಿಂತ ವಿದ್ಯೆಯ ಪ್ರಾಮುಖ್ಯವನ್ನು ಇದರಲ್ಲಿ ಆಚಾರ್ಯರು ನಿರೂಪಿಸಿರುತ್ತಾರೆ. ಕಿಂಶುಕವೆಂಬ ಪುಷ್ಪವು ನೋಡಲು ಬಹು ಸುಂದರವಾಗಿರುತ್ತದೆ. ಆದರೆ ಅದರಲ್ಲಿ ಸುವಾಸನೆಯಿಲ್ಲದುದರಿಂದ ಜನರು ಆದನ್ನು ಹೆಚ್ಚಾಗಿ ಬಯಸುವುದಿಲ್ಲ. ಅಂತೆಯೇ ವ್ಯಕ್ತಿಯು ಸುಂದರನಾಗಿದ್ದರೂ ವಿದ್ಯಾವಂತನಲ್ಲದಿದ್ದರೆ ಜನರು ಅವನಿಗೆ ಮನ್ನಣೆಯನ್ನು ಕೊಡುವುದಿಲ್ಲ. ॥೮॥

कोकिलानां स्वरो रूपं स्त्रीणां रूपं पतिव्रतम्।
विद्या रूपं कुरूपाणां क्षमा रूपं तपस्विनाम्॥

ಕೋಗಿಲೆಗಳ ಪ್ರಶಸ್ತವಾದ ಗುಣವೆಂದರೆ ಅವುಗಳ ಮಧುರಸ್ವರ. ಅದನ್ನೇ ಆಚಾರ್ಯರು ರೂಪವೆಂದು ಕರೆದಿದ್ದಾರೆ. ಸ್ತ್ರೀಯರ ಸೌಂದರ್ಯವಿರುವುದು ಅವರ ಪಾತಿವ್ರತ್ಯದಲ್ಲಿ. ಕುರೂಪಿಗಳಾದರೂ ಅವರಲ್ಲಿ ವಿದ್ಯೆಯಿದ್ದರೆ ಅವರು ರೂಪವಂತರು. ತಪಸ್ವಿಗಳ ಕ್ಷಮೆಯೇ ರೂಪದಂತೆ ಹೃದಯಂಗಮವಾದದು.

ಕೋಗಿಲೆಯ ರೂಪದಲ್ಲಿ ಕಪ್ಪಾದ ಪಕ್ಷಿಯಾದರೂ ತನ್ನ ಸ್ವರದಿಂದ ಎಲ್ಲರ ಮೆಚ್ಚುಗೆಯನ್ನು ಪಡೆಯುತ್ತದೆ. ಆದುದರಿಂದ ಅದರ ಸ್ವರವೇ ಅದಕ್ಕೆ ನಿಜವಾದ ರೂಪ. ಸ್ತ್ರೀಯರೂ ಕೂಡ ತಮ್ಮ ಬಾಹ್ಯ ಸೌಂದರ್ಯಕ್ಕಿಂತಲೂ ಪತಿಹಿತರಾಗಿ ನಡೆದಾಗ ಆಂತರಿಕ ಸೌಂದರ್ಯದ ಪ್ರತೀಕವಾಗುತ್ತಾರೆ. ಒಬ್ಬ ವ್ಯಕ್ತಿ ವಿದ್ಯಾವಂತನಾಗಿದ್ದರೆ ಜನರು ಅವನು ಕುರೂಪಿಯಾಗಿದ್ದರೂ ಗೌರವಿಸಿ ಪ್ರಶಂಸಿಸುತ್ತಾರೆ. ತಪಸ್ವಿಗಳಿಗೆ ತಮ್ಮ ತಪಸ್ಸಾಧನೆಯ ಆಳವನ್ನು ತಿಳಿಯಬೇಕಾದರೆ ಕ್ಷಮಶೀಲತೆಯೇ ಅಳತೆಗೋಲು. ॥೯॥

त्यजेदेकं कुलस्याऽर्थे ग्रामस्याऽर्थे कुलं त्यजेत्।
ग्रामं जनपदस्याऽर्थे आत्माऽर्थे पृथिवीं त्यजेत्॥

ಒಂದು ಕುಲವನ್ನು ಉಳಿಸುವುದಕ್ಕಾಗಿ ಒಬ್ಬನನ್ನು ತ್ಯಜಿಸಬಹುದು. ಗ್ರಾಮದ ಹಿತದೃಷ್ಟಿಯಿಂದ ಒಂದು ಕುಲವನ್ನು ತ್ಯಜಿಸಬೇಕಾಗಬಹುದು. ದೇಶದ ದೃಷ್ಟಿಯಿಂದ ಒಂದು ಹಳ್ಳಿಯನ್ನು ಬಿಡಬೇಕಾಗಬಹುದು. ಆತ್ಮೋದ್ಧಾರಕ್ಕಾಗಿ ಪೃಥ್ವಿಯನ್ನೇ ತ್ಯಜಿಸಬಹುದು.

ಸಣ್ಣತ್ಯಾಗದಿಂದ ದೊಡ್ಡದನ್ನು ಉಳಿಸಿಕೊಳ್ಳುವುದು ಬುದ್ಧಿವಂತರ ಲಕ್ಷಣ. ಒಬ್ಬನಿಂದ ಕುಲದ ಗೌರವ ಪ್ರತಿಷ್ಠೆಗಳು ಹಾಳಾಗುವ ಸನ್ನಿವೇಶದಲ್ಲಿ ಆ ವ್ಯಕ್ತಿಯನ್ನು ತ್ಯಜಿಸುವುದೇ ಉತ್ತಮ. ದುರ್ಯೋಧನನನ್ನು ಮೊದಲೇ ತ್ಯಜಿಸಿದ್ದರೆ ಕುರುವಂಶ ಉಳಿಯುತ್ತಿತ್ತು. ಹಳ್ಳಿಯ ಹಿತದೃಷ್ಟಿಯಿಂದ ಒಂದು ಸಂಸಾರವೇನಾದರೂ ಕೆಡುಕನ್ನುಂಟುಮಾಡುತ್ತಿದ್ದರೆ ಅವರನ್ನು ಹೊರಗೆ ಹಾಕಿ ಹಳ್ಳಿಯನ್ನು ಉಳಿಸಿಕೊಳ್ಳಬೇಕು. ದೇಶಗಳ ವಿಷಯ ಬಂದಾಗ ಗ್ರಾಮವನ್ನು ತ್ಯಜಿಸಬೇಕಾಗುತ್ತದೆ. ಹಿಂದೆ ರಾಜರುಗಳು ಶತ್ರುಗಳಿಗೆ ಕೆಲವು ಗ್ರಾಮಗಳನ್ನು ಕೊಟ್ಟು ಸಂಧಿಮಾಡಿಕೊಳ್ಳುತ್ತಿದ್ದರು. ತನಗೆ ಆಪತ್ತು ಬಂದಾಗ ಅದರಿಂದ ತಪ್ಪಿಸಿಕೊಳ್ಳಲು ಯಾವುದನ್ನು ಬೇಕಾದರೂ ತ್ಯಾಗ ಮಾಡಬಹುದೆಂಬುದು ಆಚಾರ್ಯರ ಅಭಿಪ್ರಾಯವಾಗಿದೆ. ॥೧೦॥

**उद्योगे नास्ति दारिद्र्यं जपतो नास्ति पातकम्।**
**मौने च कलहो नास्ति नास्ति जागरिते भयम्॥**

ಉದ್ಯೋಗಶೀಲನಾದ ವ್ಯಕ್ತಿಗೆ ಬಡತನವಿರುವುದಿಲ್ಲ. ಪರಮಾತ್ಮನ ನಾಮಜಪವನ್ನು ಮಾಡುವವನಿಗೆ ಪಾಪವಿಲ್ಲ. ಮೌನವಾಗಿರುವವನಿಗೆ ಜಗಳದ ಭಯವಿಲ್ಲ. ಎಚ್ಚರವಾಗಿರುವವನಿಗೆ ಭಯವೆಂಬುದೇ ಇಲ್ಲ.

ಯಾವುದಾದರೂ ಕೆಲಸವನ್ನು ಮಾಡಲು ಸಿದ್ಧನಾಗಿರುವವನಿಗೆ ಬಡತನವಿರುವುದಿಲ್ಲ. ಅವನು ಹೇಗಾದರೂ ಉದ್ಯೋಗದಿಂದ ಹಣವನ್ನು ಸಂಪಾದನೆ ಮಾಡುತ್ತಾನೆ. ಪರಮಾತ್ಮನ ನಾಮಸ್ಮರಣೆಯು ಪಾತಕಗಳನ್ನು ದೂರ ಮಾಡುತ್ತದೆ. ಸದಾ ಜಪ ಮಾಡುವ ವ್ಯಕ್ತಿಯು ಪಾಪಿಯಾಗಲಾರನು. ಜಗಳವು ಇಬ್ಬರು ಮಾತಿನ ಚಕಮಕಿಯಿಂದ ವೃದ್ಧಿಯಾಗುತ್ತದೆ. ಒಬ್ಬನು ಮೌನವಹಿಸಿದರೆ ಇನ್ನೊಬ್ಬನು ಎಷ್ಟು ಕೂಗಿಕೊಂಡರೂ ವ್ಯರ್ಥ. ಜಗಳಕ್ಕೆ ಇಬ್ಬರು ಬೇಕೇಬೇಕು. ವಾಕ್‌ಸಯಂಮವುಳ್ಳವನಿಗೆ ಎಂದೂ ಜಗಳಕ್ಕೆ ಅವಕಾಶವಿಲ್ಲ. ಸದಾ ಎಚ್ಚರಿಕೆಯಿಂದ ಇರುವವನಿಗೆ ಕಳ್ಳತನವೇ ಮುಂತಾದ ಭಯವು ಇರುವುದಿಲ್ಲ. ನಮ್ಮ ಅಜಾಗರೂಕತೆಯಿಂದಲೇ ಇಂತಹ ಸಂದರ್ಭಗಳು ಬರುತ್ತವೆ. ॥೧೧॥

अतिरूपेण वै सीता अतिगर्वेण रावणः।
अतिदानात् बलिर्बद्धो अति सर्वत्र वर्जयेत्॥

ಅತಿಯಾದ ಸೌಂದರ್ಯದ ಕಾರಣದಿಂದಾಗಿ ಸೀತೆ ದುಃಖವನ್ನು ಅನುಭವಿಸಬೇಕಾಯಿತು. ಅತಿಯಾದ ಅಹಂಕಾರದಿಂದ ರಾವಣನು ಅಧಃಪತನವನ್ನು ಕಂಡನು. ಅತಿಯಾದ ದಾನಬುದ್ಧಿಯಿಂದ ಬಲಿಯು ಬಂಧಿತನಾದನು. ಆದ್ದರಿಂದ ಎಲ್ಲಿಯೂ ಅತಿಯಾಗಿ ಆಚರಿಸಬಾರದು.

ಸೀತೆಯು ಅಪ್ರತಿಮ ರೂಪವತಿಯಾಗಿದ್ದಳು. ಆದರಿಂದಾಗಿ ಆವಳನ್ನು ರಾವಣನು ಅಪಹರಿಸಿಕೊಂಡು ಹೋದನು. ಅಲ್ಲಿ ಅವಳು ವಿಪರೀತ ಕಷ್ಟಗಳಿಗೆ ಗುರಿಯಾಗಬೇಕಾಯಿತು. ರಾವಣನೂ ಕೂಡ ಪರಾಕ್ರಮಿಯಾದರೂ ಅವನಲ್ಲಿ ಅತಿಯಾದ ಅಹಂಕಾರವಿತ್ತು. ಇದರಿಂದಾಗಿ ಅವನು ಹಿತೈಷಿಗಳ ಮಾತನ್ನೂ ಕೇಳದೆ ತನ್ನ ಅವಸಾನಕ್ಕೆ ತಾನೇ ಕಾರಣನಾದನು. ಬಲಿಯು ದೇವತೆಗಳನ್ನು ಜಯಿಸಿ ಮೂರು ಲೋಕಗಳಿಗೂ ಅಧಿಪತಿಯಾಗಿದ್ದನು. ಅವನನ್ನು ವಾಮನನಾಗಿ ಬಂದ ವಿಷ್ಣುವು ಮೂರು ಹೆಜ್ಜೆಗಳಷ್ಟು ಭೂಮಿಯನ್ನು ಕೇಳಿದನು. ಶುಕ್ರಾಚಾರ್ಯರು ತಡೆದರೂ ಕೇಳದೆ ಬಲಿಯು ಅವನಿಗೆ ದಾನಕೊಡಲು ಸಿದ್ಧನಾದನು. ವಿಷ್ಣುವು ತ್ರಿವಿಕ್ರಮನಾಗಿ ಬಂದು ಹೆಜ್ಜೆಯಿಂದ ಸ್ವರ್ಗದ ಮೇಲಿನ ಲೋಕಗಳನ್ನೂ, ಇನ್ನೊಂದರಿಂದ ಕೆಳಗಿನ ಲೋಕಗಳನ್ನೂ ಅಳೆದು, ಮೂರನೆಯ ಹೆಜ್ಜೆಯನ್ನು ಬಲಿಯ ತಲೆಯ ಮೇಲಿರಿಸಿ ಪಾತಾಳಕ್ಕೆ ತುಳಿದು ಅವನನ್ನು ಅಲ್ಲಿ ಬಂಧಿಸಿದನು. ಹೀಗೆ ಯಾವುದಕ್ಕೂ ಮಿತಿಯಿರಬೇಕು. ಅತಿಯಾದರೆ ಕಷ್ಟ.॥೧೨॥

को हि भारः समर्थानां किं दूरं व्यवसायिनाम्।
को विदेशः सविद्यानां कः परः प्रियवादिनाम्॥

ಸಮರ್ಥರಾದ ವ್ಯಕ್ತಿಗಳಿಗೆ ಯಾವುದು ತಾನೇ ಭಾರವಾಗಿ ಪರಿಣಮಿಸುತ್ತದೆ? ಹಟದಿಂದ ಕಾರ್ಯಸಾಧಿಸುವ ವ್ಯಾಪಾರಿಗಳೇ ಮುಂತಾದವರಿಗೆ ಯಾವುದು ದೂರವಲ್ಲ. ವಿದ್ಯಾವಂತರು ವಿದೇಶದಲ್ಲಿಯೂ ಸ್ವದೇಶದಂತೆಯೇ ಹೊಂದಿಕೊಂಡು ಇರಬಲ್ಲರು. ಪ್ರಿಯವಾಗಿ ಮಾತನಾಡುವವರಿಗೆ ಶತ್ರುಗಳು ಇರುವುದಿಲ್ಲ.

ಸಾಮರ್ಥ್ಯವುಳ್ಳವರು ಎಂತಹ ಕೆಲಸವನ್ನಾದರು ಸುಲಭವಾಗಿ ಮಾಡಿ ಮುಗಿಸುತ್ತಾರೆ. ಅವರಿಗೆ ಯಾವುದೂ ಭಾರವೆನಿಸುವುದಿಲ್ಲ. ಉದ್ಯೋಗಶೀಲರಾದ ವ್ಯಾಪಾರಿಗಳು ದೂರದೇಶಗಳಿಗೂ ಹೋಗಿ ತಮ್ಮ ಸರಕುಗಳನ್ನು ವ್ಯಾಪಾರ ಮಾಡಿ ಲಾಭ ಸಂಪಾದಿಸುತ್ತಾರೆ. ಅವರಿಗೆ ಅದು ದೂರವೆನಿಸುವುದೇ ಇಲ್ಲ. ವಿದ್ಯಾವಂತರು ಎಲ್ಲಿ

ಹೋದರೂ ತಮ್ಮ ವಿದ್ಯೆಯಿಂದಗಿ ಗೌರವ, ಉದ್ಯೋಗ, ಹಣ ಮುಂತಾದವನ್ನು ಗಳಿಸಿ, ಸ್ವದೇಶದಲ್ಲಿರುವಂತೆಯೇ ಸುಖವಾಗಿರುತ್ತಾರೆ. ಅವರಿಗೆ ಅದು ಪರದೇಶವೆನಿಸುವುದಿಲ್ಲ. ಹಾಗೆಯೇ ಪ್ರಿಯವಾದಿಗಳನ್ನು ಎಲ್ಲರೂ ಇಷ್ಟಪಡುತ್ತಾರೆ. ಅವರಿಗೆ ಯಾರೂ ಶತ್ರುಗಳಾಗುವುದಿಲ್ಲ.॥೧೩॥

एकेनाऽपि सुवृक्षेण पुष्पितेन सुगन्धिना।
वासितं तद्वनं सर्वं सुपुत्रेण कुलं तथा॥

ಒಂದು ಉತ್ತಮವಾದ ಮರವು ತನ್ನ ಸುವಾಸನಾಯುಕ್ತವಾದ ಪುಷ್ಪಗಳಿಂದ ಇಡೀ ವನವನ್ನು ಸುಗಂಧಭರಿತವನ್ನಾಗಿ ಮಾಡುವುದು. ಹಾಗೆಯೇ ಒಬ್ಬ ಸುಪುತ್ರನಿಂದ ಇಡೀ ವಂಶವೇ ಉನ್ನತಿಯನ್ನು ಪಡೆಯುವುದು.

ಕಾಡಿನಲ್ಲಿ ಬೇಕಾದಷ್ಟು ಬೇರೆ ಮರಗಳಿರಬಹುದು. ಅವುಗಳನ್ನು ಯಾರೂ ಗಮನಿಸುವುದಿಲ್ಲ. ಪುಷ್ಪಗಳಿಂದ ಕೂಡಿದ ಒಂದು ಮರವು ಜನರ ಗಮನವನ್ನು ಸೆಳೆಯುವುದು. ಅದರ ಹೂಗಳು ಕಣ್ಣಿಗೆ ಆನಂದವನ್ನುಂಟುಮಾಡಿದರೆ, ಸುವಾಸನೆಯು ಜನರನ್ನು ಅದರ ಕಡೆಗೆ ಆಕರ್ಷಿಸುವುದು ಅಂತೆಯೇ ಕುಲದಲ್ಲಿ ಬೇಕಾದಷ್ಟು ಮಕ್ಕಳು ಜನಿಸಬಹುದು. ಆದರೆ ಸದ್ಗುಣಿಯಾದ ಪುತ್ರನೊಬ್ಬನು ವಂಶದ ಕೀರ್ತಿಯನ್ನು ಬೆಳಗುತ್ತಾನೆ. 'ವರಮೇಕೋ ಗುಣೀ ಪುತ್ರೋ', ''ಸ ಜಾತೋ ಯೇನ ಜಾತೇನ ಯಾತಿ ವಂಶ: ಸಮುನ್ನತಿಮ್'' ಮುಂತಾದ ವಾಕ್ಯಗಳ ಭಾವವಿದು.॥೧೪॥

एकेन शुष्कवृक्षेण दह्यमानेन वह्निना।
दह्यते तद्वनं सर्वं कुपुत्रेण कुलं तथा॥

ಈ ಶ್ಲೋಕದಲ್ಲಿ ಕುಪುತ್ರನ ನಿಂದನೆಯನ್ನು ಆಚಾರ್ಯರು ಮಾಡಿರುತ್ತಾರೆ. ಒಂದು ಒಣಗಿದ ಮರವು ಬೆಂಕಿಗೆ ಸಿಕ್ಕಿದರೆ, ತಾನೂ ಉರಿದುಹೋಗುವುದಲ್ಲದೆ ಇಡೀ ಕಾಡನ್ನೇ ಭಸ್ಮಮಾಡಿಬಿಡುತ್ತದೆ. ಹಾಗೆಯೇ ದುಷ್ಪುತ್ರನೊಬ್ಬನು ಕುಲದಲ್ಲಿ ಜನಿಸಿದರೆ, ತಾನೂ ನಾಶವಾಗುವುದಲ್ಲದೆ ಇಡೀ ಕುಲವನ್ನೇ ಹಾಳುಮಾಡುತ್ತಾನೆ.

ಕಾಡಿನಲ್ಲಿ ಒಂದು ಒಣಮರಕ್ಕೆ ಬೆಂಕಿಹತ್ತಿಕೊಂಡರೆ, ಕಾಳ್ಗಿಚ್ಚು ಹರಡಿ, ಇಡೀ ಕಾಡು ಭಸ್ಮವಾಗುತ್ತದೆ. ಹಾಗೆಯೇ ಒಬ್ಬ ವ್ಯಕ್ತಿಯು ದುರ್ಮಾರ್ಗದಲ್ಲಿ ಕಾಲಿಟ್ಟರೆ, ತನ್ನನ್ನೂ ತನ್ನ ವಂಶವನ್ನೂ ನಾಶಮಾಡಿಕೊಳ್ಳುತ್ತಾನೆ. ದುರ್ಯೋಧನನು ಇಡೀ ಕೌರವಕುಲವನ್ನೇ ಹಾಳುಮಾಡಿದಂತೆ ಇದು.॥೧೫॥

एकेनाऽपि सुपुत्रेण विद्यायुक्तेन साधुना।
आह्लादितं कुलं सर्वं यथा चन्द्रेण शर्वरी॥

ವಿದ್ಯಾವಂತನೂ ಸಾಧುವೂ ಆದ ಒಬ್ಬನೇ ಸುಪುತ್ರನಿಂದ ಇಡೀ ಕುಲವು ಸಂತಸಪಡುತ್ತದೆ. ಒಬ್ಬನೇ ಚಂದ್ರನಿಂದ ರಾತ್ರಿಯು ಪ್ರಕಾಶಮಾನವಾಗುವಂತೆ ಇದು.

'ಏಕಃ ಚಂದ್ರಃ ತಮೋಹಂತಿ ನತು ತಾರಾಗಣೋಪಿ ಚ' ಎಂಬಂತೆ ಸಾವಿರಾರು ನಕ್ಷತ್ರಗಳಿದ್ದರೂ ರಾತ್ರಿಯು ಪ್ರಕಾಶವನ್ನು ಪಡೆಯುವುದಿಲ್ಲ. ಅದಕ್ಕೆ ಒಬ್ಬ ಚಂದ್ರನೇ ಸಾಕು. ಅಂತೆಯೇ ಕುಲದ ಕೀರ್ತಿಯನ್ನು ಬೆಳಗಲು ಒಬ್ಬ ಸತ್ಪುತ್ರನೇ ಸಾಕು. ॥೧೬॥

किं जातैर्बहुभिः पुत्रैः शोकसन्तापकारकैः।
वरमेकः कुलाऽऽलम्बी यत्र विश्राम्यते कुलम्॥

ದುಃಖ ಮತ್ತು ತಾಪವನ್ನುಂಟುಮಾಡಬಲ್ಲ ಬಹಳ ಮಕ್ಕಳು ಹುಟ್ಟುವುದರಿಂದ ಏನು ಪ್ರಯೋಜನ? ಯಾರಿಂದ ಕುಲ ಸಮಾಧಾನವನ್ನು ಪಡೆಯುತ್ತದೆಯೋ ಅಂತಹ ಕುಲಕ್ಕೆ ಅವಲಂಬನವಾಗುವಂತಹ ಒಬ್ಬ ಮಗನು ಸಾಕು. 'ವರಮೇಕೋ ಗುಣೀ ಪುತ್ರೋ ನ ತು ಮೂರ್ಖಶತಾನಿ ಚ' ಎಂಬಂತೆ ಮೂರ್ಖರಾದ ಬಹಳ ಮಕ್ಕಳಿಗಿಂತ ಗುಣವಂತನಾದ ಒಬ್ಬ ಮಗನು ಮೇಲು. ಮೂರ್ಖಪುತ್ರರು ಕುಲದ ನಾಶಕ್ಕೆ ಕಾರಣರಾಗುವರು. ಅವರಿಂದ ಅಪಕಾರವೇ ಹೆಚ್ಚು. ಆದರ ಬದಲು ಸದ್ಗುಣಿಯಾದ ಒಬ್ಬನೇ ಮಗ ಏಳಿಗೆಯನ್ನು ತರುವನು. ॥೧೭॥

लालयेत् पञ्च वर्षाणि दश वर्षाणि ताडयेत्।
प्राप्ते तु षोडशे वर्षे पुत्रं मित्रवदाचरेत्॥

ಮಕ್ಕಳನ್ನು ಐದು ವರ್ಷದವರೆಗೆ ಮುದ್ದಿಸಬೇಕು. ಅಲ್ಲಿಂದ ಮುಂದೆ ಹತ್ತು ವರ್ಷಗಳ ಕಾಲ ಶಿಕ್ಷಿಸಬೇಕು. ಹದಿನಾರನೆಯ ವರ್ಷ ಪ್ರಾರಂಭವಾದ ಮೇಲೆ ಮಗನನ್ನು ಮಿತ್ರನಂತೆ ಸಮಾನತೆಯಿಂದ ಕಾಣಬೇಕು.

ಮಕ್ಕಳಿಗೆ ಐದು ವರ್ಷಗಳಾಗುವವರೆಗೆ ತಿಳುವಳಿಕೆ ಬಂದಿರುವುದಿಲ್ಲ. ಆಗ ಪ್ರೀತಿಯಿಂದ ಅವರ ಮನಸ್ಸನ್ನು ಗೆಲ್ಲಬೇಕು. ಅಲ್ಲಿಂದ ಶಾಲೆಗೆ ಸೇರಿ ಶಿಕ್ಷಣ ಪಡೆಯುವ ವಯಸ್ಸು. ಆಗ ಉತ್ತಮಗುಣಗಳು ಬೆಳೆಯಬೇಕಾದರೆ ತಪ್ಪು ಮಾಡಿದಾಗ ಶಿಕ್ಷಿಸುವುದು ಅಗತ್ಯ. ಮುಂದಿನ ಹತ್ತು ವರ್ಷಗಳು ಕಲಿಕೆಯ ಕಾಲ. ಹೀಗೆ ಪ್ರೀತಿ-ಶಿಕ್ಷೆಗಳೆರಡನ್ನೂ ಪಡೆದ ಮಗು ಹದಿನಾರು ವರ್ಷ ತುಂಬುವ ವೇಳೆಗೆ ಸುಶಿಕ್ಷಿತ ಯುವಕನಾಗುತ್ತಾನೆ. ನಂತರ ಅವನನ್ನು ತಿದ್ದುವ ಅವಶ್ಯಕತೆಯಿರುವುದಿಲ್ಲ. ಆಗ ಅವನನ್ನು ಮಿತ್ರನಂತೆ

ಸಮಾನನಾಗಿ ಕಾಣಬಹುದು. ॥೧೮॥

**उपसर्गोऽन्यचक्रे च दुर्भिक्षे च भयावहे।**
**असाधुजनसम्पर्के यः पलायति स जीवति॥**

ರೋಗರುಜಿನಗಳ ಹರಡುವಿಕೆ, ಬೇರೆ ದೇಶದ ಸೈನಿಕರ ಧಾಳಿ, ಕ್ಷಾಮ, ಭಯವನ್ನುಂಟುಮಾಡುವ ಸಂದರ್ಭಗಳು, ದುಷ್ಟಜನರ ಸಂಪರ್ಕ ಮುಂತಾದ ಕಠಿಣ ಪರಿಸ್ಥಿತಿಗಳಲ್ಲಿ ಯಾರು ಅಲ್ಲಿಂದ ಹೊರಟುಹೋಗುತ್ತಾರೋ ಅವರು ಜೀವವನ್ನು ಉಳಿಸಿಕೊಳ್ಳುತ್ತಾರೆ.

ಎಲ್ಲಿಯಾದರೂ ಸಾಂಕ್ರಾಮಿಕರೋಗಗಳ ಬಾಧೆ ತಗುಲಿದಾಗ, ದಂಗೆ, ಗಲಭೆಗಳು ಉಂಟಾದಾಗ, ಕ್ಷಾಮ ಡಾಮರ ಸಂದರ್ಭದಲ್ಲಿ ಬುದ್ಧಿವಂತನಾದವನು ಬೇಗನೆ ಅಲ್ಲಿಂದ ತಪ್ಪಿಸಿಕೊಂಡು ಸುರಕ್ಷಿತವಾದ ಸ್ಥಳಗಳಿಗೆ ಹೋಗಬೇಕು. ಆಗ ಆಸ್ತಿ ಪಾಸ್ತಿಗಳು ನಷ್ಟವಾದರೂ ಜೀವವನ್ನು ಉಳಿಸಿಕೊಳ್ಳಬಹುದು. ಬದುಕಿದ್ದರೆ ಮುಂದೆ ಒಳ್ಳೆಯ ದಿನಗಳನ್ನು ಕಾಣಬಹುದು.॥೧೯॥

**धर्मार्थकाममोक्षाणां यस्यैकोऽपि न विद्यते।**
**जन्म-जन्मनि मर्त्येषु मरणं तस्य केवलम्॥**

ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳನ್ನು ಪುರುಷಾರ್ಥಗಳೆಂದು ಕರೆಯುತ್ತಾರೆ. ಅವುಗಳಲ್ಲಿ ಒಂದಾದರೂ ಇಲ್ಲದಿದ್ದರೆ ಮನುಷ್ಯನ ಜನ್ಮವು ವ್ಯರ್ಥವು. ಅವನಿಗೆ ಜನ್ಮಮರಣಗಳಷ್ಟೇ ಉಂಟಾಗುತ್ತವೆಯಲ್ಲದೆ ಮತ್ತಾವ ಪ್ರಯೋಜನವೂ ಆಗುವುದಿಲ್ಲ.

ಧರ್ಮವೆಂದರೆ ಸರಿಯಾದ ರೀತಿಯಲ್ಲಿ ತಾನೂ ಬಾಳಿ, ಉಳಿದವರಿಗೂ ಬಾಳಲು ಅವಕಾಶ ಮಾಡಿಕೊಡುವ ನೀತಿನಿಯಮಗಳು. ಇದು ಚತುರ್ವಿಧ ಪುರುಷಾರ್ಥಗಳಲ್ಲಿ ಮೊದಲನೆಯದು. ಮನುಷ್ಯನಾಗಿ ಹುಟ್ಟಿದವನು, ತನ್ನ ಕರ್ತವ್ಯವನ್ನು ಸರಿಯಾಗಿ ನಿರ್ವಹಿಸಿ, ವೇದೋಕ್ತಕರ್ಮಗಳ ಮೂಲಕ ಧರ್ಮವನ್ನು ಗಳಿಸಿಕೊಳ್ಳಬೇಕು.

ಎರಡನೆಯದು ಹಣ. ಅರ್ಥವೆಂದರೆ ಜೀವನೋಪಾಯಕ್ಕೆ ಬೇಕಾದ ಹಣದ ಮತ್ತು ಬೇರೆಯ ಅವಶ್ಯಕತೆಗಳ ಪೂರೈಕೆ ಮನುಷ್ಯನು ಧರ್ಮಮಾರ್ಗದಿಂದ ಹಣವನ್ನು ಗಳಿಸಿ ತನ್ನ ಮತ್ತು ತನ್ನ ಕುಟುಂಬದ ಪಾಲನೆ ಪೋಷಣೆಗಳನ್ನು ಮಾಡಿಕೊಳ್ಳಬೇಕು.

ಕಾಮವೆಂದರೆ ಅಪೇಕ್ಷೆಗಳು. ಜೀವನದಲ್ಲಿ ಪ್ರತಿಯೊಬ್ಬರಿಗೂ ಬೇಕಾದಷ್ಟು

ಸಮಾನನಾಗಿ ಕಾಣಬಹುದು. ||೧೮||

उपसर्गेऽन्यचक्रे च दुर्भिक्षे च भयावहे।
असाधुजनसम्पर्के यः पलायति स जीवति।।

ರೋಗರುಜಿನಗಳ ಹರಡುವಿಕೆ, ಬೇರೆ ದೇಶದ ಸೈನಿಕರ ಧಾಳಿ, ಕ್ಷಾಮ, ಭಯವನ್ನುಂಟುಮಾಡುವ ಸಂದರ್ಭಗಳು, ದುಷ್ಟಜನರ ಸಂಪರ್ಕ ಮುಂತಾದ ಕಠಿಣ ಪರಿಸ್ಥಿತಿಗಳಲ್ಲಿ ಯಾರು ಅಲ್ಲಿಂದ ಹೊರಟುಹೋಗುತ್ತಾರೋ ಅವರು ಜೀವವನ್ನು ಉಳಿಸಿಕೊಳ್ಳುತ್ತಾರೆ.

ಎಲ್ಲಿಯಾದರೂ ಸಾಂಕ್ರಾಮಿಕರೋಗಗಳ ಬಾಧೆ ತಗುಲಿದಾಗ, ದಂಗೆ, ಗಲಭೆಗಳು ಉಂಟಾದಾಗ, ಕ್ಷಾಮ ಡಾಮರ ಸಂದರ್ಭದಲ್ಲಿ ಬುದ್ಧಿವಂತನಾದವನು ಬೇಗನೆ ಅಲ್ಲಿಂದ ತಪ್ಪಿಸಿಕೊಂಡು ಸುರಕ್ಷಿತವಾದ ಸ್ಥಳಗಳಿಗೆ ಹೋಗಬೇಕು. ಆಗ ಅಸ್ತಿ ಪಾಸ್ತಿಗಳು ನಷ್ಟವಾದರೂ ಜೀವವನ್ನು ಉಳಿಸಿಕೊಳ್ಳಬಹುದು. ಬದುಕಿದ್ದರೆ ಮುಂದೆ ಒಳ್ಳೆಯ ದಿನಗಳನ್ನು ಕಾಣಬಹುದು.||೧೯||

धर्मार्थकाममोक्षाणां यस्यैकोऽपि न विद्यते।
जन्म-जन्मनि मर्त्येषु मरणं तस्य केवलम्।।

ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳನ್ನು ಪುರುಷಾರ್ಥಗಳೆಂದು ಕರೆಯುತ್ತಾರೆ. ಅವುಗಳಲ್ಲಿ ಒಂದಾದರೂ ಇಲ್ಲದಿದ್ದರೆ ಮನುಷ್ಯನ ಜನ್ಮವು ವ್ಯರ್ಥವು. ಅವನಿಗೆ ಜನ್ಮಮರಣಗಳಷ್ಟೇ ಉಂಟಾಗುತ್ತವೆಯಲ್ಲದೆ ಮತ್ತಾವ ಪ್ರಯೋಜನವೂ ಆಗುವುದಿಲ್ಲ.

ಧರ್ಮವೆಂದರೆ ಸರಿಯಾದ ರೀತಿಯಲ್ಲಿ ತಾನೂ ಬಾಳಿ, ಉಳಿದವರಿಗೂ ಬಾಳಲು ಅವಕಾಶ ಮಾಡಿಕೊಡುವ ನೀತಿನಿಯಮಗಳು. ಇದು ಚತುರ್ವಿಧ ಪುರುಷಾರ್ಥಗಳಲ್ಲಿ ಮೊದಲನೆಯದು. ಮನುಷ್ಯನಾಗಿ ಹುಟ್ಟಿದವನು, ತನ್ನ ಕರ್ತವ್ಯವನ್ನು ಸರಿಯಾಗಿ ನಿರ್ವಹಿಸಿ, ವೇದೋಕ್ತಕರ್ಮಗಳ ಮೂಲಕ ಧರ್ಮವನ್ನು ಗಳಿಸಿಕೊಳ್ಳಬೇಕು.

ಎರಡನೆಯದು ಹಣ. ಅರ್ಥವೆಂದರೆ ಜೀವನೋಪಾಯಕ್ಕೆ ಬೇಕಾದ ಹಣದ ಮತ್ತು ಬೇರೆಯ ಅವಶ್ಯಕತೆಗಳ ಪೂರೈಕೆ ಮನುಷ್ಯನು ಧರ್ಮಮಾರ್ಗದಿಂದ ಹಣವನ್ನು ಗಳಿಸಿ ತನ್ನಮತ್ತು ತನ್ನ ಕುಟುಂಬದ ಪಾಲನೆ ಪೋಷಣೆಗಳನ್ನು ಮಾಡಿಕೊಳ್ಳಬೇಕು.

ಕಾಮವೆಂದರೆ ಅಪೇಕ್ಷೆಗಳು. ಜೀವನದಲ್ಲಿ ಪ್ರತಿಯೊಬ್ಬರಿಗೂ ಬೇಕಾದಷ್ಟು

ಆಸೆಗಳಿರುತ್ತವೆ. ಅವೂ ಕೂಡ ಧರ್ಮಕ್ಕೆ ವಿರುದ್ಧವಾಗಿರಬಾರದು. ಶ್ರೀ ಕೃಷ್ಣನು ಗೀತೆಯಲ್ಲಿ 'ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ' ಎಂದು ಹೇಳಿರುತ್ತಾನೆ. ಆಗ ಅದು ಪುರುಷಾರ್ಥವೆನಿಸುತ್ತದೆ.

ಮೋಕ್ಷವೆಂಧರೆ ಉನ್ನತ ಮೌಲ್ಯಗಳ ಚಿಂತನೆ ಮತ್ತು ಪರಮಾತ್ಮನ ಸಾಕ್ಷಾತ್ಕಾರ. ಇದು ಮನುಷ್ಯನ ಅಂತಿಮ ಗುರಿ.

ಮನುಷ್ಯನಾದವನು ತನ್ನ ಜೀವನದಲ್ಲಿ ಈ ಪುರುಷಾರ್ಥಗಳನ್ನು ಪಡೆಯಲು ಯತ್ನಿಸಬೇಕು. ಇಲ್ಲದಿದ್ದರೆ ಅವನಿಗೂ ಪ್ರಾಣಿಗಳಿಗೂ ವ್ಯತ್ಯಾಸವೇ ರುವುದಿಲ್ಲ. ಸುಮ್ಮನೆ ಜನನ-ಮರಣಗಳ ಚಕ್ರದಲ್ಲಿಸುತ್ತಬಹುದು.॥೨೦॥

मूर्खा यत्र न पूज्यन्ते धान्यं यत्र सुसञ्चितम्।
दम्पत्ये: कलहो नाऽस्ति तत्र श्री: स्वयमागता॥

ಎಲ್ಲಿ ಮೂರ್ಖರನ್ನು ಗೌರವಿಸುವುದಿಲ್ಲವೋ, ಎಲ್ಲಿ ಧಾನ್ಯಗಳನ್ನು ಚೆನ್ನಾಗಿ ಶೇಖರಿಸಿ ಇಡಲಾಗುತ್ತದೆಯೋ, ಎಲ್ಲಿ ದಂಪತಿಗಳ ಮಧ್ಯೆ ಜಗಳವಿರುವುದಿಲ್ಲವೋ ಅಲ್ಲಿಗೆ ಲಕ್ಷ್ಮಿಯು ತಾನಾಗಿಯೇ ಆಗಮಿಸುತ್ತಾಳೆ.

ಮೂರ್ಖರನ್ನು ಗೌರವಿಸುವುದೂ ಮೂರ್ಖತನವೇ. ಯಾರಿಗೆ ಗೌರವ ಕೊಡಬೇಕೋ ಅವರನ್ನು ಗೌರವಿಸಬೇಕು. ಧಾನ್ಯಗಳನ್ನು ಸರಿಯಾಗಿ ಕೆಡದಂತೆ ಇಟ್ಟರೆ, ಬಹಳ ಕಾಲ ಉಪಯೋಗಿಸಿ ಸುಖವಾಗಿರಬಹುದು. ಬೆಳೆದ ಬೆಳೆ ವ್ಯರ್ಥವಾಗುವುದಿಲ್ಲ. ಹಾಗೆಯೇ ದಂಪತಿಗಳು ಅನ್ಯೋನ್ಯವಾಗಿದ್ದರೆ, ಅಂತಹ ಕಡೆ ಸಂಪತ್ತು ಸಮೃದ್ಧವಾಗಿರುತ್ತದೆ.॥೨೧॥

## ಅಧ್ಯಾಯದ ಸಾರಾಂಶ

ಆಚಾರ್ಯರು ಮನುಷ್ಯರು ನಡತೆಗಳ ಬಗ್ಗೆ ಎಚ್ಚರ ನೀಡುವರು. ಉಚ್ಛ ವಂಶದಲ್ಲಿಯೂ ಗುಣದೋಷಗಳು ಕಂಡುಬರುವುವು. ಪ್ರಪಂಚದಲ್ಲಿ ಲೋಪರಹಿತ ಪುರುಷರು ಸಿಗುವುದು ವಿರಳ. ಸುಃಖ-ದುಃಖಗಳು ಸಮ ಪ್ರಮಾಣದಲ್ಲಿರುತ್ತವೆ.

ಜಗತ್ತಿನ ನಿಯಮದಂತೆ ಸತ್ಪುರುಷರು ಹಾಗೂ ಮಹಾತ್ಮರು ಮಾಯೆಯ ಪ್ರಕೋಪದಿಂದ ಕಷ್ಟ-ನಷ್ಟಗಳನ್ನು ಅನುಭವಿಸಬೇಕಾಗುತ್ತದೆ. ವ್ಯಕ್ತಿಗಳ ಆಚಾರ-ವಿಚಾರ, ಸಂಭಾಷಣೆ, ಪರರ ನಿಂದೆ-ಸನ್ಮಾನ ಇತ್ಯಾದಿಗಳಿಂದ ಮನೆತನ ಅಥವಾ ವಂಶ ಪರಿಚಯ ದೊರೆಯುವುದು.



## ॥ ಅಧ್ಯಾಯ - ೪ ॥

**ದಯೆ, ಮಮತೆ, ಇತ್ಯಾದಿಗಳಿಲ್ಲದ ಧರ್ಮವನ್ನು ತ್ಯಜಿಸಿರಿ. ಅನಕ್ಷರಸ್ಥರು, ಮುಂಗೋಪಿ ಸ್ತ್ರೀ, ಹಾಗೂ ದ್ವೇಷ-ವೈಮನಸ್ಯಗಳಿಂದ ಕೂಡಿದ ಬಂಧು-ಮಿತ್ರರಿಂದ ದೂರವಿರಿ.**

आयुः कर्म च वित्तं च विद्या निधनमेव च।
पञ्चैतानि हि सृज्यन्ते गर्भस्थस्यैव देहिनः॥

ಆಯುಸ್ಸು, ಕೆಲಸ, ಹಣ, ವಿದ್ಯೆ ಮತ್ತು ಸಾವು ಈ ಐದೂ ಜೀವಿಗಳು ಗರ್ಭದಲ್ಲಿರುವಾಗಲೇ ನಿಶ್ಚಯಿಸಲ್ಪಡುತ್ತವೆ.

ಕೆಲವು ಅಂಶಗಳು ನಮ್ಮ ಕೈಯಲ್ಲಿ ಇರುವುದಿಲ್ಲ. ಜೀವಿಯು ಹುಟ್ಟುವಾಗಲೇ ಅವು ನಿಶ್ಚಿತವಾಗಿ ಬಿಟ್ಟಿರುತ್ತವೆ. ಅವನ ಅಯುಃ ಪ್ರಮಾಣವನ್ನು ವಿಧಿ ಮೊದಲೇ ನಿರ್ಧರಿಸಿಬಿಟ್ಟಿರುತ್ತದೆ. ಯಾವ ವೈದ್ಯನೂ ಅಯಸ್ಸನ್ನು ತುಂಬಲಾರ. ಹಾಗೆಯೇ ಅವನು ನಡೆಸುವ ವೃತ್ತಿ, ಅದರಲ್ಲಿ ಬರುವ ಹಣ, ಅವನು ಕಲಿಯಬಹುದಾದ ವಿದ್ಯೆ ಇವೆಲ್ಲವೂ ಪೂರ್ವಕರ್ಮದಿಂದ ನಿಶ್ಚಿತವಾಗಿ ಬಿಟ್ಟಿರುತ್ತದೆ. ನಾವು ಹಿಂದಿನ ಜನ್ಮಗಳಲ್ಲಿ ಪುಣ್ಯಕರ್ಮಗಳನ್ನು ಮಾಡಿದ್ದರೆ, ಈಗ ಉತ್ತಮವಾದ ಫಲವು ದೊರೆಯುತ್ತದೆ. ಹಾಗೆಯೇ ಈ ಜನ್ಮದಲ್ಲಿ ಮಾಡುವ ಕರ್ಮಗಳು ಮುಂದಿನ ಜನ್ಮಗಳನ್ನು ನಿರ್ಧರಿಸುತ್ತವೆ. ಯಾವಾಗಲೂ ಪುಣ್ಯಕರ್ಮಗಳಲ್ಲಿ ನಿರತರಾಗಲು ಈ ಭಾವನೆ ಸಹಕಾರಿಯಾಗುತ್ತದೆ. ॥೧॥

साधुभ्यस्ते निवर्तन्ते पुत्रा मित्राणि बान्धवाः।
ये च तैः सह गन्तारस्तद्धर्मात्सुकृतं कुलम्॥

ಸಾಧುಗಳಿಗೆ ಮಕ್ಕಳು, ಸ್ನೇಹಿತರು ಮತ್ತು ಬಂಧುಗಳು ದೂರವಾಗುವರು. ಅವರ ಜೊತೆಯಲ್ಲಿ ಹೋಗುವುದು ಧರ್ಮವೊಂದೇ. ಈ ಧರ್ಮದಿಂದಲೇ ಕುಲವು ಉದ್ಧಾರವಾಗುವುದು.

ಸಂನ್ಯಾಸಿಗಳಾದ ಸಾಧುಸತ್ಪುರುಷರು ಲೌಕಿಕವಾದ ಸಂಬಂಧ ಮತ್ತು ವ್ಯವಹಾರಗಳಿಂದ ದೂರವಾಗುವರು. ಅಂತಹವರನ್ನು ಪುತ್ರರು, ಮಿತ್ರ ಮತ್ತು ಬಂಧುಗಳು ಸಾಂಸಾರಿಕ ವಿಷಯಗಳಾದ ಧನಾರ್ಜನೆ ಮುಂತಾದವುಗಳಿಗೆ ಉಪಯೋಗವಿಲ್ಲವೆಂದು ದೂರಮಾಡುತ್ತಾರೆ. ಆದರೆ ಧರ್ಮವು ಮಾತ್ರ ಯಾವಾಗಲೂ ಅವರ ಜೊತೆಯಲ್ಲಿಯೇ ಇರುತ್ತದೆ. 'ಅಕ್ಕತಂಗಿ ಅಣ್ಣ ತಮ್ಮ ದೂರ ದೂರ ಹೋದರೆ, ಕಡೆಯವರೆಗೂ ಬಾಳಿನಲ್ಲಿ ಧರ್ಮವೊಂದೇ ಆಸರೆ' ಎಂದು ಒಂದು ಪದ್ಯ ಹೇಳುತ್ತದೆ. ಧರ್ಮಿಷ್ಠರಾದ ಸಾಧು ಸತ್ಪುರುಷರಿಂದ ಲೌಕಿಕವಾದ ಧನಸಂಪಾದನೆಯಾಗದಿದ್ದರೂ ಧರ್ಮಸಂಪಾದನೆಯಾಗಿ ಆ ಧರ್ಮದಿಂದ ಇಡೀ ವಂಶವೇ ಉದ್ಧಾರವಾಗುತ್ತದೆ.॥೨॥

दर्शनध्यानसंस्पर्शैर्मत्सी कूर्मी च पक्षिणी।
शिशुं पालयते नित्यं तथा सज्जनसंगतिः॥

ದರ್ಶನ, ಗಮನ ಮತ್ತು ಸ್ಪರ್ಶದಿಂದ ಮೀನು, ಆಮೆ ಮತ್ತು ಪಕ್ಷಿಗಳು ತಮ್ಮ ಮರಿಗಳನ್ನು ಕಾಪಾಡುತ್ತವೆ. ಹಾಗೆಯೇ ಸಜ್ಜನರ ಸಹವಾಸವು ಮನುಷ್ಯನನ್ನು ಎಲ್ಲ ರೀತಿಯಿಂದಲೂ ಕಾಪಾಡುತ್ತದೆ.

ಮೀನು ತನ್ನ ಮರಿಗಳನ್ನು ನೋಡುತ್ತಲೇ ಇರುತ್ತದೆ. ಅವುಗಳಿಗೆ ಅಪಾಯ ಒದಗದಂತೆ ನೋಡಿಕೊಳ್ಳುತ್ತ, ಅಪಾಯವೇನಾದರೂ ಉಂಟಾದರೆ ಕೂಡಲೇ ಅವುಗಳ ಕಡೆಗೆ ಧಾವಿಸುತ್ತದೆ. ಆಮೆಯು ನೀರಿನಲ್ಲಿ ವಾಸಿಸಿದರೂ ಮೊಟ್ಟೆಗಳನ್ನು ದಡದಲ್ಲಿ ನೆಲದ ಮೇಲೆ ಇಡುತ್ತದೆ. ಆ ಮೊಟ್ಟೆ ಒಡೆದು ಮರಿಯಾಗಿ ನೀರಿಗೆ ಸೇರುವವರೆಗೂ ತಾಯಿ ಆಮೆಯ ಗಮನ ಮೊಟ್ಟೆಗಳ ಕಡೆಗೆ ಇರುತ್ತದೆ. ಪಕ್ಷಿಗಳಾದರೋ ತಮ್ಮ ಮೊಟ್ಟೆಗಳಿಗೆ ಸ್ಪರ್ಶದಿಂದ ಕಾವು ಕೊಟ್ಟು, ಮರಿಗಳಾದ ಮೇಲೆ ರೆಕ್ಕೆ ಬಲಿಯುವವರೆಗೆ ಆಹಾರ ತಂದು ಗುಟುಕುಕೊಟ್ಟು ಮರಿಗಳನ್ನು ಸಾಕುತ್ತವೆ. ಹಾಗೆ ಸಜ್ಜನರು ತಮ್ಮ ಸ್ನೇಹಿತರನ್ನು ದರ್ಶನದಿಂದ, ಗಮನವಿಟ್ಟು ಎಚ್ಚರಿಕೆಯಿಂದ ಕಾಪಾಡುವುದರ ಮೂಲಕ, ತಮ್ಮ ಸ್ಪರ್ಶದಿಂದ ಹೀಗೆ ಎಲ್ಲ ರೀತಿಯ ರಕ್ಷಣೆ ಒದಗಿಸಿ, ಅವನನ್ನು ಪ್ರೀತಿಯಿಂದ

ನೋಡಿಕೊಳ್ಳುತ್ತಾರೆ. ॥೩॥

**यावत्स्वस्थो ह्ययं देहो यावन्मृत्युश्च दूरतः।**
**तावदात्महितं कुर्यात् प्राणान्ते किं करिष्यति॥**

ಎಲ್ಲಿಯವರೆಗೆ ಈ ದೇಹವು ಆರೋಗ್ಯವಾಗಿರುತ್ತದೆಯೋ, ಎಲ್ಲಿಯವರೆಗೆ ಅದಕ್ಕೆ ಮೃತ್ಯುವು ಸನ್ನಿಹಿತವಾಗಿರುವುದಿಲ್ಲವೋ, ಅಲ್ಲಿಯವರೆಗೆ ಆತ್ಮಕ್ಕೆ ಹಿತವಾಗುವ ಅಂದರೆ ಆತ್ಮೋದ್ಧಾರದ ಕೆಲಸಗಳನ್ನು ಮಾಡಬೇಕು. ಪ್ರಾಣ ಹೋಗುವ ಸಮಯ ಬಂದಾಗ ಏನನ್ನೂ ಮಾಡಲು ಆಗುವುದಿಲ್ಲ.

ದೇಹವು ಚಿಕ್ಕವಯಸ್ಸಿನಲ್ಲಿ ಆರೋಗ್ಯವಾಗಿದ್ದು, ಚಟುವಟಿಕೆಯಿಂದ ಕೆಲಸಗಳನ್ನು ನಿರ್ವಹಿಸಲು ಸಮರ್ಥವಾಗಿರುತ್ತದೆ. ಆಗ ಉದಾಸೀನ ಮಾಡದೆ ಧರ್ಮ ಕಾರ್ಯಗಳನ್ನು ಮಾಡುವುದರಿಂದ ಆತ್ಮದ ಏಳಿಗೆಯಾಗುವುದು. ವಯಸ್ಸಾದಂತೆ ದೇಹವು ಮುಪ್ಪು ಮತ್ತು ರೋಗಗಳಿಗೆ ತುತ್ತಾಗುವುದು. ಮೃತ್ಯು ಯಾವ ಕ್ಷಣದಲ್ಲಿ ಆಕ್ರಮಣ ಮಾಡುತ್ತದೋ ಗೊತ್ತಿಲ್ಲ, ಆದ್ದರಿಂದ 'ಗೃಹೀತ ಇವ ಕೇಶೇಷು ಮೃತ್ಯುನಾ ಧರ್ಮಮಾಚರೇತ್' ಅಂದರೆ ಸಾವು ಜುಟ್ಟನ್ನು ಹಿಡಿದಿರುವುದೆಂಬ ಭಾವನೆಯಿಂದ ತಡಮಾಡದೆ ಆದಷ್ಟು ಧರ್ಮ ಕಾರ್ಯಗಳನ್ನು ಮಾಡಬೇಕು. ಸಾಯುವ ಕಾಲದಲ್ಲಿ ರೋಗ ಮತ್ತು ಸಂಕಟದಿಂದ ನರಳುವಾಗ ಏನು ತಾನೇ ಮಾಡಲು ಸಾಧ್ಯವಾದೀತು?॥೪॥

**कामधेनुगुणा विद्या ह्यकाले फलदायिनी।**
**प्रवासे मातृसदृशी विद्या गुप्तं धनं स्मृतम्॥**

ವಿದ್ಯೆಗೆ ಕಾಮಧೇನುವಿನ ಗುಣವಿದೆ. ಅದು ಅಕಾಲದಲ್ಲಿಯೂ ಕೂಡ ಬೇಕಾದ ಫಲವನ್ನು ಕೊಡುತ್ತದೆ. ಪ್ರವಾಸ ಸಮಯದಲ್ಲಿ ನಮ್ಮನ್ನು ತಾಯಿಯಂತೆ ಕಾಪಾಡುತ್ತದೆ. ವಿದ್ಯೆಯನ್ನು ಗುಟ್ಟಾಗಿಟ್ಟಿರುವ ಧನವೆನ್ನುತ್ತಾರೆ.

ಕಾಮಧೇನುವೆಂಬುದು ಸ್ವರ್ಗದಲ್ಲಿರುವ ಹಸುವು. ಇದು ಯಾವಾಗ ಬೇಕಾದರೂ ಕೇಳಿದುದನ್ನೆಲ್ಲ ಕೊಡುತ್ತದೆಂದು ಪ್ರತೀತಿ. ಈ ಶ್ಲೋಕದಲ್ಲಿ ಆಚಾರ್ಯರು ವಿದ್ಯೆಯನ್ನು ಕಾಮಧೇನುವಿಗೆ ಹೋಲಿಸಿದ್ದಾರೆ. ಅದೂ ಕೂಡ ಕಾಮಧೇನುವಿನಂತೆ ಎಲ್ಲ ಕಾಲದಲ್ಲಿಯೂ ನಮಗೆ ಬೇಕಾದ ಫಲವನ್ನು ಒದಗಿಸಿಕೊಟ್ಟು ಪ್ರಯೋಜನಕ್ಕೆ ಬರುತ್ತದೆ. ವಿದ್ಯೆಯಿದ್ದವನು ಎಲ್ಲಿ ಬೇಕಾದರೂ ಸುಖ ಜೀವನವನ್ನು ನಡೆಸಬಲ್ಲನು. ಪ್ರವಾಸದ ಸಮಯದಲ್ಲಿ ವಿದ್ಯೆಯು ತಾಯಿಯಂತೆ ನಮ್ಮ ಹಿತರಕ್ಷಣೆ ಮಾಡಬಲ್ಲದು.

ವಿದ್ಯಾವಂತನು ತಾಯಿಯ ಮಡಿಲಲ್ಲಿರುವಂತೆ ಎಲ್ಲಿಗೆ ಬೇಕಾದರೂ ಸುಖವಾಗಿ ಪ್ರಯಾಣ ಮಾಡಬಲ್ಲನು. ಅದನ್ನು ಯಾರೂ ಅಪಹರಿಸಲು ಸಾಧ್ಯವಿಲ್ಲವಾದ್ದರಿಂದ ಅದನ್ನು ಗುಪ್ತವಾದ ಧನವೆಂದು ಇಲ್ಲಿ ಕರೆಯಲಾಗಿದೆ. 'ವಿದ್ಯಾ ಬಂಧುಜನೋ ವಿದೇಶಗಮನೇ' 'ಹರ್ತುರ್ಯಾತಿ ನ ಗೋಚರಂ' ಮುಂತಾದ ಕವಿವಾಣಿಗಳು ಇದಕ್ಕೆ ಪೂರಕವಾಗಿದೆ. ||೫||

वरमेको गुणी पुत्रो निर्गुणैश्च शतैरपि।
एकश्चन्द्रस्तमो हन्ति न च तारा: सहस्त्रश:।।

ಮೂರ್ಖರಾದ ನೂರು ಮಕ್ಕಳು ಇರುವುದಕ್ಕಿಂತ ಗುಣವಂತನಾದ ಒಬ್ಬ ಮಗನಿರುವುದು ಲೇಸು. ಆಗಸದಲ್ಲಿ ಸಾವಿರಾರು ನಕ್ಷತ್ರಗಳಿದ್ದರೂ ಕತ್ತಲೆಯನ್ನು ಕಳೆಯಲಾರವು. ಒಬ್ಬ ಚಂದ್ರನಿಂದ ಬೆಳದಿಂಗಳು ಹರಡಿ ಕತ್ತಲೆಯು ದೂರವಾಗುವುದು.

ಮೂರ್ಖರಾದ ಮಕ್ಕಳಿಂದ ಕುಲಕ್ಕೆ ಉಪಕಾರವಾಗುವ ಬದಲು ಅಪಕಾರವೇ ಆದೀತು. ಅಂತಹ ಮಕ್ಕಳಿಂದ ಏನೂ ಪ್ರಯೋಜನವಿಲ್ಲ. ಅದಕ್ಕೆ ಬದಲಾಗಿ ಒಬ್ಬ ಗುಣವಂತನಾದ ಮಗನು ಜನಿಸಿದರೆ ಆವನು ವಂಶಕ್ಕೆ ಕೀರ್ತಿಯನ್ನು ತರುವನು. ಇದಕ್ಕೆ ಹೋಲಿಕೆಯಾಗಿ ಆಚಾರ್ಯರು ಚಂದ್ರ ಮತ್ತು ನಕ್ಷತ್ರಗಳ ಉದಾಹರಣೆಯನ್ನು ಕೊಟ್ಟಿರುತ್ತಾರೆ. ಆಕಾಶದಲ್ಲಿಎಲ್ಲ ರಾತ್ರಿಗಳಲ್ಲೂ ಸಾವಿರಾರು ನಕ್ಷತ್ರಗಳು ಪ್ರಕಾಶಿಸುತ್ತಿರುತ್ತವೆ. ಆದರೂ ಕತ್ತಲೆ ಹಾಗೇ ಇರುತ್ತದೆ. ಒಬ್ಬ ಚಂದ್ರನ ಉದಯವಾದರೆ ಕತ್ತಲ ಬೆಳದಿಂಗಳಿಂದ ಹೇಳ ಹೆಸರಿಲ್ಲದಂತೆ ಮಾಯಾವಾಗುತ್ತದೆ. ||೬||

मूर्खश्चिरायुर्जातोऽपि तस्माज्जातमृतो वर:।
मृत: स चाऽल्पदु:खाय यावज्जीवं जडो दहेत्।।

ದೀರ್ಘಾಯುವಾದ ಮೂರ್ಖಪುತ್ರನಿಗಿಂತ ಹುಟ್ಟಿದ ಕೂಡಲೇ ಸತ್ತ ಮಗನೇ ಉತ್ತಮ. ಮೃತನಾದ ಮಗನು ಕೆಲವು ಕಾಲ ಮಾತ್ರ ದುಃಖಕ್ಕೆ ಕಾರಣವಾದರೆ, ಮೂರ್ಖನಾದ ಮಗನು ಜೀವವಿರುವವರೆಗೂ ಸುಡುತ್ತಾನೆ.

ಹುಟ್ಟಿದ ಕೂಡಲೇ ಮಗುವು ಸತ್ತು ಹೋದರೆ, ತಂದೆತಾಯಿಯರು ಕೆಲವು ಕಾಲ ಆ ಮಗುವಿಗಾಗಿ ದುಃಖಿಸುತ್ತಾರೆ. ಕಾಲಕಳೆದಂತೆ ದುಃಖವು ಕಡಿಮೆಯಾಗುತ್ತದೆ. ಪುತ್ರನು ಮೂರ್ಖನಾದರೆ ಪ್ರತಿದಿನವೂ ಅವನ ಮೂರ್ಖಕೆಲಸಗಳಿಂದ ತಂದೆತಾಯಿಯರಿಗೆ ದುಃಖಕ್ಕೆ ಕಾರಣನಾಗುತ್ತಾನೆ. ಮಗನು ಬದುಕಿರುವವರೆಗೂ ಈ ರೀತಿಯ ದುಃಖ ತಪ್ಪಿದ್ದಲ್ಲ. ಆದ್ದರಿಂದ ಮೂರ್ಖನಾದ ಪುತ್ರನು ಮಾತ್ರ ವಂಶದಲ್ಲಿ ಜನಿಸುವುದು

ಬೇಡ.॥೭॥

**कुग्रामवासः कुलहीनसेवा कुभोजनं क्रोधमुखी च भार्या।**
**पुत्रश्च मूर्खो विधवा च कन्या विनाऽग्निना षट् प्रदहन्ति कायम्॥**

ಅನುಕೂಲತೆಗಳಿಲ್ಲದ ಗ್ರಾಮದಲ್ಲಿ ವಾಸಮಾಡುವುದು, ಹೀನಕುಲದಲ್ಲಿ ಜನಿಸಿದ ವ್ಯಕ್ತಿಯ ಸೇವೆ, ಆರೋಗ್ಯಕರವಲ್ಲದ ಕೆಟ್ಟ ಊಟ, ಯಾವಾಗಲೂ ಕೋಪದಿಂದ ಉರಿಯುತ್ತಿರುವ ಮುಖವುಳ್ಳ ಹೆಂಡತಿ, ಮೂರ್ಖನಾದ ಮಗ, ವಿಧವೆಯಾದ ಮಗಳು, ಇವು ಆರೂ ಬೆಂಕಿಯಿಲ್ಲದೆಯೇ ಶರೀರವನ್ನು ಸುಡಬಲ್ಲವು.

ಕುಗ್ರಾಮವೆಂದರೆ ಜೀವನಾವಶ್ಯಕತೆಗಳಿಲ್ಲದ ಗ್ರಾಮವೆಂದೂ, ಕುಜನರು ವಾಸಮಾಡುವ ಗ್ರಾಮವೆಂದೂ ಅರ್ಥಮಾಡಬಹುದು. ಎರಡು ದೃಷ್ಟಿಗಳಿಂದಲೂ ಅಂತಹ ಸ್ಥಳದಲ್ಲಿ ವಾಸ ಮಾಡುವ ಮನುಷ್ಯನು ಅನೇಕ ತೊಂದರೆಗಳನ್ನು ಅನುಭವಿಸಬೇಕಾಗುತ್ತದೆ. ಉತ್ತಮ ಕುಲದಲ್ಲಿ ಜನಿಸದ ವ್ಯಕ್ತಿಯ ನಡೆನುಡಿಗಳು ಕಠಿನವಾಗಿಯೇ ಇರುತ್ತವೆ. ಅಂತಹವರ ಸೇವೆಯನ್ನು ಮಾಡಬೇಕಾಗಿ ಬಂದಾಗ ಅಹಿತಕರವಾದ ಪ್ರಸಂಗಗಳನ್ನು ಎದುರಿಸಬೇಕಾಗುತ್ತದೆ. ಊಟವು ರುಚಿಯೂ, ಶುಚಿಯೂ, ಆರೋಗ್ಯಕರವೂ ಆಗಿರಬೇಕು. ಇಲ್ಲದಿದ್ದರೆ ಅನೇಕ ರೋಗಗಳಿಗೆ ದಾರಿಮಾಡಿಕೊಡುತ್ತದೆ. ಮನೆಯಲ್ಲಿ ಗೃಹಿಣಿ ಕ್ರೋಧಸ್ವಭಾವದವಳಾದರೆ ಪತಿಯು ಬಹಳ ಕಷ್ಟಕೋಟಲೆಗಳನ್ನು ಅನುಭವಿಸಬೇಕಾಗುತ್ತದೆ. ಇನ್ನು ಮೂರ್ಖನಾದ ಮಗನು ಪ್ರತಿನಿತ್ಯ ಅಹಿತಕರವಾದ ಸಂದರ್ಭಗಳನ್ನು ತಂದೊಡ್ಡುತ್ತಾನೆ. ಅವನ ಭವಿಷ್ಯದ ಬಗ್ಗೆಯೂ ಚಿಂತೆ ಕಾಡುತ್ತದೆ. ಕೊನೆಯದಾಗಿ ಸುಖವಾಗಿರಬೇಕಾದ ಮಗಳು ಚಿಕ್ಕ ವಯಸ್ಸಿನಲ್ಲಿ ವಿಧವೆಯಾಗಿ ದುಃಖಿಯಾದರೆ ತಂದೆತಾಯಿಗಳಿಗೆ ಶೂಲಪ್ರಾಯಳಾಗುತ್ತಾಳೆ. ಇವು ಆರೂ ಕೂಡ ಬೆಂಕಿಯಂತೆ ಮನುಷ್ಯನನ್ನು ಸುಡುತ್ತವೆ.॥೮॥

**किं तया क्रियते धेन्वा यां न दोग्ध्री न गर्भिणी।**
**कोऽर्थः पुत्रेण जातेन यो न विद्वान् न भक्तिमान्॥**

ಹಸುವು ಗರ್ಭಧರಿಸದೆ, ಹಾಲುಕರೆಯದೆ ಇದ್ದರೆ, ಅಂತಹ ಹಸುವನ್ನು ಇಟ್ಟುಕೊಂಡು ಮಾಡುವುದೇನು? ಹಾಗೆಯೇ ಹುಟ್ಟಿದ ಮಗನು ವಿದ್ಯಾವಂತ ಮತ್ತು ಮಾತಾಪಿತೃಭಕ್ತನಾಗದಿದ್ದರೆ ಅಂತಹ ಮಗನಿಂದ ಏನು ಪ್ರಯೋಜನ?

ಹಸುವನ್ನು ಸಾಕುವ ಉದ್ದೇಶವೆಂದರೆ ಅದು ಗರ್ಭಧರಿಸಿ, ಹೆಚ್ಚು ಕರುಗಳನ್ನು

ಮತ್ತು ಹಾಲನ್ನು ಕೊಡಲಿ ಎಂದು. ಈ ಉದ್ದೇಶ ಸಫಲವಾಗದಿದ್ದರೆ, ಅಂತಹ ಹಸುವನ್ನು ಸಾಕಲು ಯಾರೂ ಇಷ್ಟಪಡುವುದಿಲ್ಲ. ಹಾಗೆಯೇ ಮಗನು ವಿದ್ಯಾವಂತನೂ, ಸುಶಿಕ್ಷಿತನೂ, ಭಕ್ತಿ ಶ್ರದ್ಧೆಗಳುಳ್ಳವನೂ ಆಗಬೇಕೆಂದು ಎಲ್ಲರೂ ಬಯಸುತ್ತಾರೆ. ಮಗನು ಹಾಗೆ ಆಗದೆ ಇದ್ದರೆ ಅಂತಹ ಮಕ್ಕಳಿಂದ ದುಃಖವೇ ಆಗುವುದೇ ಹೊರತು ಸುಖವಾಗುವುದಿಲ್ಲ.॥೯॥

संसार तापदग्धानां त्रयो विश्रान्तिहेतवः।
अपत्यं च कलत्रं च सतां संगतिरेव च॥

ಸಂಸಾರ ತಾಪದಲ್ಲಿ ಸಿಕ್ಕಿ ಬೇಯುತ್ತಿರುವ ಜನರಿಗೆ ಸಮಾಧಾನವನ್ನು ತರುವ ವಿಷಯಗಳು ಮೂರು. ಅವುಗಳೆಂದರೆ ಮಗ, ಹೆಂಡತಿ ಮತ್ತು ಸತ್ಪುರುಷರ ಸಮಾಗಮವು.

ಸಂಸಾರದಲ್ಲಿ ಜನರು ಅನೇಕ ಕಷ್ಟಕೋಟಲೆಗಳನ್ನು ಎದುರಿಸಬೇಕಾಗುತ್ತದೆ. ಇಂತಹ ದುಃಖಗಳ ನಡುವೆ ಅವರಿಗೆ ಸಮಾಧಾನವನ್ನು ನೀಡುವ ಅಂಶಗಳೆಂದರೆ ಮಗುವಿನ ಮುದ್ದು ಮುಖ. ಪತ್ನಿಯ ಪ್ರೀತಿಯ ಸೇವೆ ಮತ್ತು ಸತ್ಪುರುಷರು ನೀಡುವ ಹಿತವಚನಗಳು. ಇವುಗಳ ಆಸರೆಯಲ್ಲಿ ಎಂತಹ ಕಷ್ಟವನ್ನಾದರೂ ಜನರು ಎದುರಿಸಬಲ್ಲರು.॥೧೦॥

सकृज्जल्पन्ति राजानः सकृज्जल्पन्ति पण्डिताः।
सकृत् कन्याः प्रदीयन्ते त्रीण्येतानि सकृत्सकृत्॥

ರಾಜರು ಒಂದು ಸಲ ಮಾತ್ರ ಆಜ್ಞೆ ಮಾಡುವರು. ಪಂಡಿತರೂ ಒಂದು ಸಲ ಮಾತ್ರ ಹೇಳುತ್ತಾರೆ. ಕನ್ಯೆಯೂ ಒಂದು ಸಲ ಮಾತ್ರ ವಿವಾಹದಲ್ಲಿ ಕೊಡಲ್ಪಡತಕ್ಕವಳು. ಇವು ಮೂರೂ ಎರಡನೆಯ ಸಲ ಮಾಡತಕ್ಕವುಗಳಲ್ಲ.

ರಾಜರು ಆಜ್ಞೆಯನ್ನು ನೀಡುವ ಮೊದಲು ಮಂತ್ರಿಗಳೊಡನೆ ಸಮಾಲೋಚನೆ ನಡೆಸಿ ಪ್ರಜೆಗಳಿಗೆ ಉಪಯೋಗವಾಗುವಂತಹ ಆಜ್ಞೆಯನ್ನು ನೀಡುತ್ತಾರೆ. ಅದನ್ನು ಯಾರಿಗೂ ಬದಲಾಯಿಸಲು ಸಾಧ್ಯವಿಲ್ಲ. ಪಂಡಿತರೂ ಕೂಡ ಆಳವಾಗಿ ವಿಚಾರಮಾಡಿ, ವಿಷಯವನ್ನು ಚೆನ್ನಾಗಿ ಅಭ್ಯಾಸಮಾಡಿ ನಂತರ ಸ್ಪಷ್ಟವಾದ ಅಭಿಪ್ರಾಯಗಳನ್ನು ಮಂಡಿಸುತ್ತಾರೆ. ಅದು ಸರಿಯೆಂದು ಅವರಿಗೆ ಪೂರ್ಣ ನಂಬಿಕೆಯಿರುತ್ತದೆ. ಆದ್ದರಿಂದ ಅವರು ಅಭಿಪ್ರಾಯವನ್ನು ಬದಲಿಸುತ್ತ ಹೋಗುವುದಿಲ್ಲ. ಹಾಗೆ ಬದಲಾಯಿಸುವವನು ಪಂಡಿತನೇ ಅಲ್ಲ. ಕನ್ಯೆಯನ್ನು ಕೂಡ ಒಬ್ಬ ವರನಿಗೆ ದಾನಮಾಡಿದ ಮೇಲೆ ಆಕೆ ಪತಿಯ

ಸ್ವತ್ತಾಗುತ್ತಾಳೆ. ಅವಳನ್ನು ಮತ್ತೊಬ್ಬ ವರನಿಗೆ ಧಾರೆಯೆರೆದು ಕೊಡಲು ಸಾಧ್ಯವಿಲ್ಲ. ಈ ಮೂರು ಒಂದೇ ಸಲ ವಿಚಾರಮಾಡಿ ನಡೆಸಬೇಕಾದ ಕೃತಿಗಳು.।।೧೧।।

एकाकिना तपो द्वाभ्यां पठनं गायनं त्रिभिः।
चतुर्भिर्गमनं क्षेत्रं पञ्चभिर्बहुभिर्रणः।।

ತಪಸ್ವಿಯಾದವನು ಒಬ್ಬನೇ ಇದ್ದು ತಪವನ್ನು ಸಾಧಿಸಬೇಕು. ವಿದ್ಯಾಭ್ಯಾಸವನ್ನು ಇಬ್ಬರು ಕೂಡಿ ಮಾಡುವುದು ಒಳ್ಳೆಯದು. ಹಾಡುವಾಗ ಮೂರು ಜನರು (ಪಕ್ಕವಾದ್ಯದವರು) ಇದ್ದರೆ ಶೋಭೆ ತರುವುದು. ದಾರಿ ನಡೆಯುವಾಗ ನಾಲ್ಕು ಜನರೊಂದಿಗೆ ಕೂಡಿ ಹೋಗಬೇಕು. ಕೃಷಿ ಸಂಬಂಧವಾದ ಕಾರ್ಯಗಳಿಗೆ ಐದು ಜನರು ಬೇಕಾಗುತ್ತದೆ. ರಣರಂಗದಲ್ಲಿ ಬಹಳ ಜನರು ಬೇಕಾಗುತ್ತಾರೆ.

ತಪಸ್ವಿಯಾದವನು ಲೋಕವ್ಯವಹಾರದಿಂದ ದೂರವಿದ್ದಷ್ಟೂ ಒಳ್ಳೆಯದು. ಆಗ ಅವನ ತಪಸ್ಸು ವೃದ್ಧಿಯಾಗುತ್ತದೆ. ವಿದ್ಯಾಭ್ಯಾಸ ಮಾಡುವಾಗ ಇಬ್ಬರು ಕೂಡಿ ಮಾಡಿದರೆ ಪರಸ್ಪರ ವಿಚಾರ ವಿನಿಮಯ ನಡೆಸಿ ಹೆಚ್ಚಿನ ವಿಷಯಗಳನ್ನು ಸಂಗ್ರಹಿಸಬಹುದು. ಸಂಗೀತದ ಸಾಧನೆಗೆ ಶ್ರುತಿ ಮತ್ತು ಪಕ್ಕವಾದ್ಯಗಳು ಬೇಕಾಗುತ್ತವೆ. ಅವುಗಳನ್ನು ಇಬ್ಬರು ಒದಗಿಸಿದರೆ ಉತ್ತಮಸಾಧನೆ ಮಾಡಬಹುದು. ಯಾತ್ರೆ ಮಾಡುವಾಗ ಒಬ್ಬನೇ ಹೊರಟರೆ ಕಳ್ಳಕಾಕರ ಭಯ ಹೆಚ್ಚು. ವಾಹನ ಸೌಕರ್ಯವಿಲ್ಲದಿದ್ದ ಹಿಂದಿನ ಕಾಲದಲ್ಲಿ ಒಬ್ಬರೇ ಹೋಗುವುದು ಬಹಳ ಅಪಾಯಕರವಾಗಿತ್ತು. ನಾಲ್ಕು ಜನರೊಂದಿಗೆ ಕೂಡಿಕೊಂಡು ಹೋದರೆ ಕಷ್ಟಸಮಯದಲ್ಲಿ ಸಹಾಯ ಒದಗುತ್ತದೆ. ಕೃಷಿ ಕಾರ್ಯದಲ್ಲಿ ಉಳುವುದು, ಬೀಜ ಬಿತ್ತುವುದು, ಸಸಿಯನ್ನು ನಾಟಿ ಮಾಡುವುದು, ಗೊಬ್ಬರ ಹಾಕುವುದು, ಕಳೆಕೀಳುವುದು ಮುಖ್ಯವಾದ ಅಂಗಗಳು. ಇವೆಲ್ಲವನ್ನೂ ಒಬ್ಬನೇ ಮಾಡುವುದು ಕಷ್ಟ. ಅದಕ್ಕಾಗಿ ಹೆಚ್ಚು ಜನರ ಸಹಾಯದ ಅವಶ್ಯಕತೆಯಿರುತ್ತದೆ. ಯುದ್ಧದಲ್ಲಿಯಂತೂ ಎಷ್ಟು ಹೆಚ್ಚು ಸೈನಿಕರಿದ್ದರೆ ಅಷ್ಟು ಉತ್ತಮ. ।।೧೨।।

सा भार्या या शुचिर्दक्षा सा भार्या या पतिव्रता।
सा भार्या या पतिप्रीता सा भार्या सत्यवादिनी।।

ಯಾರು ಶುದ್ಧಳೂ ದಕ್ಷಳೂ ಆಗಿರುತ್ತಾಳೆಯೋ ಅವಳೇ ನಿಜವಾದ ಪತ್ನಿ. ಯಾರು ಪತಿವ್ರತೆಯೋ ಅವಳೇ ನಿಜವಾದ ಹೆಂಡತಿ. ಯಾರು ಪತಿಗೆ ಪ್ರಿಯಳಾಗಿರುತ್ತಾಳೆಯೋ ಅವಳೇ ನಿಜವಾದ ಪತ್ನಿ. ಯಾರು ಸತ್ಯವನ್ನೇ ನುಡಿಯುತ್ತಾಳೆಯೋ ಅವಳೇ ಭಾರ್ಯೆ.

ಪತ್ನಿಯು ಹಿತಳಾಗಿದ್ದಾಗ ಮಾತ್ರ ಪತಿಗೆ ಸುಖವು ಸಿಕ್ಕುತ್ತದೆ. ಪತ್ನಿಯಾದವಳು

ಕಾಯೇನ-ವಾಚಾ ಮತ್ತು ಮನಸಾ ಶುದ್ಧಳಾಗಿರಬೇಕು. ಮನೆಯ ಎಲ್ಲ ರೀತಿಯ ನಿರ್ವಹಣೆಯಲ್ಲಿ ಅವಳು ಸಮರ್ಥಳಾಗಿರಬೇಕು. ಪತಿಯನ್ನು ಬಿಟ್ಟು ಅನ್ಯರನ್ನು ಮನಸ್ಸಿನಲ್ಲಿಯೂ ನೆನೆಯಬಾರದು. ಪತಿಗೆ ಪ್ರಿಯವಾದುದನ್ನೆ ಮಾಡಲು ಆಸಕ್ತಳಾಗಿರಬೇಕು. ಪತಿಯ ಸಂತೋಷವೇ ತನ್ನ ಸಂತೋಷವೆಂದು ಭಾವಿಸುವವಳಾಗಬೇಕು. ಪತಿಯಿಂದ ಏನನ್ನು ಮುಚ್ಚಿಡದೆ ಸತ್ಯವನ್ನು ಹೇಳುವವಳಾಗಿರಬೇಕು. ಇಂತಹ ಪತ್ನಿಯು ದೊರೆತರೆ ಪುರುಷನು ಕೃತಾರ್ಥನಾಗುವನು. ।।೧೩।।

अपुत्रस्य गृहं शून्यं दिशः शून्यास्त्वबान्धवाः।
मूर्खस्य हृदयं शून्यं सर्वशून्या दरिद्रता।।

ಪುತ್ರನಿಲ್ಲದ ಮನೆಯ ಶೂನ್ಯವೆನಿಸುವುದು, ಬಂಧುಬಾಂಧವರು ಕಷ್ಟಸುಖಗಳನ್ನು ಹಂಚಿಕೊಳ್ಳಲು ಅವಶ್ಯಕ. ಅಂತಹ ಹಿತವನ್ನು ಕೋರುವ ಬಂಧುಗಳು ಇಲ್ಲದಿದ್ದರೆ ದಿಕ್ಕುಗಳೆಲ್ಲ ಶೂನ್ಯವೆನಿಸುವುದು. ಮೂರ್ಖರು ಯಾವುದನ್ನೂ ಅರ್ಥಮಾಡಿಕೊಂಡು ನಡೆಯಲಾರರು. ಆದಕ್ಕಾಗಿ ಅವರ ಹೃದಯವು ಶೂನ್ಯವೆಂದು ಆಚಾರ್ಯರು ಅಭಿಪ್ರಾಯಪಡುತ್ತಾರೆ. ಅದರೆ ಬಡವನಾದವನಿಗೆ ಎಲ್ಲ ಕಡೆಗಳಲ್ಲಿಯೂ ಶೂನ್ಯತೆಯ ಅನುಭವವಾಗುತ್ತದೆ.

ಮನೆಗೆ ಮಗುವೇ ಭೂಷಣ. ಮಗುವಿನ ಮುದ್ದು ಮಾತು, ನಗೆಗಳಿಲ್ಲದ ಮನೆ ಶೂನ್ಯಗೃಹಕ್ಕೆ ಸಮಾನ. ಹಾಗೆಯೇ ಹಬ್ಬ ಹರಿದಿನಗಳಲ್ಲಿ, ದುಃಖದ ಸಂದರ್ಭಗಳಲ್ಲಿ ಸಂತೋಷವನ್ನು ಹಂಚಿಕೊಳ್ಳಲು ಮತ್ತು ದುಃಖವನ್ನು ಕಡಿಮೆಮಾಡಲು ಬಂಧುಗಳು ಬೇಕು. ಅಂತಹ ಸಂದರ್ಭದಲ್ಲಿಯೇ ನಿಜವಾದ ಬಂಧುಗಳ ಸಹಾಯ ಬೇಕಾಗುವುದು. ಮೂರ್ಖರ ಹೃದಯದಲ್ಲಿ ವಿದ್ಯೆಯಾಗಲೀ, ಒಳ್ಳೆಯ ಗುಣಗಳಾಗಲೀ ಇರುವುದಿಲ್ಲ. ಇದೆಲ್ಲಕ್ಕೂ ಮೀರಿದ ಪರಿಸ್ಥಿತಿಯೆಂದರೆ ಬಡತನ. ಬಡವನಾದವನಿಗೆ ದೈನಂದಿನ ಜೀವನದ ಅವಶ್ಯಕತೆಗಳಿಗೆ ತೊಂದರೆ ಇರುವುದರಿಂದ ಎಲ್ಲವೂ ಶೂನ್ಯವೆನಿಸುತ್ತದೆ.।।೧೪।।

अनभ्यासे विषं शास्त्रमजीर्णे भोजनं विषम्।
दरिद्रस्य विषं गोष्ठी वृद्धस्य तरुणी विषम्।।

ಶಾಸ್ತ್ರವು ಸರಿಯಾಗಿ ಅಭ್ಯಾಸ ಮಾಡಿ ತಿಳಿದುಕೊಳ್ಳದಿದ್ದರೆ ವಿಷಕ್ಕೆ ಸಮಾನವಾಗುತ್ತದೆ. ಅಜೀರ್ಣದಿಂದ ಬಳಲುತ್ತಿರುವವನಿಗೆ ಊಟವೇ ವಿಷ. ಬಡವನಾದವನಿಗೆ ಜನಗಳ

ಸಮುದಾಯವು ವಿಷರೂಪವಾದರೆ ವೃದ್ಧನಿಗೆ ತರುಣಿಯು ವಿಷದಂತೆ ಭಾಸವಾಗುತ್ತಾಳೆ.

ಶಾಸ್ತ್ರಗಳು ನಿರಂತರವಾದ ಅಭ್ಯಾಸವನ್ನು ಬಯಸುತ್ತವೆ. 'ಸ್ವಾಧ್ಯಾಯ ಪ್ರವಚನಾಭ್ಯಾಂ ನ ಪ್ರಮದಿತವ್ಯಂ' ಎಂದು ಉಪನಿಷತ್ತು ಹೇಳುತ್ತದೆ. ಅಂತಹ ಅಭ್ಯಾಸವಿಲ್ಲದಿದ್ದರೆ ಅಪಾರ್ಥಕ್ಕೆ ಎಡೆಗೊಟ್ಟು ಅಹಿತಕರವಾದ ಪರಿಣಾಮಗಳನ್ನುಂಟುಮಾಡುತ್ತದೆ. ಮೊದಲೇ ಆಹಾರ ಹೆಚ್ಚಾಗಿ ಅಜೀರ್ಣವಾಗಿರುವಾಗ ಮತ್ತೆ ಊಟ ಮಾಡಿದರೆ ಆರೋಗ್ಯ ಹದಗೆಡುವುದರಿಂದ ಅದನ್ನು ವಿಷ ಸಮಾನವೆಂದು ಹೇಳಿದೆ. ಬಡವನಾದವನು ಯಾರೊಂದಿಗೂ ಸೇರದಿದ್ದರೆ ತನ್ನ ಪರಿಸ್ಥಿತಿಯನ್ನು ಮುಚ್ಚಿಡಬಹುದು. ಅವನು ಜನರ ಮಧ್ಯೆಯಿದ್ದರೆ ಅವರಿಂದ ಅವಮಾನವನ್ನು ಅನುಭವಿಸಬೇಕಾಗುತ್ತದೆ. ವೃದ್ಧನಾದವನಿಗೆ ತರುಣಿಯನ್ನು ಸಂತೋಷಪಡಿಸುವ ಶಕ್ತಿಯಿರುವುದಿಲ್ಲ. ಆದ್ದರಿಂದ ಅವಳು ಹಿತಕಾರಿಯೆನಿಸುವುದಿಲ್ಲ.॥೧೫॥

त्यजेद्धर्मं दयाहीनं विद्याहीनं गुरुं त्यजेत्।
त्यजेत्क्रोधमुखीं भार्यां निःस्नेहान् बान्धवांस्त्यजेत्॥

ದಯೆಯನ್ನು ಬೋಧಿಸದ ಧರ್ಮವನ್ನು ತ್ಯಜಿಸಬೇಕು. ಗುರುವು ವಿದ್ಯಾವಂತನಲ್ಲದಿದ್ದರೆ ಅವನನ್ನು ಬಿಡಬೇಕು. ಹೆಂಡತಿಯು ಕೋಪಿಷ್ಟ ಸ್ವಭಾವವನ್ನು ಹೊಂದಿದ್ದರೆ ಅವಳನ್ನು ಬಿಡಬೇಕಾಗುತ್ತದೆ. ಬಂಧುಗಳು ಮಿತ್ರಭಾವವನ್ನು ಹೊಂದಿರದಿದ್ದರೆ ಅವರನ್ನು ಬಿಡಬೇಕು.

'ದಯೆಯೇ ಧರ್ಮದ ಮೂಲವಯ್ಯ' ಎಂಬ ಶರಣರು ಹಾಡಿದ್ದಾರೆ. ಯಾವ ಧರ್ಮವಾದರೂ ದಯಾಭಾವನೆಯನ್ನು ಬೋಧಿಸಿ, ಅಹಿಂಸೆಯನ್ನು ಎತ್ತಿ ಹಿಡಿಯಬೇಕು. ಇಲ್ಲದಿದ್ದರೆ ಅಂತಹ ಧರ್ಮವು ಅನುಸರಿಸಲು ಯೋಗ್ಯವಲ್ಲ. ಗುರುವು ಶಿಷ್ಯರಿಗೆ ವಿದ್ಯೆಯನ್ನು ಬೋಧಿಸಬೇಕಾದವನು. ಅವನಿಗೆ ವಿಷಯಗಳು ತಿಳಿಯದೆ ಇದ್ದರೆ ಶಿಷ್ಯರಿಗೆ ಕಲಿಸಲು ಸಾಧ್ಯವಿಲ್ಲ. ಅಂತಹ ಗುರುಗಳ ಬಳಿ ವ್ಯಾಸಂಗ ಮಾಡುವುದರಲ್ಲಿ ಅರ್ಥವಿಲ್ಲ. ಮಡದಿಯಾದವಳು ಸಮಾಧಾನದಿಂದ ಮನೆಯ ಜನರು ಮತ್ತು ಅತಿಥಿಗಳನ್ನು ಆದರಿಸಬೇಕು. ಅವಳೇ ಕೋಪದಿಂದ ಉರಿಯುತ್ತಿದ್ದರೆ ಗೃಹಕೃತ್ಯಗಳು ಸರಿಯಾಗಿ ನೆರವೇರುವುದಿಲ್ಲ. ಅಂತಹ ಸ್ತ್ರೀಯ ಜೊತೆ ಸಂಸಾರ ಮಾಡುವುದಕ್ಕಿಂತ ಅವಳನ್ನು ತ್ಯಜಿಸುವುದರಿಂದಲೇ ಪರಿಸ್ಥಿತಿ ಉತ್ತಮಗೊಳ್ಳುತ್ತದೆ. ಬಂಧುಗಳು ಆತ್ಮೀಯರಾಗಿದ್ದರೆ ಕಷ್ಟಸುಖಗಳಲ್ಲಿ ಪಾಲ್ಗೊಳ್ಳುತ್ತಾರೆ. ಅಸೂಯೆಪಡುವ ಬಂಧುಗಳು ಬರದಿದ್ದರೆ ಉತ್ತಮ. ॥೧೬॥

अथवा जरा मनुष्याणां वाजिनां बन्धनं जरा।
अमैथुनं जरा स्त्रीणां वस्त्राणामातपो जरा॥

ಮನುಷ್ಯರಿಗೆ ಒಡೆಯರಿಲ್ಲದಿರುವುದು, ಕುದುರೆಗಳನ್ನು ಸದಾ ಕಟ್ಟಿಹಾಕುವುದು, ಸ್ತ್ರೀಯರಿಗೆ ವಿವಾಹ ಸಂಬಂಧವಿಲ್ಲದಿರುವುದು, ಬಟ್ಟೆಗಳಿಗೆ ಬಿಸಿಲು ವೃದ್ಧಾಪ್ಯದಂತೆ ಬಲಹೀನತೆಗೆ ಕಾರಣವಾಗುವುದು.

ಮನುಷ್ಯರಿಗೆ ಸರ್ವತಂತ್ರ ಸ್ವತಂತ್ರ ಒಳ್ಳೆಯದಲ್ಲ. ಸ್ವಚ್ಛಂದ ಪ್ರವೃತ್ತಿಯು ಮನಸ್ಸಿಗೆ ಬಂದಂತೆ ಜೀವನ ನಡೆಸುವಂತೆ ಪ್ರೇರೇಪಿಸಿ ಅವನನ್ನು ದುರ್ಮಾರ್ಗದಲ್ಲಿ ನಡೆಯುವಂತೆ ಮಾಡುವುದು. ಸರಿಯಾದ ಬುದ್ಧಿ ಹೇಳುವವರು ಇದ್ದರೆ ಹೀಗೆ ಆಗುವುದಿಲ್ಲ. ನೀತಿ ನಿಯಮಗಳಿಲ್ಲದ ಜೀವನದಲ್ಲಿ ಮುಪ್ಪು ಬಹಳ ಬೇಗ ಹತ್ತಿರವಾಗುವುದು. ಕುದುರೆಗಳಿಗೆ ವ್ಯಾಯಾಮ ಅಗತ್ಯ. ದಿನವೂ ಓಡಿಸುತ್ತಿದ್ದರೆ ಅವು ಚಟುವಟಿಕೆಯಿಂದ ಇದ್ದು ಪಂದ್ಯಗಳಲ್ಲಿ, ಯುದ್ಧಗಳಲ್ಲಿ ಉಪಯುಕ್ತವಾಗುತ್ತವೆ. ಇಲ್ಲದಿದ್ದರೆ ಅವು ಬಲಹೀನವಾಗುತ್ತವೆ. ಸ್ತ್ರೀಯರು ಹಿತವಾದ ವಿವಾಹ ಸಂಬಂಧದಿಂದ ಸಂತುಷ್ಟರೂ,ಆರೋಗ್ಯವಂತರೂ ಆಗಿರುತ್ತಾರೆ. ಇಲ್ಲದಿದ್ದರೆ ಜನರ ನಿಂದೆ ಮತ್ತು ಚಿಂತೆಗಳಿಂದ ಬೇಗ ವಯಸ್ಸಾದವರಂತೆ ಆಗುತ್ತಾರೆ. ಬಟ್ಟೆಗಳನ್ನು ನೆರಳಿನಲ್ಲಿ ಒಣಗಿಸಿದರೆ ಅವುಗಳ ಬಣ್ಣ ಮಾಸುವುದಿಲ್ಲ, ನೇರವಾದ ಬಿಸಿಲಿನಲ್ಲಿ ಬಣ್ಣ ಹೋಗುತ್ತದೆ. ಬೇಗ ಹಳೆಯ ಬಟ್ಟೆಯಂತೆ ಕಾಣುತ್ತದೆ. ॥೧೭॥

कः कालः कानि मित्राणि को देशः कौ व्ययाऽऽगमौ।
कश्चाऽहं का च मे शक्तिरिति चिन्त्यं मुहुर्मुहुः॥

ಮನುಷ್ಯನು ಕೆಲವು ವಿಚಾರಗಳನ್ನು ಮತ್ತೆ ಮತ್ತೆ ಆಲೋಚನೆ ಮಾಡಬೇಕಾಗುತ್ತದೆ. ಅವುಗಳೆಂದರೆ (೧) ಯಾವುದು ಯಾವ ಕೆಲಸಕ್ಕೆ ಸರಿಯಾದ ಸಮಯ? (೨) ಯಾರು ನಿಜವಾದ ಸ್ನೇಹಿತರು. (೩) ಯಾವ ದೇಶವು ಉತ್ತಮ? (೪) ಎಷ್ಟು ಖರ್ಚು ಮಾಡಬೇಕು ಮತ್ತು ಎಷ್ಟು ಆದಾಯವಿದೆ. (೫) ನಾನು ಯಾರು? (೬) ನನ್ನ ಶಕ್ತಿಯು ಎಷ್ಟಿದೆ?

ಮನುಷ್ಯನು ಸಂತೋಷವಾಗಿರಬೇಕಾದರೆ ಕೆಲವು ವಿಚಾರಗಳ ಬಗ್ಗೆ ಹೆಚ್ಚಿನ ಗಮನ ಬೇಕಾಗುತ್ತದೆ. ಮೊದಲನೆಯದಾಗಿ ಯಾವ ಕೆಲಸವನ್ನು ಯಾವಾಗ ಮಾಡಬೇಕೋ ಅದನ್ನು ಯೋಚಿಸಿ ಮಾಡಬೇಕು. ಎಲ್ಲರನ್ನೂ ನಂಬಬಾರದು. ಮಿತ್ರರನ್ನು ಪರೀಕ್ಷಿಸಿ ಅವರ ಮೈತ್ರಿಯನ್ನು ದೃಢಪಡಿಸಕೊಳ್ಳಬೇಕು. ತಾನು ಇರುವ ಪ್ರದೇಶ ಹೇಗಿದೆ? ಇದಕ್ಕಿಂದ ಉತ್ತಮವಾದ ಸ್ಥಳವಿದೆಯೆ? ಎಲ್ಲಿದ್ದರೆ

ಸುಖವಾಗಿರಬಹುದೆಂದು ವಿಮರ್ಶಿಸಬೇಕು. ಬರುವ ಆದಾಯ ಮತ್ತು ಮಾಡುವ ಖರ್ಚಿನಲ್ಲಿ ಸಮತೋಲನವಿರಬೇಕು. ಕಷ್ಟಕಾಲಕ್ಕಾಗಿ ಹಣವನ್ನು ಉಳಿಸಿ ಕೊಳ್ಳಬೇಕಾಗುತ್ತದೆ. ಆತ್ಮಾವಲೋಕನವು ಮಾನಸಿಕ ಆರೋಗ್ಯ ದೃಷ್ಟಿಯಿಂದ ಅವಶ್ಯಕ. ತನ್ನ ಶಕ್ತಿಯನ್ನು ಮೀರಿ ಯಾವುದನ್ನೂ ಮಾಡಲು ಹೋಗಬಾರದು.।।೧೮।।

जनिता चोपनेता च यस्तु विद्यां प्रयच्छति।
अन्नदाता भयत्राता पञ्चैते पितरः स्मृताः।।

ಜನ್ಮ ಕೊಟ್ಟ ತಂದೆ, ಉಪನಯನ ಸಂಸ್ಕಾರ ನಡೆಸಿದವನು, ವಿದ್ಯಾದಾನ ಮಾಡಿದ ಗುರು, ಅನ್ನವನ್ನು ನೀಡಿದವನು ಮತ್ತು ಭಯದಿಂದ ಕಾಪಾಡಿದವನು ಇವರು ಐವರೂ ಪಿತೃಸಮಾನರು.

ಜನ್ಮ ಕೊಟ್ಟ ತಂದೆ ನಮ್ಮ ದೇಹಕ್ಕೆ ಕಾರಣನಾಗುವನು, ಉಪನಯನ ಸಂಸ್ಕಾರದಿಂದ ಬ್ರಾಹ್ಮಣನಿಗೆ ಎರಡನೆಯ ಜನ್ಮ. ಇದರಿಂದ ವೇದಾಭ್ಯಾಸಕ್ಕೆ ಅರ್ಹತೆ ದೊರೆಯುವುದು. ವಿದ್ಯೆ ಉತ್ತಮ ಸಂಸ್ಕಾರವನ್ನು ಕೊಡುವುದು. ಶರೀರ ಪೋಷಣೆ ಅನ್ನದಿಂದ ಆದರೆ, ಅದಕ್ಕೆ ಆಪತ್ತು ಒದಗಿದಾಗ ಪರಿಹಾರ ಮಾಡುವುದು ಅವಶ್ಯ. ಇವು ಐದೂ ಉತ್ತಮ ಜೀವನದ ಅವಶ್ಯಕತೆಗಳಾದ್ದರಿಂದ ಇವನ್ನು ಒದಗಿಸಿಕೊಡುವವರಿಗೆ ತಂದೆಗೆ ನೀಡುವ ಗೌರವ ಸಲ್ಲುವುದು. ।।೧೯।।

राजपत्नी गुरोः पत्नी मित्रपत्नी तथैव च।
पत्नीमाता स्वमाता च पञ्चैता मातरः स्मृताः।।

ರಾಜನ ಮಡದಿ, ಗುರುಪತ್ನಿ, ಗೆಳೆಯನ ಹೆಂಡತಿ, ಹೆಂಡತಿಯ ತಾಯಿ, ತನ್ನ ತಾಯಿ ಇವರು ಐವರೂ ಮಾತೃಸ್ಥಾನದಲ್ಲಿ ಇರತಕ್ಕವರು. ರಾಜನ ಪತ್ನಿಯು ರಾಜನಂತೆಯೇ ಗೌರವಿಸಲು ಯೋಗ್ಯಳಾದವಳು. ಗುರುಪತ್ನಿಯು ಗುರುಗಳ ಆಶ್ರಮದಲ್ಲಿರುವಾಗ ಅನ್ನ ನೀಡಿ ಮಕ್ಕಳಂತೆಯೇ ಶಿಷ್ಯರನ್ನು ಸಲಹುತ್ತಾಳೆ. ಮಿತ್ರನು ಅತ್ಯಂತ ಆಪ್ತನಾದುದರಿಂದ ಮಿತ್ರನ ಪತ್ನಿಯನ್ನು ದುರುದ್ದೇಶದಿಂದ ನೋಡದೆ ತಾಯಿಯಂತೆ ಗೌರವಿಸಬೇಕು. ಹೆಂಡತಿಯ ತಾಯಿಯು ಮಗಳನ್ನು ಧಾರೆಯೆರೆದುಕೊಟ್ಟು ಗೃಹಸ್ಥನ ಕರ್ತವ್ಯಗಳಿಗೆ ಅವಕಾಶ ಮಾಡಿಕೊಡುತ್ತಾಳೆ. ತನ್ನ ತಾಯಿಯಂತೆಯೇ ಆಕೆಯೂ ಗೌರವಕ್ಕೆ ಪಾತ್ರಳು. ಇವರೆಲ್ಲರನ್ನೂ ಮನುಷ್ಯನು ಪೂಜ್ಯಭಾವನೆಯಿಂದ ಕಾಣಬೇಕು. ।।೨೦।।

अग्निर्देवो द्विजातीनां मुनीनां हृदि दैवतम्।

प्रतिमा स्वल्पबुद्धीनां सर्वत्र समदर्शिन:॥

ದ್ವಿಜರಿಗೆ ಅಗ್ನಿಯೇ ದೈವತವು. ಮುನಿಗಳು ಹೃದಯದಲ್ಲಿಯೇ ಪರಮಾತ್ಮನನ್ನು ಕಾಣಬಲ್ಲರು. ಇಷ್ಟು ಸಾಧನೆಯಿಲ್ಲದ ಸಾಮಾನ್ಯರಿಗೆ ಪ್ರತಿಮೆಯಲ್ಲಿ ದೈವೀ ಭಾವನೆಯಿರುತ್ತದೆ. ಎಲ್ಲವನ್ನೂ ಸಮನಾಗಿ ಕಾಣುವ ವಿಶೇಷಜ್ಞರು ಪರಮಾತ್ಮನನ್ನು ಎಲ್ಲೆಡೆಯಲ್ಲಿಯೂ ಕಾಣಬಲ್ಲರು.

ದ್ವಿಜರು ವೇದಾಧಿಕಾರವುಳ್ಳವರು. ಅವರು ಯಜ್ಞಯಾಗಾದಿಗಳ ಮೂಲಕ ದೇವರನ್ನು ಆರಾಧಿಸುತ್ತಾರೆ. ಇದಕ್ಕೆ ಅವಶ್ಯವಾದ ಅಗ್ನಿಯೇ ಅವರಿಗೆ ದೇವರು. ಸಂನ್ಯಾಸಿಗಳು ಹೃದಯಕಮಲದಲ್ಲಿ ದೇವರನ್ನು ಧ್ಯಾನದ ಮೂಲಕ ಕಂಡುಕೊಳ್ಳಬಲ್ಲರು. ಇಷ್ಟು ಸಾಮರ್ಥ್ಯವಿರದ ಸಾಮಾನ್ಯರು ಪ್ರತಿಮೆಗಳನ್ನು ದೇವರೆಂದು ಭಾವಿಸಿ ಪೂಜಿಸುವರು. ಎಲ್ಲರನ್ನೂ ಸಮನಾಗಿ ಕಾಣಬಲ್ಲ ಉದಾರ ಹೃದಯಿಗಳು ಎಲ್ಲೆಡೆಯಲ್ಲಿಯೂ ಪರಮಾತ್ಮನ ಇರವನ್ನು ಗುರ್ತಿಸಬಲ್ಲರು. ॥೨೧॥

## ಅಧ್ಯಾಯದ ಸಾರಾಂಶ

ಗರ್ಭದಲ್ಲಿರುವ ಸ್ಥಿತಿಯಲ್ಲಿಯೇ ಜೀವನ, ಆಯಸ್ಸು, ಉದ್ಯೋಗ, ಧನ, ವಿದ್ಯೆ ಮತ್ತು ಮೃತ್ಯು ಇತ್ಯಾದಿಗಳ ಬಗ್ಗೆ ನಿಶ್ಚಿತವಾಗಿರುತ್ತದೆ. ಅರ್ಥಾತ್ ಮನುಷ್ಯನು ನಿಶ್ಚಿತ ಕರ್ಮಗಳ ಸಂಕೋಲೆಯಿಂದ ಬಂಧಿಸಲ್ಪಟ್ಟಿರುವನು. ಧರೆಗೆ ಬಂದ ಬಳಿಕ ಸಾಧುಸಜ್ಜನರ ಸತ್ಸಂಗದ ಕಾರಣ ವ್ಯಕ್ತಿಯು ಸಂಸಾರ ಬಂಧನದಿಂದ ವಿಮುಕ್ತನಾಗುತ್ತಾನೆ. ಉತ್ತಮ ವ್ಯಕ್ತಿಗಳ ಸಹವಾಸ ಸರ್ವ ವಿಧದಲ್ಲಿ ಮನುಷ್ಯನ ರಕ್ಷಣೆ ದೊರಕಿಸುವುದು ಎಂದು ಆಚಾರ್ಯರು ತಿಳಿಸಿರುತ್ತಾರೆ.

ಮನುಷ್ಯನು ಬದುಕಿರುವವರೆಗೆ ಪುಣ್ಯ ಕರ್ಮಗಳನ್ನು ಮಾಡುತ್ತಿರಬೇಕು. ದೇಹ ಪರಿತ್ಯಾಗದ ಬಳಿಕ ಅವನು ಏನನ್ನೂ ಮಾಡಲಾರದ ಕಾರಣ ಪುಣ್ಯಾರ್ಜನೆಗೆ ಸತ್ಕರ್ಮಗಳನ್ನು ಮಾಡುತ್ತಿರಬೇಕೆಂದು ಅವರು ತಿಳಿಸಿರುವರು.

ವಿದ್ಯೆಯು ಕಾಮಧೇನುವಿಗೆ ಸಮ. ಮನುಷ್ಯನ ಸರ್ವ ಮನೋ ಇಚ್ಛೆಗಳು ಕಾಮಧೇನುವಿನಂತೆ ವಿದ್ಯೆಯಿಂದ ಪೂರ್ಣಗೊಳ್ಳುವುವು. ವಿದ್ಯೆಯನ್ನು ಗುಪ್ತ ಧನ ಎಂದು ಪರಿಗಣಿಸುವರೆಂದು ಆಚಾರ್ಯರು ತಿಳಿಸಿರುವರು.

ಅನೇಕ ಮುಟ್ಠಾಳ ಗಂಡು ಮಕ್ಕಳ ಬದಲಾಗಿ ಓರ್ವ ಸದ್ಗುಣ ಉಳ್ಳ ಪುತ್ರ ಅಧಿಕ ಪ್ರಯೋಜನ ದೊರಕಿಸುವನು. ಮುಟ್ಠಾಳ ಮಗನು ದೀರ್ಘಾಯು ಆಗಿದ್ದಲ್ಲಿ ಜೀವನ



## ॥ ಅಧ್ಯಾಯ - ೫ ॥

**ಧರ್ಮವು ಧನದಿಂದ, ವಿದ್ಯೆಯು ಯೋಗದಿಂದ ಕಾಪಾಡಲ್ಪಡುತ್ತದೆ. ಹಾಗೆಯೇ ಮೃದು ಸ್ವಭಾವದಿಂದ ರಾಜನ ಮತ್ತು ಉತ್ತಮ ಸ್ತ್ರೀಯಿಂದ ಮನೆಯ ರಕ್ಷಣೆ ಆಗುತ್ತದೆ.**

गुरुरग्निर्द्विजातीनां वर्णानां ब्राह्मणो गुरुः।
पतिरेव गुरुः स्त्रीणां सर्वस्याऽभ्यागतो गुरुः॥

ದ್ವಿಜರಿಗೆ ಅಗ್ನಿಯೇ ಗುರುವು. ನಾಲ್ಕು ವರ್ಣಗಳಲ್ಲಿ ಬ್ರಾಹ್ಮಣರು ಶ್ರೇಷ್ಠನು. ಸ್ತ್ರೀಯರಿಗೆ ಪತಿಯೇ ಗುರುವು. ಎಲ್ಲರಿಗೂ ಅತಿಥಿಗಳು ಗುರುಗಳು.

ದ್ವಿಜರೆಂದರೆ ಉಪನಯನ ಸಂಸ್ಕಾರವುಳ್ಳವರು. ಇವರಿಗೆ ವೇದಾಧ್ಯಯನದ ಹಕ್ಕು ಇರುವುದರಿಂದ ಪ್ರತಿದಿನ ಅಗ್ನಿಕಾರ್ಯ ಮಾಡಿ, ಅಗ್ನಿಯ ಮೂಲಕವೇ ದೇವತೆಗಳನ್ನು ಆರಾಧಿಸಬೇಕು. ಆದ್ದರಿಂದ ಅವರಿಗೆ ಅಗ್ನಿಯೇ ಗುರುಸ್ಥಾನದಲ್ಲಿರುವವನು. ಬ್ರಾಹ್ಮಣನು ವೇದಾಭ್ಯಾಸಮಾಡಿ ಆಚಾರವಿಚಾರಗಳನ್ನು ಚೆನ್ನಾಗಿ ಅರಿತಿರುವುದರಿಂದ ಉಳಿದ ಜನರಿಗೆ ಅವನು ಉಪದೇಶ ಮಾಡಬಲ್ಲನು. ಆದ್ದರಿಂದ ಎಲ್ಲರಿಗೂ ಅವನು ಗುರುವಾಗಬಲ್ಲವನು. ಸ್ತ್ರೀಯರಿಗೆ ಪತಿಯೇ ದೈವವು. ಪತಿಯ ವಾಕ್ಯವೇ ಉಪದೇಶರೂಪವಾದ್ದರಿಂದ ಪತಿಯನ್ನು ಬಿಟ್ಟು ಬೇರೆ ಗುರುವು ಬೇಕಿಲ್ಲ. ಅತಿಥಿಗಳು ಬಂದಾಗ ಅವರನ್ನು ಪ್ರೀತಿಪೂರ್ವಕವಾಗಿ ಉಪಚರಿಸುವುದು ಉತ್ತಮ ಆಚಾರ. ಎಲ್ಲರಿಗೂ ಕೂಡ ಅವನ

ಸೇವೆಯು ಕರ್ತವ್ಯವಾಗಿದೆ.॥೧॥

यथा चतुर्भिः कनकं परीक्ष्यते निघर्षणच्छेदनतापताडनैः।
तथा चतुर्भिः पुरुषः परीक्ष्यते त्यागेन शीलेन गुणेन कर्मणा॥

ಚಿನ್ನವು ಒರೆಹಚ್ಚುವುದು, ಕತ್ತರಿಸುವುದು, ಕಾಯಿಸುವುದು ಮತ್ತು ಹೊಡೆಯುವುದು, ಈ ರೀತಿ ನಾಲ್ಕು ವಿಧಗಳಿಂದ ಪರೀಕ್ಷಿಸಲ್ಪಡುತ್ತದೆ. ಹಾಗೆಯೇ ಮನುಷ್ಯನು ದಾನಸ್ವಭಾವ, ನಡತೆ, ಗುಣ ಮತ್ತು ಕೆಲಸಗಳಿಂದ ಪರೀಕ್ಷಿಸಲ್ಪಡುತ್ತಾನೆ.

ಚಿನ್ನವು ಚೊಕ್ಕವಾಗಿದೆಯೆ ಎಂಬುದನ್ನು ಪರೀಕ್ಷಿಸಲು ಅದನ್ನು ಒರೆ ಹಚ್ಚಿ ನೋಡುತ್ತಾರೆ. ಕತ್ತರಿಸಿದರೆ ಕೂಡ ಅದರ ಹೊಳಪಿನಿಂದ, ಹೊಡೆಯುವಾಗ ಅದರ ಮಾರ್ದವದಿಂದ, ಕಾಯಿಸಿದಾಗ ಬೇಗ ಕರಗದೆ ಇರುವುದರಿಂದ ಚಿನ್ನದ ಶುದ್ಧತೆ ಪರೀಕ್ಷಿಸಲ್ಪಡುತ್ತದೆ. ಹಾಗೆಯೇ ಒಬ್ಬ ಮನುಷ್ಯನು ಯಾವುದನ್ನು ದಾನ ಅಥವಾ ತ್ಯಾಗ ಮಾಡುತ್ತಾನೆ. ಹಿರಿಯರಲ್ಲಿ ಯಾವ ರೀತಿ ನಡೆದುಕೊಳ್ಳುತ್ತಾನೆ, ಅವನಲ್ಲಿರುವ ಒಳ್ಳೆಯ ಗುಣಗಳಾವುವು? ಮತ್ತು ಅವನು ಮಾಡುವ ಕೆಲಸಗಳಾವುವು? ಎಂಬ ಅಂಶಗಳ ಮೇಲೆ ಅವನನ್ನು ಪರೀಕ್ಷಿಸಬಹುದು.॥೨॥

तावद् भयेषु भेतव्यं यावद्भयमनागतम्।
आगतं तु भयं दृष्ट्वा प्रहर्तव्यमशंकया॥

ಎಲ್ಲಿಯವರೆಗೆ ಭಯಪಡುವ ಪ್ರಸಂಗಗಳು ಮೈಮೇಲೆ ಬರುವುದಿಲ್ಲವೋ ಅಲ್ಲಿಯವರೆಗೆ ಅದಕ್ಕೆ ಭಯಪಡಬೇಕು ಮತ್ತು ಬರದಂತೆ ಎಚ್ಚರವಹಿಸಬಹುದು. ಅಂತಹ ಸಂದರ್ಭವನ್ನು ಎದುರಿಸಬೇಕಾದ ಸನ್ನಿವೇಶವೇ ಬಂದರೆ ಧೈರ್ಯದಿಂದ ಎದುರಿಸಬೇಕು. ಭಯಪಡಬೇಕಾದ ಸನ್ನಿವೇಶಗಳು ಬರುವ ಸಂದರ್ಭಗಳು ಮೊದಲೇ ತಿಳಿದರೆ ಅವುಗಳ ಬಗ್ಗೆ ಕಾಳಜಿ ವಹಿಸಿ, ಬೇಕಾದ ಸಿದ್ಧತೆಗಳನ್ನು ಮಾಡಿಕೊಳ್ಳಬಹುದು. ಆದರೆ ಅಂತಹ ಸ್ಥಿತಿಯೊಂದನ್ನು ಎದುರಿಸಬೇಕಾದ ಸಂದರ್ಭವೇ ಬಂದರೆ ಹೆದರದೆ ಅದನ್ನು ಎದುರಿಸಿ ಹೋರಾಡಬೇಕು. ಇದಕ್ಕೆ ಒಂದು ಪ್ರಾಣಿಯ ಉದಾಹರಣೆ ಕೊಡಬಹುದು. ಅದು ಬೇಟೆಗಾರನಿಗೆ ಅಥವ ಮತ್ತೊಂದು ದುಷ್ಟಮೃಗಕ್ಕೆ ಹೆದರಿ ಪಲಾಯನ ಮಾಡಲು ಪ್ರಯತ್ನಿಸುತ್ತದೆ. ಒಂದು ವೇಳೆ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲವೆಂದು ಅದಕ್ಕೆ ಮನವರಿಕೆಯಾದರೆ ಕೂಡಲೇ ಹಿಂದಕ್ಕೆ ತಿರುಗಿ ಆಕ್ರಮಣಕಾರರ ಮೇಲೆ ಆಕ್ರಮಣ ಮಾಡುತ್ತದೆ. ಈ ನಡತೆಯೇ ಮನುಷ್ಯರಿಗೂ ಮಾದರಿ.॥೩॥

एकोदरसमुद्भूता एक नक्षत्रजातका:।
न भवन्ति समा: शीले यथा बदरिकण्टका:॥

ಒಂದೇ ತಾಯಿಯ ಗರ್ಭದಿಂದ ಒಂದೇ ನಕ್ಷತ್ರದಲ್ಲಿ ಜನಿಸಿದ ಮಕ್ಕಳೂ ಕೂಡ ಸ್ವಭಾವದಲ್ಲಿ ಒಂದೇ ಸಮನಾಗಿ ಇರುವುದಿಲ್ಲ. ಎಲಚಿಯ ಗಿಡದಲ್ಲಿ ಹಣ್ಣು ಮತ್ತು ಮುಳ್ಳು ಏಕಕಾಲದಲ್ಲಿ ಪ್ರಾದುರ್ಭವಿಸುತ್ತವೆ. ಆದರೆ ಅವುಗಳಲ್ಲಿ ಅಜಗಜಾಂತರವಿದೆ.

ಮನುಷ್ಯನ ಸ್ವಭಾವವು ಅವರು ಹುಟ್ಟಿದ ಕಾಲದೇಶಗಳನ್ನು ಅನುಸರಿಸುವುದಿಲ್ಲ. ಅದು ಪೂರ್ವಜನ್ಮ ಸಂಸ್ಕಾರವೆಂದು ಹಿರಿಯರು ಹೇಳುತ್ತಾರೆ. ಇಬ್ಬರು ಮಕ್ಕಳು ಒಂದೇ ತಾಯಿಯ ಗರ್ಭದಿಂದ ಒಂದೇ ನಕ್ಷತ್ರದಲ್ಲಿ ಜನಿಸಿದರೆ ಜ್ಯೋತಿಶ್ಯಾಸ್ತ್ರದ ಪ್ರಕಾರ ಅವರ ಜೀವನ ಒಂದೇ ತೆರನಾಗಿ ಸಾಗಬೇಕು. ವಂಶವಾಹಿನಿಯ ಪ್ರಕಾರ ಅವರಲ್ಲಿ ಸಾಮ್ಯತೆಯಿರಬೇಕು. ಹೀಗಿದ್ದರೂ ಅವರಲ್ಲಿ ಅನೇಕ ರೀತಿಯ ಭಿನ್ನ ಸ್ವಭಾವವನ್ನು ಕಾಣುತ್ತೇವೆ. ಇದಕ್ಕೆ ಆಚಾರ್ಯರು ಬದರೀ ಹಣ್ಣು ಮತ್ತು ಮುಳ್ಳುಗಳನ್ನು ಹೇಳಿರುತ್ತಾರೆ. ಇವೆರಡೂ ಬದರೀವೃಕ್ಷದಿಂದಲೇ ಒಟ್ಟಿಗೆ ಹುಟ್ಟುತ್ತವೆ. ಆದರೆ ಒಂದು ಒಳ್ಳೆಯ ಹಣ್ಣಿನ ಸ್ವಭಾವವನ್ನು ಹೊಂದಿದ್ದರೆ ಇನ್ನೊಂದು ಮುಳ್ಳಿನ ಕ್ರೂರತೆಯನ್ನು ಹೊಂದಿದೆ.॥೪॥

निःस्पृहो नाऽधिकारी स्यान्नाकामी मण्डनप्रिय:।
नाऽविदग्ध: प्रियं ब्रूयात् स्फुटवक्ता न वञ्चक:॥

ಅಧಿಕಾರಿಗಳು ಆಸೆಯಿಲ್ಲದವರಾಗಿರುವುದಿಲ್ಲ. ಕಾಮಗಳಿಗೆ ವಶನಾಗದಿರುವವನು ಅಲಂಕಾರಪ್ರಿಯನಾಗಿರುವುದಿಲ್ಲ. ಪಂಡಿತನಲ್ಲದವನಿಗೆ ಪ್ರಿಯವಾಗಿ ಮಾತನಾಡಲು ಬರುವುದಿಲ್ಲ. ಸ್ಪಷ್ಟವಾಗಿ ಮಾತನಾಡುವವನು ವಂಚಕನಾಗಿರುವುದಿಲ್ಲ.

ಅಧಿಕಾರಿಗಳು ಸಾಮಾನ್ಯವಾಗಿ ಆಸೆಬುರುಕರಾಗಿರುತ್ತಾರೆ. ಅವರ ಕೈಯಲ್ಲಿ ಹಣ ಮತ್ತು ಅಧಿಕಾರ ಇರುವಾಗ ಅದನ್ನು ದುರುಪಯೋಗ ಪಡಿಸಿಕೊಳ್ಳದೆ ಇರುವವರು ವಿರಳ. ಆಸೆಗಳಿಲ್ಲದ ಮನುಷ್ಯನು ಸಾಮಾನ್ಯವಾಗಿ ಅಲಂಕಾರಪ್ರಿಯನಾಗಿರುವುದಿಲ್ಲ. ಕಾಮಿಯು ತನ್ನನ್ನು ನೋಡಿ ಇತರರು ಮೆಚ್ಚಲಿಯೆಂದು ಅಲಂಕಾರ ಮಾಡಿಕೊಳ್ಳುತ್ತಾನೆ. ಪಂಡಿತನಲ್ಲದವನು ಸರಿಯಾಗಿ ಮಾತನಾಡಲು ಕಲಿತಿರುವುದಿಲ್ಲ. ಅವನು ಇತರರನ್ನು ನೋಯಿಸುವಂತೆ ಮಾತನಾಡುತ್ತಾನೆ. ಕಂಡುದನ್ನು ಕಂಡಂತೆ ಸ್ಪಷ್ಟವಾಗಿ ಹೇಳುವವನು ವಂಚಕನಾಗಿರುವುದಿಲ್ಲ. ಅವನು ಹೃದಯದಲ್ಲಿ ಏನನ್ನೂ ಮುಚ್ಚಿಡದೆ ವಂಚನೆ ಮಾಡುವ ಅಭಿಪ್ರಾಯವಿಲ್ಲದೆ ಮಾತನಾಡುತ್ತಾನೆ. ॥೫॥

मूर्खाणां पण्डिता द्वेष्या अधनानां महाधनाः।
वारांगनाः कुलस्त्रीणां सुभगानां च दुर्भगाः॥

ಮೂರ್ಖರು ಪಂಡಿತರನ್ನು ದ್ವೇಷಿಸುತ್ತಾರೆ. ಧನವಿಲ್ಲದ ಬಡವರು ಶ್ರೀಮಂತರನ್ನು ದ್ವೇಷಿಸುತ್ತಾರೆ. ವೇಶ್ಯೆಯಾದವಳು ಕುಲಸ್ತ್ರೀಯನ್ನು ದ್ವೇಷದಿಂದ ಕಾಣುತ್ತಾಳೆ. ಅದೃಷ್ಟವಂತರನ್ನು ದುರದೃಷ್ಟಶಾಲಿಗಳು ದ್ವೇಷಿಸುತ್ತಾರೆ.

ಯಾರಿಗೆ ಯಾವುದು ದೊರೆತಿರುವುದಿಲ್ಲವೋ ಅದು ಇನ್ನೊಬ್ಬರಿಗೆ ದೊರೆತಾಗ ಅವರ ಬಗ್ಗೆ ಅಸೂಯೆ ಮೂಡುವುದು ಸಹಜ. ಮೂರ್ಖನಾದವನಿಗೆ ವಿದ್ಯೆ ಒಲಿಯುವುದಿಲ್ಲ. ಅವನಿಗೆ ಪಂಡಿತನನ್ನು ಕಂಡರೆ ತನಗೆ ಅಂತಹ ಪಾಂಡಿತ್ಯವಿಲ್ಲವಲ್ಲಾ ಎಂದು ದುಃಖವಾಗುತ್ತದೆ. ಅದು ಪಂಡಿತರ ಮೇಲೆ ದ್ವೇಷವಾಗಿ ಪರಿಣಮಿಸುತ್ತದೆ. ಹಾಗೆಯೇ ಬಡವರಿಗೆ ಶ್ರೀಮಂತರನ್ನು ಕಂಡರೆ ಅ ಸಂಪತ್ತು ತಮಗಿಲ್ಲವಲ್ಲಾ ಎಂಬ ಅಸೂಯೆಯುಂಟಾಗುತ್ತದೆ. ವೇಶ್ಯೆಯಾದವಳಿಗೆ ಕುಲಸ್ತ್ರೀಗೆ ದೊರೆಯುವ ಪ್ರೀತಿ ಮತ್ತು ಮರ್ಯಾದೆಗಳು ದೊರೆಯುವುದಿಲ್ಲ. ದುರದೃಷ್ಟವಂತರು ಕೈಹಾಕಿದ ಕೆಲಸದಲ್ಲೆಲ್ಲ ನಷ್ಟವನ್ನೇ ಅನುಭವಿಸುತ್ತಾರೆ.ಅದೇ ಅದೃಷ್ಟವಂತರಿಗೆ ಒಳ್ಳೆಯ ಫಲದೊರೆಯುತ್ತವೆ. ಇದರಿಂದ ಅವರಲ್ಲಿ ದ್ವೇಷಭಾವನೆ ಮೂಡುತ್ತದೆ. ॥೬॥

आलस्योपहता विद्या परहस्तगताः स्त्रियः।
अल्पबीजं हतं क्षेत्रं हतं सैन्यमनायकम्॥

ಆಲಸ್ಯದಿಂದ ವಿದ್ಯೆಯು ನಷ್ಟವಾಗುವುದು. ಸ್ತ್ರೀಯರನ್ನು ಬೇರೆಯವರ ಹತ್ತಿರ ಬಿಟ್ಟರೆ ಶೀಲಭ್ರಷ್ಟರಾಗುವ ಸಂಭವ ಹೆಚ್ಚು. ಹೊಲದಲ್ಲಿ ಸ್ವಲ್ಪವೇ ಬೀಜವನ್ನು ಬಿತ್ತಿದರೆ ಬೆಳೆ ಚೆನ್ನಾಗಿ ಬರುವುದಿಲ್ಲ. ನಾಯಕನಿಲ್ಲದ ಸೈನ್ಯವು ಚೆಲ್ಲಾಪಿಲ್ಲಿಯಾಗುತ್ತದೆ.

ವಿದ್ಯೆಗೆ ಸೋಮಾರಿತನವೇ ಶತ್ರು. ವಿದ್ಯಾರ್ಥಿಯಾದವನು ಆಲಸ್ಯವನ್ನು ತೊರೆದು ಶ್ರದ್ಧೆಯಿಂದ ಅಭ್ಯಾಸ ಮಾಡಬೇಕು. ಇಲ್ಲದಿದ್ದರೆ ವಿದ್ಯೆ ಸಿದ್ಧಿಸುವುದಿಲ್ಲ. ಹೆಣ್ಣುಮಕ್ಕಳನ್ನು ಪರರ ಆಶ್ರಯದಲ್ಲಿ ಬಿಟ್ಟರೆ ಅವರಿಗೆ ತಿಳುವಳಿಕೆ ಹೇಳುವ ಸ್ವಜನರು ಇಲ್ಲದೆ ಮತ್ತು ಪರಿಸ್ಥಿತಿಗಳಿಂದಲೂ ಶೀಲವನ್ನು ಕಳೆದುಕೊಳ್ಳುವ ಪ್ರಸಂಗ ಬರಬಹುದು. ಅವಳು ಬಾಲ್ಯದಲ್ಲಿ ತಂದೆಯ ಮನೆಯಲ್ಲಿ ಮತ್ತು ಯೌವನದಲ್ಲಿ ಪತಿಯ ಅಧೀನದಲ್ಲಿ ಇರಬೇಕು. ಹೊಲದಲ್ಲಿ ಹೆಚ್ಚಿನ ಬೀಜಗಳನ್ನು ಚೆಲ್ಲಿದಾಗ ಕೆಲವು ಬೀಜಗಳು ಮೊಳಕೆ ಒಡೆಯದಿದ್ದರೂ ಸಾಕಷ್ಟು ಸಸಿಗಳು ಬಂದು ಉತ್ತಮ ಫಸಲನ್ನು ಪಡೆಯಬಹುದು. ಹಾಕುವಾಗಲೇ ಕಡಿಮೆ ಬೀಜಗಳನ್ನು ಹಾಕಿದರೆ ಸಹಜವಾಗಿ ಕಡಿಮೆಯಾಗುವುದು. ಸೈನ್ಯವನ್ನು ಮುನ್ನಡೆಸಲು

ಉತ್ತಮ ನಾಯಕನ ಅವಶ್ಯಕತೆಯಿದೆ. ಅವನು ಪ್ರೋತ್ಸಾಹದಿಂದ ಸೈನಿಕರು ಧೈರ್ಯದಿಂದ ಮುನ್ನುಗ್ಗುತ್ತಾರೆ. ಅಂತಹ ನಾಯಕನಿಲ್ಲದಿದ್ದರೆ ಸೈನ್ಯದಲ್ಲಿ ಶಿಸ್ತು ಉತ್ಸಾಹಗಳಿಲ್ಲದೆ ಅದು ಸೋಲನ್ನು ಕಾಣಬೇಕಾಗುತ್ತದೆ. ॥೭॥

अभ्यासाद्धार्यते विद्या कुलं शीलेन धार्यते।
गुणेन ज्ञायते त्वार्यः कोपो नेत्रेण गम्यते॥

ವಿದ್ಯೆಯು ಬುದ್ಧಿಯಲ್ಲಿ ಧರಿಸಲ್ಪಡಬೇಕಾದರೆ ಚೆನ್ನಾಗಿ ಅಭ್ಯಾಸಮಾಡಬೇಕು. ವಂಶವು ಉನ್ನತಿಗೆ ಬರಬೇಕಾದರೆ ಶೀಲವೇ ಮುಖ್ಯ. ಆರ್ಯನೆಂದರೆ ಉತ್ತಮ ಆಚಾರವುಳ್ಳವನು. ಕೋಪವು ಕಣ್ಣುಗಳಿಂದಲೇ ಗೊತ್ತಾಗುತ್ತದೆ.

ಕರ್ತವ್ಯಮಾಚರನ್ ಕಾರ್ಯಂ ಅಕರ್ತವ್ಯಮನಾಚರನ್

ತಿಷ್ಠತಿ ಪ್ರಕೃತಾಚಾರೇ ಸ ವಾ ಆರ್ಯ ಇತಿ ಸ್ಮೃತಃ

ಮಾಡಬೇಕಾದ ಕೆಲಸಗಳನ್ನು ಮಾಡುವವನು, ಮಾಡಬಾರದ ಕೆಲಸಗಳನ್ನು ಮಾಡದಿರುವವನು, ಒಳ್ಳೆಯ ಆಚಾರವಂತನು ಆರ್ಯನು. ಅವನ ಗುಣಗಳಿಂದಲೇ ಅವನು ಆರ್ಯನೇ ಅಥವಾ ಅನಾರ್ಯನೇ ಎನ್ನುವುದು ನಿರ್ಧಾರವಾಗುತ್ತದೆ. ಕೋಪವು ಕಣ್ಣುಗಳಿಂದಲೇ ಗೊತ್ತಾಗುತ್ತದೆ. ಕೋಪಗೊಂಡವನ ಕಣ್ಣುಗಳು ಕ್ರೂರವಾಗುತ್ತವೆ ಮತ್ತು ಕೆಂಪಾಗುತ್ತವೆ. ॥೮॥

वित्तेन रक्ष्यते धर्मो विद्या योगेन रक्ष्यते।
मृदुना रक्ष्यते भूपः सत्स्त्रिया रक्ष्यते गृहम्॥

ಧರ್ಮವು ಧನದಿಂದ ಕಾಪಾಡಲ್ಪಡುತ್ತದೆ. ವಿದ್ಯೆಯು ಯೋಗದಿಂದ ಕಾಪಾಡಲ್ಪಡುತ್ತದೆ. ಹಾಗೆಯೇ ಮೃದುಸ್ವಭಾವದಿಂದ ರಾಜನ ಉತ್ತಮಸ್ತ್ರೀಯಿಂದ ಮನೆಯ ರಕ್ಷಣೆ ಆಗುತ್ತದೆ.

ಧನವಂತನಾದವನು ದಾನಮಾಡುವುದು, ಕೆರೆಕಟ್ಟೆಗಳು ಮುಂತಾದವುಗಳನ್ನು ನಿರ್ಮಿಸುವುದು ಮುಂತಾದ ಧರ್ಮಕಾರ್ಯಗಳನ್ನು ಮಾಡಬಹುದು. ಆದ್ದರಿಂದ ಧನದಿಂದ ಧರ್ಮವು ಕಾಪಾಡಲ್ಪಡುತ್ತದೆಂದು ಆಚಾರ್ಯರು ಹೇಳಿರುತ್ತಾರೆ. ಯೋಗವೆಂದರೆ ಮಾಡುವ ಕೆಲಸದಲ್ಲಿ ಕೌಶಲ್ಯ. 'ಯೋಗಃ ಕರ್ಮಸು ಕೌಶಲಂ' ಎಂದು ಗೀತೆಯಲ್ಲಿ ಹೇಳಿದೆ. ಅಂತಹ ಕೌಶಲ್ಯದಿಂದ ವಿದ್ಯೆಯು ರಕ್ಷಿಸಲ್ಪಡುತ್ತದೆ. ಕುಶಲರಾದವರು ವಿದ್ಯೆಯಲ್ಲಿ ಹೆಚ್ಚಿನ ಪ್ರಗತಿಯನ್ನು ಸಾಧಿಸುತ್ತಾರೆ. ರಾಜನು ಮೃದುನುಡಿಗಳಿಂದ ಪ್ರಜೆಗಳಲ್ಲಿ ವಿಶ್ವಾಸವನ್ನು ಸಂಪಾದಿಸಬೇಕು. ಕ್ರೂರಿಯಾದ ರಾಜನಿಗೆ ಜನರು

ಭಯಪಡುತ್ತಾರೆ ಮತ್ತು ಅವನನ್ನು ದ್ವೇಷಿಸುತ್ತಾರೆ. ರಾಜ್ಯವು ಸುಸ್ಥಿತಿಯಲ್ಲಿರಬೇಕಾದರೆ ಪ್ರಜೆಗಳ ಪ್ರೀತಿ ವಿಶ್ವಾಸ ಮುಖ್ಯ. ಗೃಹಿಣಿಯು ಒಳ್ಳೆಯವಳಾದರೆ ಮನೆಯ ಎಲ್ಲ ಕಾರ್ಯಗಳೂ ಸುಗಮವಾಗಿ ನಡೆಯುತ್ತವೆ. ॥೯॥

अन्यथा वेदपाण्डित्यं शास्त्रमाचारमन्यथा।
अन्यथा कुवचः शान्तं लोकाः क्लिश्यन्ति चान्यथा॥

ವೇದಗಳಲ್ಲಿ ಪಾಂಡಿತ್ಯವನ್ನು ಸಂಪಾದಿಸುವುದೇ ಬೇರೆ ಶಾಸ್ತ್ರೀಯವಾದ ಆಚಾರವೇ ಬೇರೆ. ಇದರಿಂದ ಕೆಟ್ಟ ಮಾತುಗಳು ಶಾಂತವಾಗಬಹುದು. ಇಲ್ಲದಿದ್ದರೆ ಜನರು ದುಃಖಿಗಳಾಗುತ್ತಾರೆ.

ವೇದವೇ ಮುಂತಾದವುಗಳಲ್ಲಿ ಪಾಂಡಿತ್ಯವನ್ನು ಪಡೆದವರೆಲ್ಲ ಆಚಾರವಂತರೆಂದು ಹೇಳಲಾಗುವುದಿಲ್ಲ. ಪಾಂಡಿತ್ಯವೇ ಬೇರೆ ಆಚಾರವೇ ಬೇರೆ. ಆಚಾರವು ಸುಸಂಸ್ಕೃತ ನಡತೆಯಾಗಿದೆ. ವಿದ್ವತ್ತು ಕೇವಲ ಪುಸ್ತಕದ ವಿದ್ಯೆಯಾಗಬಹುದು. ಅಂತಹ ಆಚಾರದಿಂದ ಅಪವಾದಗಳು ಮತ್ತು ಕೆಟ್ಟ ಮಾತುಗಳು ಶಾಂತವಾಗುತ್ತವೆ. ಜನರು ಸಂತುಷ್ಟ ಪಡುತ್ತಾರೆ. ಇಲ್ಲದಿದ್ದರೆ ಜನರು ಕ್ಲೇಶವನ್ನು ಅನುಭವಿಸಬೇಕಾಗುತ್ತದೆ. ॥೧೦॥

दारिद्र्यनाशनं दानं शीलं दुर्गतिनाशनम्।
अज्ञाननाशिनी प्रज्ञा भावना भयनाशिनी॥

ದಾನ ಮಾಡುವುದರಿಂದ ಬಡತನವು ನಾಶವಾಗುತ್ತದೆ. ಒಳ್ಳೆಯ ನಡತೆಯಿಂದ ಒಳ್ಳೆಯ ಗತಿಯು ಪ್ರಾಪ್ತವಾಗುತ್ತದೆ. ಒಳ್ಳೆಯ ಜ್ಞಾನವು ಅಜ್ಞಾನವನ್ನು ನಾಶಮಾಡುತ್ತದೆ. ಮನಸ್ಸಿನಲ್ಲಿರುವ ಒಳ್ಳೆಯ ಭಾವನೆಯು ಭಯವನ್ನು ದೂರ ಮಾಡುತ್ತದೆ.

ದಾನ ಮಾಡುವುದರಿಂದ ಸಂಪತ್ತು ಅಕ್ಷಯವಾಗುವುದೆಂದು ಹಿರಿಯರು ಹೇಳುತ್ತಾರೆ. ಒಳ್ಳೆಯ ನಡತೆಯುಳ್ಳವನಿಗೆ ಒಳ್ಳೆಯ ಗತಿಯೇ ಪ್ರಾಪ್ತವಾಗುತ್ತದೆ. 'ನ ಹಿ ಕಲ್ಯಾಣ ಕೃತ್ ಕಶ್ಚಿತ್ ದುರ್ಗತಿಂ ತಾಗ ಗಚ್ಛತಿ' ಎಂಬುದು ಗೀತೆಯ ನುಡಿ. ಯಾವುದೇ ವಿಷಯದಲ್ಲಿ ಜ್ಞಾನವನ್ನು ಸಂಪಾದಿಸಿದರೆ, ಅದರ ಬಗ್ಗೆ ಇದ್ದ ಅಜ್ಞಾನ ನಾಶವಾಗುವುದು ಸರ್ವವಿದಿತ. ಒಳ್ಳೆಯ ಭಾವನೆಯನ್ನು ಹೊಂದಿದವನು ಯಾರನ್ನೂ ಸಂಶಯಿಸುವುದಿಲ್ಲ ಮತ್ತು ಉಳಿದವರಲ್ಲಿಯೂ ಅಂತಹ ಒಳ್ಳೆಯ ಭಾವನೆಯು ಬರುವಂತೆ ಮಾಡುತ್ತಾನೆ. ಹಾಗಾಗಿ ಅವನಿಗೆ ಯಾರಿಂದಲೂ ಭಯವಿಲ್ಲ. ॥೧೧॥

नाऽस्ति कामसमो व्याधिर्नाऽस्ति मोहसमो रिपुः।
नाऽस्ति कोपसमो वह्निर्नाऽस्ति ज्ञानात् परं सुखम्॥

ಕಾಮಕ್ಕೆ ಸಮನಾದ ರೋಗವಿಲ್ಲ. ಮೋಹಕ್ಕೆ ಸಮನಾದ ಶತ್ರುವಿಲ್ಲ. ಕೋಪಕ್ಕೆ ಸಮನಾದ ಬೆಂಕಿಯಿಲ್ಲ. ಜ್ಞಾನಕ್ಕೆ ಮೀರಿದ ಸುಖ ಯಾವುದೂ ಇಲ್ಲ.

ಕಾಮವೆಂದರೆ ಆಪೇಕ್ಷೆಗಳು. ಆಸೆಗಳು ಹೆಚ್ಚಿದಂತೆ ಅವುಗಳ ಪೂರೈಕೆಗೆ ಹಲವು ಅಹಿತಕರವಾದ ಅಭ್ಯಾಸಗಳನ್ನು ಮಾಡಿಕೊಳ್ಳುತ್ತಾನೆ. ಅದರಿಂದ ಹಲವಾರು ರೋಗಗಳಿಗೆ ಆಹ್ವಾನ ಕೊಟ್ಟಂತೆ ಆಗುವುದು. ಮೋಹವೆಂದರೆ ಮಕ್ಕಳು, ಬಂಧುಗಳು, ಧನ ಮುಂತಾದವುಗಳ ಮೇಲೆ ಇರುವ ಅತಿಯಾದ ವ್ಯಾಮೋಹ. ಇವರೆಲ್ಲ ನನ್ನವರು. ಇದೆಲ್ಲ ನನ್ನದು ಎಂಬ ಅಜ್ಞಾನದಿಂದ ಅವುಗಳ ಮೇಲೆ ಅಭಿಮಾನ ಬೆಳೆಸಿಕೊಳ್ಳುವನು. ಮಕ್ಕಳು-ಬಂಧುಗಳು ದೂರಮಾಡಿದಾಗ, ನಶ್ವರವಾದ ಐಶ್ವರ್ಯ ನಾಶವಾದಾಗ ಅವೇ ಶತ್ರುಗಳಾಗಿ ದುಃಖಕ್ಕೆ ಕಾರಣವಾಗುವುದು. ಕೋಪವು ನಮ್ಮಲ್ಲಿಯೇ ಇರುವ ಅಗ್ನಿ. ಮನುಷ್ಯನಿಗೆ ಕೋಪ ಬಂದಾಗ ವಿವೇಚನೆ ಮಾಯವಾಗುವುದು. ಅದರಿಂದ ಅನರ್ಥಗಳು ಸಂಭವಿಸಬಹುದು. ಕೋಪದಲ್ಲಿ ಕುಯ್ದುಕೊಂಡ ಮೂಗಿನಂತೆ ತನಗೇ ನಷ್ಟವಾಗುವ ಸಂದರ್ಭಗಳೇ ಹೆಚ್ಚು. ಇದೆಲ್ಲವನ್ನೂ ಜಯಿಸಿ ನಿಜವಾದ ಜ್ಞಾನವನ್ನು ಸಂಪಾದಿಸಿದರೆ ಮನುಷ್ಯ ಅತ್ಯಂತ ಸುಖಿಯಾಗುತ್ತಾನೆ.॥೧೨॥

जन्ममृत्यु हि यात्येको भुनक्त्येकः शुभाऽशुभम्।
नरकेषु पतत्येक एको याति परां गतिम्॥

ಮನುಷ್ಯನೊಬ್ಬನೇ ಒಂಟಿಯಾಗಿ ಜನಿಸುತ್ತಾನೆ ಮತ್ತು ಸಾಯುವಾಗಲೂ ಒಬ್ಬನೇ ಹೋಗುತ್ತಾನೆ. ಮಧ್ಯದಲ್ಲಿ ತಾನು ಮಾಡಿರುವ ಶುಭ ಮತ್ತು ಅಶುಭಕರ್ಮಗಳ ಫಲವನ್ನು ಅವನೇ ಭೋಗಿಸಬೇಕು. ದುಷ್ಕರ್ಮಗಳಿಗೆ ಅನುಸಾರವಾಗಿ ಅವನೇ ನರಕದಲ್ಲಿ ಬೀಳುತ್ತಾನೆ. ಸತ್ಕರ್ಮಗಳನ್ನು ಮಾಡಿದ್ದರೆ ಉತ್ತಮಗತಿಯನ್ನು ಕೂಡ ಅವನೇ ಪಡೆಯುತ್ತಾನೆ.

ಮನುಷ್ಯನು ಈ ಲೋಕಕ್ಕೆ ಬರುವಾಗ ಅವನ ಪೂರ್ವಕರ್ಮಗಳನ್ನು ಬಿಟ್ಟು ಬೇರೆ ಯಾರೂ ಅವನ ಜೊತೆ ಬರುವುದಿಲ್ಲ. ಇಲ್ಲಿಗೆ ಬಂದನಂತರ ಬಂಧುಬಾಂಧವರು ಮುಂತಾದ ಅಭಿಮಾನವನ್ನು ಬೆಳೆಸಿಕೊಳ್ಳುತ್ತಾನೆ. ಆದರೆಅವರಾರೂ ಇವನ ಕರ್ಮಫಲಗಳನ್ನು ಭೋಗಿಸಲು ಬರುವುದಿಲ್ಲ. ಅವರವರ ಕರ್ಮವನ್ನು ಅವರವರೇ ಅನುಭವಿಸಬೇಕು. ಜೊತೆಗೆ ಮತ್ತು ಹೊಸ ಹೊಸ ಕರ್ಮಗಳನ್ನು ಮಾಡುತ್ತಾನೆ. ಅವು ದುಷ್ಕರ್ಮಗಳಾಗಿದ್ದರೆ ಅವನನ್ನು ನರಕಕ್ಕೆ ಒಯ್ಯುತ್ತವೆ. ಸತ್ಕರ್ಮಗಳಾಗಿದ್ದರೆ ಸದ್ಗತಿಯನ್ನು ಕೊಡಿಸುತ್ತವೆ. ಎಲ್ಲಕ್ಕೂ ಅವನೊಬ್ಬನೇ ಹೊಣೆ. ॥೧೩॥

तृणं ब्रह्मविदः स्वर्गस्तृणं शूरस्य जीवितम्।
जिताऽशस्य तृणं नारी निःस्पृहस्य तृणं जगत्॥

ಬ್ರಹ್ಮಜ್ಞಾನಿಗೆ ಸ್ವರ್ಗವು ತೃಣಸಮಾನವು. ಶೂರನಿಗೆ ತನ್ನ ಜೀವಿತವು ತೃಣಸಮ. ಆಸೆಯನ್ನು ಗೆದ್ದವನಿಗೆ ಸ್ತ್ರೀಯಲ್ಲಿ ಆಸೆಯಿರುವುದಿಲ್ಲ. ನಿಸ್ಪೃಹನಾದವನಿಗೆ ಇಡೀ ಜಗತ್ತೇ ತೃಣಸಮಾನವಾಗಿರುತ್ತದೆ.

ಬ್ರಹ್ಮಜ್ಞಾನಿಗೆ ಸ್ವರ್ಗಾದಿಲೋಕಗಳಿಲ್ಲಿ ಆಸಕ್ತಿಯಿರುವುದಿಲ್ಲ. ಸ್ವರ್ಗಾದಿಗಳು ಕಾಮ್ಯಕರ್ಮಗಳಿಂದ ದೊರೆಯಬಹುದಾದ ಲೋಕಗಳು. ಅಂತಹ ಲೌಕಿಕ ಕಾಮನೆಗಳನ್ನು ಮೀರಿ, ಆತ್ಮಜ್ಞಾನಿಯಾದವನು ಬ್ರಹ್ಮಜ್ಞಾನಿಯೆನಿಸುವನು. ಅವನು ಆಪ್ತಕಾಮನು. ಸ್ವರ್ಗಾದಿಲೋಕಗಳ ಭೋಗಭಾಗ್ಯಗಳಲ್ಲಿ ಅವನಿಗೆ ಆಸಕ್ತಿಯಿರುವುದಿಲ್ಲ. ಶೂರನು ಯುದ್ಧದಲ್ಲಿ ತನ್ನ ಜೀವವನ್ನೇ ಮುಡುಪಾಗಿಟ್ಟು ಯುದ್ಧ ಮಾಡುತ್ತಾನೆ. ಯುದ್ಧದಲ್ಲಿ ಜಯವನ್ನು ಗಳಿಸುವುದಕ್ಕಾಗಿ ಅವನು ತನ್ನ ಜೀವವನ್ನೇ ಕೊಡಲು ಸಿದ್ಧನಾಗಿರುತ್ತಾನೆಯೇ ಹೊರತು, ಸೋತು ಹಿಮ್ಮೆಟ್ಟುವುದಿಲ್ಲ. ಜಿತೇಂದ್ರಿಯನಾದ ಯೋಗಿಯು ಕಾಮವನ್ನು ಗೆದ್ದಿರುತ್ತಾನೆ. ಅವನು ಸ್ತ್ರೀಯನ್ನು ನೋಡಿದರೂ ವಿಚಲಿತನಾಗುವುದಿಲ್ಲ. ಎಲ್ಲ ರೀತಿಯ ಆಸೆಗಳನ್ನು ಗೆದ್ದು ನಿಸ್ಪೃಹನಾದ ವ್ಯಕ್ತಿಗೆ ಜಗತ್ತಿನಿಂದ ಆಗಬೇಕಾದ್ದೇನೂ ಇರುವುದಿಲ್ಲ. ಜಗತ್ತಿನ ಭೋಗಭಾಗ್ಯಗಳೆಲ್ಲ ಅವನಿಗೆ ತೃಣಸಮ. ॥೧೪॥

विद्या मित्रं प्रवासेषु भार्या मित्रं गृहेषु च।
व्याधितस्यौषधं मित्रं धर्मो मित्रं मृतस्य च॥

ಪ್ರಯಾಣಕಾಲದಲ್ಲಿ ವಿದ್ಯೆಯೇ ಸ್ನೇಹಿತರು. ಮನೆಯಲ್ಲಿ ಮಡದಿಯೇ ಮಿತ್ರ ಸಮಾನಳು. ರೋಗಿಯಾದವನಿಗೆ ಔಷಧವೇ ಸ್ನೇಹಿತನು. ಮರಣಹೊಂದಿದವನಿಗೆ ತನ್ನ ಧರ್ಮವೇ ಗೆಳೆಯನು.

ವಿದೇಶಗಳಿಗೆ ಪ್ರಯಾಣಮಾಡಿದಾಗ ಅಲ್ಲಿ ಪರಿಚಿತನು, ಬಂಧುಗಳು ಇಲ್ಲದೆ ಇರಬಹುದು. ಅಂತಹ ಸಂದರ್ಭದಲ್ಲಿ ವಿದ್ಯಾವಂತನು ತನ್ನ ವಿದ್ಯೆಯ ಬಲದಿಂದಲೇ ಅಲ್ಲಿ ಬೇಕಾದ ಅನುಕೂಲಗಳನ್ನು ಗಳಿಸಿ ಸುಖವಾಗಿ ಜೀವಿಸಬಲ್ಲನು. ಮನೆಯಲ್ಲಿ ಗೃಹಿಣಿಯ ಪಾತ್ರ ಬಹಳ ಮುಖ್ಯ. ಪತಿಹಿತಳಾದ ಅಂತಹ ಮಡದಿಯು ಪುರುಷನ ಎಲ್ಲ ಅವಶ್ಯಕತೆಳನ್ನು ಗಮನಿಸಿ, ಅವನಿಗೆ ಸುಖವನ್ನು ನೀಡಬಲ್ಲಳು. ಸನ್ಮಿತ್ರನ ಹಾಗೆ ಸಲಹೆ ಕೊಡಬಲ್ಲಳು. ಗುಟ್ಟನ್ನು ರಕ್ಷಿಸಬಲ್ಲಳು. ಹೀಗೆ ಮನೆಯಲ್ಲಿ ಮಡದಿ ಇದ್ದರೆ ಮಿತ್ರನಿದ್ದ

ಹಾಗೆಯೇ. ರೋಗಿಯಾದವನಿಗೆ ಅದನ್ನು ವಾಸಿಮಾಡಿಕೊಳ್ಳುವುದೇ ಮೊದಲ ಉದ್ದೇಶ. ಇಲ್ಲದಿದ್ದರೆ ಜೀವನ ದುರ್ಭರವಾದೀತು. ಔಷಧದ ಸೇವನೆಯೇ ರೋಗನಿವಾರಕ. ಔಷಧಗಳೇ ಅವನ ಮಿತ್ರನು. ಮೃತನಾದ ನಂತರ ಅವನು ಮಾಡಿರುವ ಧರ್ಮವೇ ಅವನಿಗೆ ಸದ್ಗತಿದಾಯಕವು. ಅವನಿಗೆ ಅದೇ ಮಿತ್ರನು. ||೧೫||

वृथा वृष्टिः समुद्रेषु वृथा तृप्तेषु भोजनम्।
वृथा दानं धनाढ्येषु वृथा दीपो दिवाऽपि च॥

ಸಮುದ್ರದ ಮೇಲೆ ಮಳೆ ಸುರಿಯುವುದು, ಹೊಟ್ಟೆ ತುಂಬಿರುವವನಿಗೆ ಊಟ ಹಾಕುವುದು, ಶ್ರೀಮಂತನಾಗಿರುವವನಿಗೆ ದಾನಕೊಡುವುದು ಮತ್ತು ಹಗಲಿನಲ್ಲಿ ದೀಪವನ್ನು ಉರಿಸುವುದೂ ಇವೆಲ್ಲವೂ ವ್ಯರ್ಥವಾದ ಕೆಲಸಗಳು.

ಸಮುದ್ರದಲ್ಲಿ ಬೇಕಾದಷ್ಟು ನೀರು ಇರುವುದರಿಂದ ಅದರ ಮೇಲೆ ಮಳೆ ಸುರಿದರೂ ಪ್ರಯೋಜನವೇನೂ ಇಲ್ಲ. ಹಾಗೆಯೇ ಹಸಿದವನಿಗೆ ಅನ್ನ ಹಾಕಬೇಕೇ ಹೊರತು ಹೊಟ್ಟೆ ತುಂಬಿದವನಿಗೆ ಊಟ ಬೇಕಿರುವುದಿಲ್ಲ. ಶ್ರೀಮಂತನಾದವನು ತಾನೇ ಇನ್ನೊಬ್ಬರಿಗೆ ಕೊಡಬಹುದು. ಅವನಿಗೆ ಬೇರೆಯವರು ಕೊಡುವ ಅಗತ್ಯವಿಲ್ಲ. ಹಗಲಿನಲ್ಲಿ ಸಾಕಷ್ಟು ಬೆಳಕಿರುವಾಗ ದೀಪದ ಪ್ರಯೋಜನವಿಲ್ಲ. ಈ ರೀತಿಯ ವ್ಯರ್ಥವಾದ ಕೆಲಸಗಳನ್ನು ಮಾಡಬಾರದೆಂದು ಆಚಾರ್ಯರ ಉಪದೇಶ ಮತ್ತು ಉದ್ದೇಶವಾಗಿದೆ. ||೧೬||

नाऽस्ति मेघसमं तोयं नाऽस्ति चात्मसमं बलम्।
नाऽस्ति चक्षुःसमं तेजो नाऽस्ति धान्यसमं प्रियम्॥

ಮಳೆಯ ನೀರಿಗೆ ಸಮನಾದ ಜಲವಿಲ್ಲ. ಆತ್ಮ ಬಲವೇ ಶ್ರೇಷ್ಠವಾದ ಬಲವು. ಕಣ್ಣಿಗೆ ಸಮನಾದ ತೇಜಸ್ಸು ಇಲ್ಲ. ಧಾನ್ಯಗಳಿಗಿಂತ ಪ್ರಿಯವಾದ ವಸ್ತುವಿಲ್ಲ.

ಮಳೆಯು ಎಲ್ಲರಿಗೂ ಜೀವನಾಧಾರ. ಶೇಖರಿಸಿಟ್ಟ ನೀರು ಕೆಲಕಾಲ ಮಾತ್ರ ಬರುವುದು. ಮಳೆ ಬಾರದಿದ್ದರೆ ಜಗತ್ತು ತಲ್ಲಣಗೊಳ್ಳುವುದು. ಆದ್ದರಿಂದ ಮಳೆನೀರು ಸರ್ವಶ್ರೇಷ್ಠವಾದುದು. ದೈಹಿಕ ಬಲ ಕಾಲಕಳೆದಂತೆ ಕುಂದುತ್ತದೆ. ಆತ್ಮಬಲ ವೃದ್ಧಿಯಾಗುತ್ತವೆ. ಆತ್ಮಶಕ್ತಿಯ ಮುಂದೆ ಉಳಿದೆಲ್ಲವೂ ಗೌಣ. ಎಂತಹ ಬೆಳಕು ಇದ್ದರೂ ಕಣ್ಣು ಕಾಣಿಸದಿದ್ದರೆ ವ್ಯರ್ಥ. ಆದ್ದರಿಂದ ಕಣ್ಣಿನಲ್ಲಿ ಕಾಣುವ ತೇಜಸ್ಸು ಇರಬೇಕು. ಎಷ್ಟೇ ಐಶ್ವರ್ಯವಿದ್ದರೂ ಆಹಾರವಿಲ್ಲದೆ ಮನುಷ್ಯನು ಬದುಕಲಾರ. ಆದ್ದರಿಂದ ಧಾನ್ಯಗಳೇ ಅತ್ಯಂತ ಪ್ರಿಯವಾದ ವಸ್ತುಗಳು. ||೧೭||

अधना धनमिच्छन्ति वाचं चैव चतुष्पदाः।

मानवा: स्वर्गमिच्छन्ति मोक्षमिच्छन्ति देवता:॥

ಧನವಿಲ್ಲದವರು ಹಣವನ್ನು ಬಯಸುತ್ತಾರೆ. ಪ್ರಾಣಿಗಳು ಮಾತನಾಡಲು ಇಷ್ಟಪಡುತ್ತವೆ. ಮನುಷ್ಯರು ಸ್ವರ್ಗವನ್ನು ಇಷ್ಟಪಡುತ್ತಾರೆ. ದೇವತೆಗಳಿಗೆ ಮೋಕ್ಷ ಬೇಕು

ಯಾರಿಗೆ ಯಾವುದು ಇಲ್ಲವೋ ಅದನ್ನು ಬಯಸುವುದು ಸಹಜ. ದರಿದ್ರರಿಗೆ ಜೀವನಕ್ಕೆ ಸಾಕಾಗುವಷ್ಟು ಹಣದ ಅನುಕೂಲತೆಯಿರುವುದಿಲ್ಲ. ಅವರಿಗೆ ಹಣದ ಆಸೆಯಿರುವುದು ಸಹಜ. ತಿರ್ಯಕ್ ಜಂತುಗಳಿಗೆ ಜೀವನಕ್ಕೆ ಬೇಕಾದಷ್ಟು ಆಹಾರ ಹೇಗೋ ದೊರೆಯುತ್ತದೆ. ಆದರೆ ತಮ್ಮ ಭಾವನೆಗಳನ್ನು ವ್ಯಕ್ತಪಡಿಸಲು ಅವು ನಮ್ಮಂತೆ ಮಾತನಾಡಲಾರವು. ಅವು ತಮ್ಮ ಅಪೇಕ್ಷೆಗಳನ್ನು ತಿಳಿಸಲು ಮಾತನಾಡುವ ಸಾಮರ್ಥ್ಯವನ್ನು ಬಯಸಬಹುದು. ಮನುಷ್ಯರು ಸ್ವರ್ಗದಲ್ಲಿ ಇಲ್ಲಿಗಿಂತ ಹೆಚ್ಚು ಭೋಗಭಾಗ್ಯಗಳಿರಬಹುದೆಂದು ಭಾವಿಸಿ, ಅದನ್ನು ಪಡೆಯಲು ಯಜ್ಞಯಾಗಾದಿಗಳನ್ನು ಮಾಡುತ್ತಾರೆ. 'ಸ್ವರ್ಗಕಾಮೋ ಯಜ್ಞೇತ' ಎಂಬುದು ವೇದೋಕ್ತಿ. ಸ್ವರ್ಗದಲ್ಲಿಯೇ ಇರುವ ದೇವತೆಗಳುಅದಕ್ಕಿಂತ ಮೇಲಿನ ಸ್ಥಾನವಾದ ಮೋಕ್ಷವನ್ನು ಬಯಸುತ್ತಾರೆ. ॥೧೮॥

सत्येन धार्यते पृथिवी सत्येन तपते रवि:।
सत्येन वाति वायुश्च सर्वं सत्ये प्रतिष्ठितम्॥

ಪೃಥ್ವಿಯು ಸತ್ಯದಿಂದ ಧರಿಸಲ್ಪಡುತ್ತದೆ. ಸತ್ಯದಿಂದಲೇ ಸೂರ್ಯನು ಬೆಳಗುತ್ತಾನೆ. ಸತ್ಯದಿಂದಲೇ ಗಾಳಿಯು ಬೀಸುತ್ತದೆ. ಎಲ್ಲವೂ ಸತ್ಯದಲ್ಲಿಯೇ ಸ್ಥಿರವಾಗಿದೆ.

ಸತ್ಯವೆಂದರೆ ಪರಮಾತ್ಮನೇ. 'ಯಥಾರ್ಥವೈಭವಃ ಸತ್ಯಃ ಸರ್ವಶಾಸ್ತ್ರೇಷು ವಿಶ್ರುತಃ' ಎಂದು ನಿರುಕ್ತಿಯಲ್ಲಿ ಹೇಳಿದೆ. ಸತ್‌ಸ್ವರೂಪನಾದ ಪರಮಾತ್ಮನಿಂದಲೇ ಭೂಮಿಯು ಧರಿಸಲ್ಪಟ್ಟಿದೆ. 'ತಸ್ಯ ಭಾಸಾ ಸರ್ವಮಿದಂ ವಿಭಾತಿ' ಎಂಬಂತೆ ಅವನ ತೇಜಸ್ಸಿನಿಂದಲೇ ಸೂರ್ಯಚಂದ್ರರೆಲ್ಲರೂ ಬೆಳಗುತ್ತಾರೆ. 'ಭೀಷಾಸ್ಮಾದ್‌ವಾತಃ ಪವತಿ' ಎಂಬಂತೆ ಅವನ ಆಜ್ಞೆಯಿಂದಲೇ ಗಾಳಿ ಬೀಸುತ್ತದೆ. ಈ ಸತ್ಯವೆಂಬ ತತ್ತ್ವದಲ್ಲಿಯೇ ಎಲ್ಲವೂ ಪ್ರತಿಷ್ಠಿತವಾಗಿದೆ. ॥೧೯॥

चला लक्ष्मीश्चला: प्राणाश्चलं जीवित-यौवनम्।
चलाचले च संसारे धर्म एको हि निश्चल:॥

ಲಕ್ಷ್ಮಿಯು ಚಂಚಲೆಯು. ಪ್ರಾಣವೂ ಸ್ಥಿರವಲ್ಲ. ಜೀವಿತ ಮತ್ತು ಯೌವನಗಳು ಹೊರಟುಹೋಗುತ್ತವೆ. ಈ ರೀತಿ ಚಂಚಲವಾದ ಸಂಸಾರದಲ್ಲಿ ಧರ್ಮವೊಂದೇ ನಿಶ್ಚಲವಾದುದು.

ಸಂಪತ್ತು ಸ್ಥಿರವಲ್ಲ. ಇಂದು ಧನಿಕನಾಗಿದ್ದವನು ನಾಳೆ ದರಿದ್ರನಾಗಬಹುದು. ನೆನ್ನೆ ಪಾಲಕನಾಗಿದ್ದವನು ಇಂದು ಸೇವಕನಾಗಬಹುದು. ಮನುಷ್ಯ ಹುಟ್ಟಿದಾಗಲೇ ಅವನ ಆಯಸ್ಸು ನಿರ್ಧರವಾಗಿ ಬಿಟ್ಟಿರುತ್ತದೆ. ಸೂರ್ಯನ ಉದಯಾಸ್ತಗಳೊಂದಿಗೆ ಕ್ಷೀಣಿಸುತ್ತ ಕೊನೆಗೆ ಪ್ರಾಣವು ದೇಹದಿಂದ ಹೊರಟುಹೋಗುತ್ತದೆ. ಇಂದು ಬಾಲಕನಾಗಿರುವವನು ಕ್ರಮವಾಗಿ ಯುವಕನಾಗುತ್ತ ಕೊನೆಗೆ ವೃದ್ಧಾಪ್ಯವನ್ನು ಹೊಂದುವನು. ಹೀಗೆ ಎಲ್ಲ ಭಾಗ್ಯಗಳೂ ಚಂಚಲವು. ಆದರೆ ನಾನು ಮಾಡುವ ಧರ್ಮಕಾರ್ಯಗಳು ಮಾತ್ರ ಯಾವಾಗಲೂ ನಮ್ಮೊಂದಿಗೇ ಇರುತ್ತದೆ. ಮರಣ ಕಾಲದಲ್ಲಿಯೂ ನಮ್ಮನ್ನು ಅನುಸರಿಸುವುದು ಧರ್ಮವೊಂದೇ. ಆದ್ದರಿಂದ ಜೀವನದ ಕ್ಷಣಿಕತೆಯನ್ನು ಮನಗಂಡು ಧರ್ಮಮಾರ್ಗ ಪ್ರವರ್ತಕನಾಗಬೇಕು. ||೨೦||

नराणां नापितो धूर्तः पक्षिणां चैव वायसः।
चतुष्पदां शृगालस्तु स्त्रीणां धूर्ता च मालिनी॥

ಮನುಷ್ಯರಲ್ಲಿ ಕ್ಷೌರಿಕನು ವಂಚಕನು. ಪಕ್ಷಿಗಳಲ್ಲಿ ಕಾಗೆಯು ಮೋಸಗಾರ ಪಕ್ಷಿಯು. ನಾಲ್ಕು ಕಾಲಿನ ಪ್ರಾಣಿಗಳಲ್ಲಿ ನರಿಯು ಉಪಾಯಗಾರವು. ಸ್ತ್ರೀಯರಲ್ಲಿ ಹೂವಾಡಿಗನ ಹೆಂಡತಿಯು ಚತುರಳು.

ಕ್ಷೌರಿಕನು ಎಲ್ಲ ಪುರುಷರಿಗೂ ಬೇಕಾದವನು. ಅವನು ತನ್ನ ಪ್ರಾಮುಖ್ಯವನ್ನು ಅರ್ಥಮಾಡಿಕೊಂಡು ಹೆಚ್ಚು ಹಣ ಸಂಪಾದನೆಯಾಗುವಂತೆ ಕ್ಷೌರಕರ್ಮವನ್ನು ನಡೆಸುತ್ತಾನೆ. ಪಕ್ಷಿಗಳಲ್ಲಿ ಕಾಗೆಯನ್ನು ನೀಚವಾದ ಕಾರ್ಯಗಳಿಗೆ ಉದಾಹರಣೆ ಕೊಡುವುದುಂಟು. ಪ್ರಾಣಿಗಳಲ್ಲಿ ನರಿಯು ತನ್ನ ಸ್ವಾರ್ಥಕ್ಕಾಗಿ ಉಳಿದವರಿಗೆ ತೊಂದರೆ ಕೊಡುವಂತೆ ಚಿತ್ರಿಸುತ್ತಾರೆ. ಪಂಚತಂತ್ರದ ಕರಟಕ-ದಮನಕಗಳನ್ನು ಇಲ್ಲಿ ಉದಾಹರಿಸಬಹುದು. ಹೂವಾಡಿಗಿತ್ತಿಯು ವ್ಯಾಪಾರದಲ್ಲಿ ಚಾಲಾಕಿನಿಂದ ಮೋಸಮಾಡಬಲ್ಲಳು. ||೨೧||

## ಅಧ್ಯಾಯದ ಸಾರಾಂಶ

ಗುರುವಿನ ಮಹಿಮೆ ಬಗ್ಗೆ ಸರ್ವತ್ರ ವರ್ಣನೆ ಸಿಗುವುದು. ಆಚಾರ್ಯರು ಸಾಮಾನ್ಯ ಬದುಕಿನಲ್ಲಿ ಯಾವ ವ್ಯಕ್ತಿ ಯಾರಿಗೆ ಗುರುವಾಗ ಬಲ್ಲರೆಂದು ತಿಳಿಸುವರು. ಸ್ತ್ರೀಯರಿಗೆ ಪತಿಯು ಹಾಗೂ ಗೃಹಸ್ಥರಿಗೆ ಅತಿಥಿಯು ಗುರುವಾಗುವರು. ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರಿಗೆ ಅಗ್ನಿಹೋತ್ರ ಗುರುವಾದರೆ ಚಾತುರ್ವರ್ಣಗಳಿಗೆ ಬ್ರಾಹ್ಮಣ ಗುರುವಾಗುವನು.



## ॥ ಅಧ್ಯಾಯ - ೬ ॥

**ಪಂಡಿತನಾದವನು ಬಕಪಕ್ಷಿಯ ಹಾಗೆ ಇಂದ್ರಿಯ ಸಂಯಮದಿಂದ, ದೇಶ, ಕಾಲ ಮತ್ತು ಬಲದ ಪ್ರಮಾಣವನ್ನು ತಿಳಿದು ಕಾರ್ಯ ಸಾಧಿಸಬೇಕು.**

श्रुत्वा धर्मं विजानाति श्रुत्वा त्यजति दुर्मतिम्।
श्रुत्वा ज्ञानमवाप्नोति श्रुत्वा मोक्षमवाप्नुयात्॥

ಮನುಷ್ಯನು ತಿಳಿದವರಿಂದ ಶ್ರವಣಮಾಡಿ ಧರ್ಮವನ್ನು ಅರಿಯಬೇಕು. ಹಿರಿಯರಿಂದ ಕೇಳಿ ಕೆಟ್ಟ ಬುದ್ಧಿಯನ್ನು ಬಿಡುತ್ತಾನೆ. ಶ್ರವಣದಿಂದ ಜ್ಞಾನವನ್ನು ಪಡೆಯುತ್ತಾನೆ. ಶ್ರವಣದಿಂದಲೇ ಮೋಕ್ಷವನ್ನು ಪಡೆಯಬೇಕು.

ಧರ್ಮದ ವಿಚಾರವಾಗಿ ಧಾರ್ಮಿಕ ವ್ಯಕ್ತಿಗಳಿಂದ ಶ್ರವಣ ಮಾಡಿದರೆ ಅದರ ರಹಸ್ಯಗಳನ್ನೆಲ್ಲ ತಿಳಿದು ಸರಿಯಾಗಿ ಆಚರಣೆ ಮಾಡಬಹುದು. ದುರ್ಮಾರ್ಗದಲ್ಲಿರುವ ವ್ಯಕ್ತಿಗೆ ಹಿರಿಯರು ಸದ್ಬೋಧೆ ಮಾಡಿದರೆ ಅದರಿಂದ ಅವನು ತನ್ನ ತಪ್ಪನ್ನು ತಿದ್ದಿ ಕೊಂಡು ಸರಿಯಾಗುವ ಸಾಧ್ಯತೆಯಿದೆ. ಎಲ್ಲ ರೀತಿಯ ಜ್ಞಾನವನ್ನು ಕೂಡ ಜ್ಞಾನಿಗಳ ಮಾತನ್ನು ಕೇಳುವುದರಿಂದ ಪಡೆಯಬಹುದು. ಮೋಕ್ಷಕ್ಕೂ ಕೂಡ ಶಾಸ್ತ್ರ ಮತ್ತು ಗುರುವಾಕ್ಯಗಳ ಶ್ರವಣವೇ ಮುಖ್ಯ ಸಾಧನವು. ||೧||

पक्षिणां काकश्चाण्डालः पशूनां चैव कुक्कुरः।
मुनीनां कोपी चाण्डालः सर्वेषां चैव निन्दकः॥

ಪಕ್ಷಿಗಳಲ್ಲಿ ಕಾಗೆಯು ದುಷ್ಟವಾದುದು. ಪಶುಗಳಲ್ಲಿ ನಾಯಿಯು ನೀಚವಾದ ಪ್ರಾಣಿಯು. ಮುನಿಗಳಲ್ಲಿ ಕೋಪವನ್ನು ಬಿಡದವನು ಚಂಡಾಲನು. ಇನ್ನೊಬ್ಬರನ್ನು ನಿಂದಿಸುವವನು ಎಲ್ಲರಲ್ಲಿಯೂ ನೀಚನೆನಿಸುವನು.

ಪಕ್ಷಿಗಳಲ್ಲಿ ಕಾಗೆಯನ್ನು ನೀಚವೆಂದು ಉದಾಹರಣೆಗೆ ಕೊಡುವರು. ಇದು ಹಿಂದಿನವರ ಅಭಿಪ್ರಾಯ. ಪ್ರಾಣಿಗಳಲ್ಲಿ ನಾಯಿಯನ್ನು ಹೀನಜಾತಿಯೆಂದು ಭಾವಿಸುವರು. ಮುನಿಯಾಗಿದ್ದು ಕೋಪವನ್ನು ತ್ಯಜಿಸದವನನ್ನು ಚಾಂಡಾಲನೆಂದು ತಿಳಿದುಕೊಳ್ಳಬೇಕೆಂಬುದೇನೋ ಸತ್ಯ ಸಂಗತಿ. ಪರನಿಂದಕನು ಎಲ್ಲರಿಗಿಂತಲೂ ಹೀನನೆಂಬುದು ಸಾಮಾನ್ಯ ನೀತಿಯಾಗಿದೆ. ॥೨॥

भस्मना शुध्यते कांस्यं ताम्रमम्लेन शुध्यति।
रजसा शुध्यते नारी नदी वेगेन शुध्यति॥

ಕಂಚಿನ ಪಾತ್ರೆಯನ್ನು ಬೂದಿಯಿಂದ ಉಜ್ಜಿದರೆ ಶುಭ್ರವಾಗುತ್ತದೆ. ತಾಮ್ರದ ಪಾತ್ರೆಯನ್ನು ಹುಣಿಸೆಹಣ್ಣಿನಿಂದ ತಿಕ್ಕಿದರೆ ಹೊಳೆಯುತ್ತದೆ. ಹೆಂಗಸು ರಜೋದರ್ಶನದಿಂದ ಶುದ್ಧಳಾಗುತ್ತಾಳೆ. ನದಿಯು ವೇಗವಾಗಿ ಹರಿಯುವುದರಿಂದ ಶುದ್ಧವಾಗುತ್ತದೆ.

ಬೇರೆ ಬೇರೆ ವಸ್ತುಗಳನ್ನು ಶುದ್ಧ ಮಾಡಲು ಬೇರೆ ಬೇರೆ ವಿಧಾನಗಳಿವೆ. ಬೂದಿಯು ಕಂಚಿನ ಮೇಲಿನ ಕೊಳೆಯನ್ನು ತೆಗೆಯುತ್ತದೆ. ತಾಮ್ರದ ಮೇಲೆ ಆಮ್ಲವು ವರ್ತಿಸಿ ಶುದ್ಧಗೊಳಿಸುತ್ತದೆ. ಸ್ತ್ರೀಯು ಪ್ರತಿ ತಿಂಗಳೂ ರಜೋದರ್ಶನದ ನಂತರ ಶುದ್ಧಳೆನಿಸುತ್ತಾಳೆ. ನದಿಯು ವೇಗವಾಗಿ ಹರಿಯುತ್ತಿದ್ದರೆ ಅದರ ನೀರು ಸ್ವಚ್ಛವಾಗಿರುತ್ತದೆ. ನಿಂತ ನೀರು ಮಲಿನವಾಗಿರುತ್ತದೆ. ॥೩॥

भ्रमन् सम्पूज्यते राजा भ्रमन् सम्पूज्यते द्विज:।
भ्रमन् सम्पूज्यते योगी स्त्री भ्रमन्ती विनश्यति॥

ತನ್ನ ದೇಶದಲ್ಲಿ ಸಂಚಾರಮಾಡುವ ರಾಜನು ಗೌರವಿಸಲ್ಪಡುತ್ತಾನೆ. ದೇಶಸಂಚಾರ ಮಾಡುವ ಬ್ರಾಹ್ಮಣನು ಗೌರವಕ್ಕೆ ಪಾತ್ರನಾಗುತ್ತಾನೆ. ತೀರ್ಥಯಾತ್ರೆ ಮಾಡುವ ಯೋಗಿ ಪೂಜ್ಯನೆನಿಸುತ್ತಾನೆ. ಹೆಂಗಸುಮಾತ್ರ ಸುತ್ತಾಟಕ್ಕೆ ಮನಸ್ಸು ಕೊಟ್ಟರೆ ನಾಶವಾಗುತ್ತಾಳೆ.

ರಾಜನು ತನ್ನ ರಾಜ್ಯದಲ್ಲಿ ಸಂಚಾರ ಮಾಡುತ್ತ, ಅಲ್ಲಿನ ಸ್ಥಿತಿಗತಿಗಳನ್ನು ಅರಿಯಬೇಕು. ಅಂತಹ ರಾಜನಲ್ಲಿ ಪ್ರಜೆಗಳಿಗೆ ಗೌರವ ಮೂಡುತ್ತದೆ. ಬ್ರಾಹ್ಮಣನು ಬೇರೆ ಬೇರೆ ಸ್ಥಳಗಳನ್ನು ಸಂದರ್ಶಿಸಿ ಹೆಚ್ಚಿನ ಜ್ಞಾನವನ್ನು ಸಂಪಾದಿಸಬೇಕು. ಒಂದೇ ಕಡೆಯಿದ್ದರೆ

ವಿಶೇಷವಾದ ಮಾಹಿತಿಯಾಗಲೀ, ಒಳ್ಳೆಯ ಜ್ಞಾನಿಗಳ ಸಂಪರ್ಕವಾಗಲೀ ದೊರೆಯುವುದಿಲ್ಲ. ಈ ರೀತಿಯಲ್ಲಿ ಜ್ಞಾನಿಯಾದ ಬ್ರಾಹ್ಮಣನು ಜನರಲ್ಲಿ ಮಾನ್ಯತೆಯನ್ನು ಪಡೆಯುತ್ತಾನೆ. ಯೋಗಿಯಾದವನು ಒಂದು ಕಡೆಯಲ್ಲಿ ಮೂರು ರಾತ್ರಿಗಳಿಗಿಂತ ಹೆಚ್ಚು ದಿನ ತಂಗಬಾರದೆಂಬ ನಿಯಮವೇ ಇದೆ. ಅವನು ಜನರಿಗೆ ಉಪದೇಶ ನೀಡುತ್ತ, ತೀರ್ಥಗಳನ್ನು ಸಂದರ್ಶಿಸುತ್ತ ಸಂಚಾರ ಮಾಡುತ್ತಲೇ ಇರಬೇಕು. ಆದರೆ ಸ್ತ್ರೀಯರು ಹೊರಗೆ ಸುತ್ತಾಡಲು ಹೊರಟರೆ ಮನೆಯ ಕಾರ್ಯಗಳಿಗೆ ತೊಂದರೆಯಾಗಿ ಗೃಹದ ಪರಿಸ್ಥಿತಿ ಅಸಹನೀಯವಾಗುವುದು. ಸ್ತ್ರೀಯರು ಹೆಚ್ಚು ಜನರ ಕಣ್ಣಿಗೆ ಬಿದ್ದರೆ ಅವರ ಶೀಲ ರಕ್ಷಣೆಯೂ ಕಷ್ಟ. 'ಕೂತು ಗಂಡಸು ಕೆಟ್ಟ, ತಿರುಗಿ ಹೆಣ್ಣು ಕೆಟ್ಟಳು' ಎಂಬ ಗಾದೆ ಮಾತೇ ಇದಕ್ಕೆ ಸಾಕ್ಷಿಯು.॥೪॥

तादृशी जायते बुद्धिर्व्यवसायोऽपि तादृशः।
सहायास्तादृशा एव यादृशी भवितव्यता॥

ಉದ್ಯೋಗ ಮತ್ತು ಪ್ರಯತ್ನ ಯಾವ ರೀತಿ ಇರುತ್ತದೆಯೋ, ಮನುಷ್ಯರ ಬುದ್ಧಿಯೂ ಅದರಂತೆಯೇ ಆಗುತ್ತದೆ. ಹೇಗೆ ಆಗಬೇಕೆಂದಿರುತ್ತದೆಯೋ ಅದಕ್ಕೆ ತಕ್ಕಂತೆಯೇ ಸಹಾಯಕರು ಒದಗುತ್ತಾರೆ.

ಮನುಷ್ಯನ ಬುದ್ಧಿ ಅವರವರ ಉದ್ಯೋಗ ಮತ್ತು ಪ್ರಯತ್ನಗಳಿಗೆ ಹೊಂದಿಕೊಂಡು ವಿಕಾಸವಾಗುತ್ತದೆ. ಆಗಬೇಕಾದುದನ್ನು ತಪ್ಪಿಸಲು ಸಾಧ್ಯವಿಲ್ಲ. ಮುಂದಿನ ಆಗುಹೋಗುಗಳಿಗೆ ತಕ್ಕಂತೆಯೇ ಪರಿಸ್ಥಿತಿ ಸೃಷ್ಟಿಯಾಗಿ ಸಹಾಯ ಒದಗುತ್ತದೆ. ಇದರಲ್ಲಿ ಮನುಷ್ಯನ ಪಾತ್ರ ಗೌಣ.॥೫॥

कालः पचति भूतानि कालः संहरते प्रजाः।
कालः सुप्तेषु जागर्ति कालो हि दुरतिक्रमः॥

ಕಾಲವು ಎಲ್ಲ ಪ್ರಾಣಿಗಳನ್ನು ತನ್ನ ಉದರದಲ್ಲಿ ಸೇರಿಸಿಕೊಳ್ಳುವುದು. ಅದು ಎಲ್ಲರನ್ನೂ ಸಂಹರಿಸುವುದು. ಮಲಗಿದ್ದ ಕಾಲದಲ್ಲಿಯೂ ಅದು ಎಚ್ಚರವಾಗಿಯೇ ಇರುವುದು. ಕಾಲವನ್ನು ಮೀರುವುದು ಯಾರಿಗೂ ಸಾಧ್ಯವಿಲ್ಲ.

ಎಂತಹ ಪ್ರಭಾವಶಾಲಿಗಳಾದ ವ್ಯಕ್ತಿಗಳಾದರೂ ಕಾಲದ ಮುಂದೆ ತೃಣ ಸಮಾನರು. ಅದು ಎಲ್ಲರನ್ನೂ ಸಮಾನವಾಗಿ ಅವರವರ ಕರ್ಮಗಳಿಗೆ ತಕ್ಕಂತೆ ಪಚನಮಾಡುವುದು. ಅದಕ್ಕೆ ಬಡವಬಲ್ಲಿದರೆಂಬ ತಾರತಮ್ಯವೇನೂ ಇಲ್ಲ. ನಾವು ನಿದ್ದೆ ಮಾಡುವಾಗ ನಮ್ಮ ದೃಷ್ಟಿಯಿಂದ ಕಾಲವು ಅಜ್ಞಾತವಾಗಿದ್ದರೂ ಅದು ಎಚ್ಚರವಾಗಿದ್ದು ತನ್ನ ಕೆಲಸವನ್ನು

ಮಾಡಿಯೇ ತೀರುವುದು. ನಿದ್ದೆಯಲ್ಲಿಯೂ ದೈಹಿಕವಾದ ಕೆಲವು ಕ್ರಿಯೆಗಳು ನಡೆದು ಮನುಷ್ಯನ ಆಯಸ್ಸು ಸವೆಯುತ್ತಲೇ ಇರುತ್ತದೆ. ಕಾಲವನ್ನು ಗೆದ್ದವರು ಈವರೆಗೆ ಯಾರೂ ಇಲ್ಲ. ||೬||

न पश्यति च जन्मान्ध: कामान्धो नैव पश्यति।
न पश्यति मदोन्मत्तो ह्यर्थी दोषान् न पश्यति॥

ಹುಟ್ಟು ಕುರುಡನು ಏನನ್ನು ನೋಡಲಾರನು. ಕಾಮದಿಂದ ಕುರುಡ ನಾಗಿರುವವನೂ ಕೂಡ ನೋಡಲಾರನು. ಅಹಂಕಾರದಿಂದ ಕೊಬ್ಬಿರುವವನೂ ನೋಡಲಾರನು. ಬೇಡುವವನು ದೋಷಗಳನ್ನು ನೋಡಲಾರನು.

ಜನ್ಮದಿಂದಲೇ ಅಂಧನಾಗಿರುವವನು ದೈವದಿಂದಲೇ ದೃಷ್ಟಿವಂಚಿತನಾಗಿರುತ್ತಾನೆ. ಅವನು ಏನನ್ನೂ ನೋಡಲಾರನು. ಆದರೆ ಉಳಿದ ಮೂವರೂ ಕಣ್ಣಿದ್ದೂ ಕುರುಡರು ಕಾಮಿಯಾದವನು ಪರಸ್ತ್ರೀಯನ್ನು ಅಪೇಕ್ಷಿಸಬಾರದೆಂಬ ವಿವೇಚನೆಯಿಲ್ಲದೆ ತನ್ನ ಸ್ವಾರ್ಥಕ್ಕಾಗಿ ಮುಂದಾಗುತ್ತಾನೆ. ಅಹಂಕಾರದಿಂದ ಉನ್ಮತ್ತನಾದವನ ಪಾಡೂ ಇಷ್ಟೆ, ಅಧಿಕಾರ, ಐಶ್ವರ್ಯ, ರೂಪು, ಮದ್ಯಪಾನ ಮುಂತಾದ ಯಾವುದಾದರೂ ಈ ಉನ್ಮತ್ತತೆಗೆ ಕಾರಣವಾಗಿರಬಹುದು. ಬೇಡುವವನೂ ಕೂಡ ತನಗೆ ಬೇಕಾದುದನ್ನು ಪಡೆಯಲು ಉತ್ಸುಕನಾಗಿರುತ್ತಾನೆಯೇ ಹೊರತು ಅದರಲ್ಲಿರುವ ದೋಷಗಳನ್ನು ಗಮನಿಸುವುದೇ ಇಲ್ಲ. ||೭||

स्वयं कर्म करोत्यात्मा स्वयं तत्फलमश्नुते।
स्वयं भ्रमति संसारे स्वयं तस्माद्विमुच्यते॥

ಜೀವಾತ್ಮವು ತಾನೇ ಕರ್ಮಗಳಲ್ಲಿ ಪ್ರವೃತ್ತವಾಗುತ್ತದೆ. ಅದರ ಫಲಗಳಾದ ಪುಣ್ಯ ಪಾಪಗಳನ್ನು ಅದೇ ಅನುಭವಿಸುತ್ತದೆ. ಹೀಗೆ ಸಂಸಾರವೆಂಬ ಚಕ್ರದಲ್ಲಿ ತಾನೇ ಸಿಕ್ಕಿಹಾಕಿಕೊಂಡು ಸುತ್ತುತ್ತಿರುತ್ತದೆ. ಅದರ ಅರಿವಾದಾಗ ತಾನೇ ಸಾಧನೆಯಿಂದ ಬಿಡುಗಡೆಹೊಂದಿ ಮುಕ್ತವಾಗುತ್ತದೆ.

'ಆತ್ಮೈವ ಹಿ ಆತ್ಮನೋ ಬಂಧುಃ ಆತ್ಮೈವ ರಿಪುರಾತ್ಮನಃ' ಎಂಬ ಗೀತಾವಾಕ್ಯದ ಭಾವವನ್ನು ಈ ಶ್ಲೋಕದಲ್ಲಿ ಕಾಣುತ್ತೇವೆ. ಜೀವಾತ್ಮನು ಈ ದೇಹದ ಮೂಲಕ ಕರ್ತೃಭಾವವನ್ನು ಹೊಂದಿ ಪುಣ್ಯ ಅಥವಾ ಪಾಪಕರ್ಮಗಳನ್ನು ಮಾಡುತ್ತದೆ. ಸಹಜವಾಗಿ ತಾನು ಮಾಡಿದ ಕರ್ಮದ ಫಲವನ್ನು ತಾನೇ ಅನುಭವಿಸಬೇಕಾಗುತ್ತದೆ. ಆದರಿಂದಾಗಿ ಮತ್ತೆ ಮತ್ತೆ ಈ ಜಗತ್ತಿನಲ್ಲಿ ಹುಟ್ಟು ಸಾವುಗಳನ್ನು ಹೊಂದುತ್ತದೆ. ತನ್ನ ಈ ತಪ್ಪಿನ

ಅರಿವಾದಾಗ ಗುರುವಾಕ್ಯ, ಶಾಸ್ತ್ರ ಶ್ರವಣಾದಿಗಳಿಂದ ಜ್ಞಾನವನ್ನು ಪಡೆದು ಮುಕ್ತವಾಗುತ್ತದೆ. ಇದಕ್ಕೆ ಬೇರೆ ಯಾರೂ ಕಾರಣರಾಗುವುದಿಲ್ಲ. ||೮||

राजा राष्ट्रकृतं भुंक्ते राज्ञः पापं पुरोहितः।
भर्ता च स्त्रीकृतं पापं शिष्यपापं गुरुस्तथा॥

ರಾಜನು ತನ್ನ ಪ್ರಜೆಗಳು ಮಾಡುವ ಪಾಪದ ಫಲವನ್ನು ಅನುಭವಿಸಬೇಕಾಗುತ್ತದೆ. ರಾಜನು ಪಾಪಕರ್ಮಿಯಾದರೆ ಅದರ ಫಲವನ್ನು ಪುರೋಹಿತನು ಪಡೆಯಬೇಕಾಗುತ್ತದೆ. ಪತ್ನಿಯು ಮಾಡಿದ ಪಾಪಕ್ಕೆ ಪುರುಷನೂ, ಶಿಷ್ಯನು ಮಾಡುವ ಕೃತ್ಯಗಳಿಗೆ ಗುರುವೂ ಭಾಗಿಗಳಾಗುವರು.

ರಾಜನು ಧರ್ಮದಿಂದ ರಾಜ್ಯಭಾರ ಮಾಡಿದರೆ ಪ್ರಜೆಗಳೂ ಅಂತೆಯೇ ಇರುವರು. 'ಯಥಾ ರಾಜಾ ತಥಾ ಪ್ರಜಾ:' ಎಂಬುದು ಆರ್ಯೋಕ್ತಿ. ರಾಜನು ಸರಿಯಾಗಿಲ್ಲದಿದ್ದರೆ, ಪ್ರಜೆಗಳು ಮಾಡುವ ಪಾಪಕರ್ಮಗಳ ಫಲವನ್ನು ಅವನು ಅನುಭವಿಸಬೇಕು. ರಾಜನನ್ನು ಧರ್ಮಮಾರ್ಗದಲ್ಲಿರಿಸುವುದು ಪುರೋಹಿತನ ಕರ್ತವ್ಯ. ಅವನು ತನ್ನ ಕರ್ತವ್ಯದಿಂದ ವಂಚಿತನಾದರೆ ಅದರ ಫಲವನ್ನು ಉಣ್ಣಬೇಕಾದೀತು! ಅಂತೆಯೇ ಪತ್ನಿಗೆ ಪತಿಯೇ ಗುರುವು. ಆವಳನ್ನು ಧರ್ಮಮಾರ್ಗದಲ್ಲಿ ಇರಿಸುವುದು ಪತಿಗೆ ಸೇರಿದ್ದು. ಅದರಿಂದ ಭ್ರಷ್ಟನಾದರೆ ಅದರ ಪಾಪವು ಅವನಿಗೇ ಸೇರುತ್ತದೆ. ಗುರುವೂ ಶಿಷ್ಯನಿಗೆ ಉಪದೇಶಮಾಡಿ ತಿದ್ದಬೇಕು. ಶಿಷ್ಯನು ದುರ್ಮಾರ್ಗಿಯಾದರೆ ಅದು ಗುರುವಿನದೇ ಅಪರಾಧ ವಾದುದರಿಂದ ಆ ಪಾಪಕ್ಕ ಅವನು ಭಾಗಿಯಾಗಬೇಕಾಗುತ್ತದೆ. ||೯||

ऋणकर्ता पिता शत्रु माता च व्यभिचारिणी।
भार्या रूपवती शत्रुः पुत्र शत्रुरपण्डितः॥

ಮಕ್ಕಳಿಗೆ ಸಾಲವನ್ನು ಉಳಿಸುವ ತಂದೆಯು ಅವರಿಗೆ ಶತ್ರುವು. ವ್ಯಭಿಚಾರಿಣಿಯಾದ ತಾಯಿಯು ಮಕ್ಕಳಿಗೆ ಶತ್ರುವು. ರೂಪವತಿಯಾದ ಹೆಂಡತಿಯು ಗಂಡನಿಗೆ ಶತ್ರುವು. ಪಾಂಡಿತ್ಯವನ್ನು ಪಡೆಯದ ಮಗನು ತಂದೆಗೆ ಶತ್ರುವು.

ತಂದೆಯು ಮಾಡಿದ ಸಾಲವನ್ನು ತೀರಿಸುವ ಹೊಣೆ ಮಕ್ಕಳ ಮೇಲೆ ಬೀಳುವುದು. ಇದರಿಂದ ಅವರ ಏಳಿಗೆಗೆ ಅಡಚಣೆಯಾಗುವುದು. ಅದುದರಿಂದ ತಂದೆಯಾದವನು ಮಕ್ಕಳ ಮೇಲೆ ಸಾಲದ ಹೊರೆಯನ್ನು ಹೇರಬಾರದು. ತಾಯಿಯ ಶೀಲವು ಮಕ್ಕಳ ಮೇಲೆ ಪರಿಣಾಮ ಬೀರುವುದು. 'ತಾಯಿಯಂತೆ ಮಗಳು, ನೂಲಿನಂತೆ ಸೀರೆ' ಎಂಬಂತೆ ಮಕ್ಕಳು ಸ್ವಚ್ಛಂದ ವೃತ್ತಿ ಕೈಗೊಳ್ಳಬಹುದು. ಇಲ್ಲವೆ ತಾಯಿಯ ಶೀಲಭ್ರಷ್ಟತೆ ಮಕ್ಕಳ

ಭವಿಷ್ಯದ ಮೇಲೆ ಕರಾಳ ಛಾಯೆ ಬೀರಬಹುದು. ರೂಪವತಿಯಾದ ಹೆಂಡತಿಯು ಪರರ ಕಣ್ಣಿಗೆ ಆಕರ್ಷಕವಾಗಿ ಕಾಣುತ್ತಾಳೆ. ಅವಳನ್ನು ಕಾಪಾಡಿಕೊಳ್ಳುವುದು ಗಂಡನಿಗೆ ಸಮಸ್ಯೆಯಾಗಬಹುದು. ಮಗನು ಸರಿಯಾಗಿ ಅಭ್ಯಾಸ ನಡೆಸಿ ಪಂಡಿತನಾಗದಿದ್ದರೆ, ಜನರಲ್ಲಿ ಅವಹೇಳನೆಗೆ ಪಾತ್ರನಾಗಿ, ಮನೆಗೆ ಕಳಂಕಪ್ರಾಯನಾಗುತ್ತಾನೆ. ಇವರೆಲ್ಲರೂ ಶತ್ರುಸಮಾನರು. ॥೧೦॥

लुब्धमर्थेन गृह्णीयात् स्तब्धमञ्जलिकर्मणा।
मूर्खः छन्दोऽनुवृत्तेन यथार्थत्वेन पण्डितम्॥

ಲೋಭಿಯಾದ ಮನುಷ್ಯನಿಗೆ ಧನದ ಆಸೆಯನ್ನು ತೋರಿಸಿ ವಶಪಡಿಸಿ ಕೊಳ್ಳಬಹುದು. ಸ್ಥಿರವಾದ ಸ್ವಭಾವದವನನ್ನು ನಮಸ್ಕಾರದಿಂದ ಅನುಕೂಲವನ್ನಾಗಿ ಮಾಡಿಕೊಳ್ಳಬೇಕು. ಮೂರ್ಖನನ್ನು ಅವನಿಗೆ ಇಷ್ಟವಾದದನ್ನು ಕೊಡುವುದರ ಮೂಲಕ ಮತ್ತು ಪಂಡಿತನನ್ನು ಇರುವ ವಿಷಯವನ್ನು ಅಂತೆಯೇ ತಿಳಿಸುವುದರ ಮೂಲಕ ಸರಿಪಡಿಸಿಕೊಳ್ಳಬಹುದು.

ಲೋಭಿಯಾದ ಮನುಷ್ಯನಿಂದ ಏನಾದರೂ ಕಾರ್ಯವಾಗಬೇಕಾದರೆ ಅವನಿಗೆ ಹಣವನ್ನು ನೀಡಿ, ಸುಮುಖನಾಗುವಂತೆ ಮಾಡಿಕೊಳ್ಳಬಹುದು. ಚಲಿಸದೆ ಸ್ಥಿರವಾಗಿರುವವನು ಬಹಳವಾಗಿ ನಮಿಸಿ ಬೇಡಿಕೊಂಡರೆ ಕೃಪೆದೋರಬಹುದು. ಮೂರ್ಖನಾದವನಿಗೆ ಅವನಿಗೆ ಇಷ್ಟವಾದುದನ್ನು ಕೊಟ್ಟುಬಿಟ್ಟರೆ, ಹೇಳಿದ ಕೆಲಸ ಮಾಡಿಕೊಡುತ್ತಾನೆ. ಪಂಡಿತನಿಗೆ ಈ ರೀತಿ ಯಾವ ಆಮಿಷವನ್ನು ಒಡ್ಡುವುದು ಸಾಧ್ಯವಿಲ್ಲ. ಅವನಿಗೆ ಸತ್ಯವನ್ನು ಹೇಳಿದರೆ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡು ಕೈಲಾದ ಸಲಹೆ ಸಹಾಯಗಳಿಗೆ ಮುಂದಾಗುತ್ತಾನೆ. ॥೧೧॥

वरं न राज्यं न कुराजराज्यं वरं न मित्रं न कुमित्रमित्रम्।
वरं न शिष्यो न कुशिष्यशिष्यो वरं न दारा न कुदारदाराः॥

ರಾಜ್ಯವಿಲ್ಲದಿದ್ದರೂ ಚಿಂತೆಯಿಲ್ಲ. ಕೆಟ್ಟರಾಜನಿರುವ ರಾಜ್ಯ ಮಾತ್ರ ಬೇಡ. ಮಿತ್ರರಿಲ್ಲದಿದ್ದರೂ ಬಾಧಕವಿಲ್ಲ. ಕೆಟ್ಟಸ್ನೇಹಿತರನ್ನೂ ಹೊಂದಿರುವ ಮಿತ್ರನು ಮಾತ್ರ ಬೇಡ. ಶಿಷ್ಯರಿಲ್ಲದಿದ್ದರೂ ಚಿಂತೆಯಿಲ್ಲ. ಆದರೆ ಕೆಟ್ಟ ಶಿಷ್ಯರಿಗೆ ಶಿಷ್ಯನಾದವನನ್ನು ಮಾತ್ರ ಶಿಷ್ಯನಾಗಿ ಸ್ವೀಕರಿಸಬಾರದು. ಹೆಂಡತಿಯಿಲ್ಲದಿದ್ದರೂ ಕೆಟ್ಟ ಪತ್ನಿಯನ್ನು ಪಡೆಯುವುದಕ್ಕಿಂತ ಉತ್ತಮ.

'Nothing is better than nonsense' ಎಂಬ ಇಂಗ್ಲೀಷ್ ಗಾದೆಯ ಭಾವವನ್ನು ಈ ಶ್ಲೋಕವು ತೋರಿಸುತ್ತದೆ. ಕೆಟ್ಟರಾಜನು ಇರುವ ದೇಶದಲ್ಲಿ ಇರುವುದಕ್ಕಿಂತ

ರಾಜ್ಯವೇ ಬೇಡವೆಂದು ಆವನ ಸಹವಾಸವನ್ನು ತೊರೆಯುವುದು ಉತ್ತಮ. ದುಷ್ಟನಾದ ಸ್ನೇಹಿತನು ಇವನನ್ನು ದುರ್ಮಾರ್ಗಕ್ಕೆ ಎಳೆಯುತ್ತಾನೆ. ಅದಕ್ಕಿಂತ ಮಿತ್ರರಿಲ್ಲದೆ ಇದ್ದರೆ ಒಳಿತು. ಶಿಷ್ಯರು ಗುರುವಿನ ಕೀರ್ತಿಯನ್ನು ಬೆಳಗುವಂತಹವರಾಗಬೇಕು. ದುಷ್ಟಶಿಷ್ಯರಿಂದ ಗುರುವಿಗೆ ಅಪಕೀರ್ತಿ ಬರುತ್ತದೆ. ಹಾಗೆಯೇ ದುಷ್ಟಳಾದ ಪತ್ನಿಯಿಂದ ಮನೆಯ ಶಾಂತಿ ಹಾಳಾಗುತ್ತದೆ. ಅದಕ್ಕಿಂತ ಒಂಟಿಯಾಗಿರುವುದು ಲೇಸು.||೧೨||

**कुराजराज्येन कुतः प्रजासुखं कुमित्रमित्रेण कुतोऽस्ति निर्वृतिः।**
**कुदारदारैश्च कुतो गृहे रतिः कुशिष्यमध्यापयतः कुतो यशः॥**

ಹಿಂದಿನ ಶ್ಲೋಕದ ಭಾವವನ್ನೇ ಇದರಲ್ಲಿ ವಿಸ್ತರಿಸಲಾಗಿದ. ದುಷ್ಟನಾದ ರಾಜನ ರಾಜ್ಯದಲ್ಲಿ ಪ್ರಜೆಗಳಿಗೆ ಸುಖವಾದರೂ ಹೇಗಿರಲು ಸಾಧ್ಯ ? ಮಿತ್ರನು ವಿಶ್ವಾಸಘಾತುಕನಾದರೆ ಶಾಂತಿ ಹಾಳಾಗುತ್ತದೆ. ಪತ್ನಿಯು ದುಷ್ಟೆಯಾದರೆ ಪುರುಷನಿಗೆ ಮನೆಯ ಬಗ್ಗೆ ಆಸಕ್ತಿ ಕಡಿಮೆಯಾಗುತ್ತ ಬರುತ್ತದೆ. ದುಷ್ಟಶಿಷ್ಯರಿಗೆ ಪಾಠ ಹೇಳುವ ಅಧ್ಯಾಪಕನಿಗೆ ಕೀರ್ತಿಬರಲು ಹೇಗೆ ತಾನೇ ಸಾಧ್ಯವಾದೀತು? ಆದುದರಿಂದ ಇಂತಹ ವ್ಯರ್ಥ ಕೆಲಸಗಳನ್ನು ತ್ಯಜಿಸುವುದೇ ಉತ್ತಮ. ||೧೩||

**सिंहादेकं बकादेकं शिक्षेच्चत्वारि कुक्कुटात्।**
**वायसात्पञ्च शिक्षेच्च षट्शुनस्त्रीणि गर्दभात्॥**

ಸಿಂಹದಿಂದ ಒಂದು, ಬಕಪಕ್ಷಿಯಿಂದ ಒಂದು, ಕೋಳಿಯಿಂದ ನಾಲ್ಕು, ಕಾಗೆಯಿಂದ ಐದು, ನಾಯಿಯಿಂದ ಆರು, ಕತ್ತೆಯಿಂದ ಮೂರು ಗುಣಗಳನ್ನು ಕಲಿಯಬೇಕು. ಈ ಗುಣಗಳು ಯಾವುವೆಂಬುದನ್ನು ಆಚಾರ್ಯರೆ ಮುಂದಿನ ಶ್ಲೋಕಗಳಲ್ಲಿ ಹೇಳಿರುತ್ತಾರೆ.||೧೪||

**प्रभूतं कार्यमल्पं वा यन्नरः कर्तुमिच्छति।**
**सर्वारम्भेण तत्कार्यं सिंहादेकं प्रचक्षते॥**

ಯಾವ ಮನುಷ್ಯನು ಸಣ್ಣ ಕೆಲಸವನ್ನೇ ಆಗಲಿ, ದೊಡ್ಡ ಕೆಲಸವನ್ನೇ ಆಗಲಿ ಮೊದಲು ಇಷ್ಟಪಟ್ಟರೆ ಆ ಕೆಲಸವನ್ನು ಸಿಂಹದಂತೆ ಪೂರ್ಣಪ್ರಯತ್ನದಿಂದ ಮಾಡಬೇಕು. ಇದು ಸಿಂಹದಿಂದ ಕಲಿಯಬೇಕಾದ ಒಂದುಗುಣ.

ಸಿಂಹವು ತಾನು ಹಿಡಿಯಬೇಕಾದ ಬೇಟೆಯನ್ನು ಅನುಸರಿಸಿ ಆದಕ್ಕೆ ಬೇಕಾದ ಎಲ್ಲ ಸಿದ್ಧತೆಯನ್ನು ಮಾಡಿಕೊಂಡು ಕಾರ್ಯಪ್ರವೃತ್ತವಾಗುವುದು. ಮನುಷ್ಯ ಕೂಡ ಹಾಗೆಯೇ ಸಣ್ಣ ಕೆಲಸವೆಂದು ಉದಾಸೀನ ಮಾಡದೆ ಪೂರ್ಣಸಿದ್ಧತೆಯಿಂದ ಕೆಲಸ ಮಾಡಿದರೆ

ಸಿದ್ಧಿಯಾಗುವುದು. ||೧೫||

इन्द्रियाणि च संयम्य बकवत् पण्डितो नरः।
देशकालबलं ज्ञात्वा सर्वकार्याणि साधयेत्॥

ಪಂಡಿತನಾದ ಮನುಜನು ಬಕಪಕ್ಷಿಗಳ ಹಾಗೆ ಇಂದ್ರಿಯಗಳನ್ನು ಹಿಡಿತದಲ್ಲಿಟ್ಟುಕೊಂಡು, ದೇಶ, ಕಾಲ ಮತ್ತು ಬಲದ ಪ್ರಮಾಣವನ್ನು ತಿಳಿದು ಕೆಲಸಗಳೆಲ್ಲವನ್ನೂ ಸಾಧಿಸಬೇಕು.

ಬಕಪಕ್ಷಿಗಳು ಮೀನನ್ನು ಹಿಡಿಯುವಾಗ ತಮ್ಮೆಲ್ಲ ಗಮನವನ್ನು ಕೇಂದ್ರಿಕರಿಸಿ ಅಲುಗಾಡದೆ ಸ್ಥಿರವಾಗಿ ನಿಲ್ಲುತ್ತವೆ. ನೀರಿನಲ್ಲಿರುವ ಮೀನಿನ ಚಲನೆಯನ್ನೇ ಅದು ಗಮನಿಸುತ್ತಿರುತ್ತದೆ. ಮೀನು ತನಗೆ ಅನುಕೂಲವಾದ ಕಡೆಗೆ ಬಂದ ಸಮಯವನ್ನು ನೋಡಿ ಒಂದೇ ಸಲ ನೀರಿಗೆ ಹಾರಿ ಅದನ್ನು ಹಿಡಿದುಬಿಡುತ್ತದೆ. ಹಾಗೆಯೇ ಬುದ್ಧಿವಂತನಾದವನು ಇಂದ್ರಿಯಗಳನ್ನು ಕೇಂದ್ರೀಕರಿಸಿ ಶತ್ರುವಿನ ಚಲನವಲನಗಳನ್ನು ಗಮನಿಸುತ್ತಿರಬೇಕು. ಅನುಕೂಲವಾದ ಸನ್ನಿವೇಶ ಮತ್ತು ಸಮಯ ಸಿಕ್ಕಿದ ಕೂಡಲೇ ಶತ್ರುವಿನ ಮೇಲೆ ಬಿದ್ದು ಜಯ ಸಾಧಿಸಬೇಕು. ಎಲ್ಲ ಕೆಲಸಗಳನ್ನು ಸಾಧಿಸುವ ಕಡೆಗಳಲ್ಲೂ ಹೀಗೆ ಪೂರ್ಣಗಮನ ಮತ್ತು ದೇಶಕಾಲಗಳಿಗಾಗಿ ಕಾಯುವಿಕೆ ಅವಶ್ಯ. ||೧೬||

प्रत्युत्थानं च युद्धं च संविभागं च बन्धुषु।
स्वयमाक्रम्य भुक्तं च शिक्षेच्चत्वारि कुक्कुटात्॥

ಸರಿಯಾದ ಸಮಯಕ್ಕೆ ಏಳುವುದು, ಯುದ್ಧದಲ್ಲಿ ಧೈರ್ಯದಿಂದ ಹೋರಾಡುವುದು, ಬಂಧುಗಳೊಂದಿಗೆ ಹಂಚಿಕೊಳ್ಳುವುದು ಮತ್ತು ತಾನೇ ಮೊದಲು ಆಕ್ರಮಿಸಿ ಭೋಗಿಸುವುದು, ಈ ನಾಲ್ಕು ಹುಂಜದಿಂದ ಕಲಿಯಬೇಕಾದ ಗುಣಗಳು.

ಹುಂಜವು ನಿಯಮಬದ್ಧವಾಗಿ ಬೆಳಗಿನ ಜಾವಕ್ಕೆ ತಾನೂ ಎದ್ದು ತನ್ನ ಕೂಗಿನಿಂದ ಉಳಿದವರನ್ನು ಏಳಿಸುತ್ತದೆ. ಯುದ್ಧದಲ್ಲಿ ರಕ್ತ ಸುರಿಯುತ್ತಿದ್ದರೂ ಇನ್ನೊಂದು ಹುಂಜದ ಮೇಲೆ ಏರಿ ಹೋಗುತ್ತದೆಯೋ ಹೊರತು ಹಿಮ್ಮೆಟ್ಟುವುದಿಲ್ಲ. ಹುಂಜದ ಕಾಲಿಗೆ ಕತ್ತಿ ಕಟ್ಟಿ ಹಿಂದೆ ಕಾಳಗ ಮಾಡಿಸುತ್ತಿದ್ದರು. ಗುಂಪಿನಲ್ಲಿರುವ ಎಲ್ಲರ ಜೊತೆ ಹಂಚಿಕೊಂಡು ಆಹಾರ ಸೇವಿಸುತ್ತದೆ. ಕೋಳಿಗಳ ಜೊತೆ ಸಂಭೋಗದಲ್ಲಿ ತಾನೇ ಮೊದಲು ಆಕ್ರಮಿಸುತ್ತದೆ.

ಹುಂಜವು ತನ್ನ ಅಭಿಮಾನ ಮತ್ತು ಧೈರ್ಯಕ್ಕೆ ಹೆಸರುವಾಸಿಯಾಗಿದೆ. ಗುಂಪಿನಲ್ಲಿ ಇರುವ ಎಲ್ಲ ಕೋಳಿಗಳೂ ಅದರ ಹಿಂದೆ ಹೋಗುತ್ತಿರುತ್ತವೆ. ಎಲ್ಲ ಕೋಳಿಗಳಿಗೂ ಆಹಾರವನ್ನು ಹಂಚಿಕೊಡುತ್ತದೆ. ಇನ್ನೊಂದು ಹುಂಜವನ್ನು ಅದು ಸಹಿಸುವುದಿಲ್ಲ;

ಅದರೊಡನೆ ಧೈರ್ಯದಿಂದ ಕಾಡುತ್ತದೆ. ರಾಜನಾದವನೊಬ್ಬನಿಗೆ ಈ ಎಲ್ಲ ಗುಣಗಳು ಇರುವುದು ಆವಶ್ಯಕ. ||೧೭||

गूढमैथुनचरित्वं च काले काले च संग्रहम्।
अप्रमत्तमविश्वासं पञ्च शिक्षेच्च वायसात्॥

ಕಾಗೆಯು ಅವಿತುಕೊಂಡು ಇರುವುದು, ಒಟ್ಟಿಗೆಯೂ ಇರುವುದು, ಆಯಾಕಾಲದಲ್ಲಿ ಸಿಗುವ ಧಾನ್ಯಗಳನ್ನು ಸಂಗ್ರಹಿಸುವುದು, ಬಹಳ ಎಚ್ಚರಿಕೆಯಿಂದ ಇರುವುದು, ಕಾಲಕ್ಕೆ ಸರಿಯಾಗಿ ವ್ಯವಹರಿಸುವುದು, ಯಾರಲ್ಲಿಯೂ ನಂಬಿಕೆಯಿಡುವುದಿಲ್ಲ.

ಕಾರ್ಯಸಾಧಕನೂ ಹಾಗೆಯೇ ಸಮಯವರಿತು ಒಂಟಿಯಾಗಿಯೂ ಅಥವಾ ಒಟ್ಟಾಗಿಯೂ ಇರಬೇಕಾಗಬಹುದು. ಸರಿಯಾದ ಸಮಯದಲ್ಲಿ ಅಗತ್ಯವಸ್ತುಗಳನ್ನು ಸಂಗ್ರಹಿಸಿ ಇಟ್ಟುಕೊಳ್ಳಬೇಕು. ಪ್ರತಿಯೊಂದು ವಿಷಯದಲ್ಲಿಯೂ ಎಚ್ಚರವಾಗಿರಬೇಕು. ಯಾರನ್ನು ಅತಿಯಾಗಿ ನಂಬಬಾರದು. ಈ ಐದು ಗುಣಗಳನ್ನು ಕಾಗೆಯಿಂದ ಕಲಿತುಕೊಳ್ಳಬೇಕು. ||೧೮||

बह्वाशी स्वल्पसन्तुष्टः सुनिद्रो लघुचेतनः।
स्वामिभक्तश्च शूरश्च षडेते श्वानतो गुणाः॥

ನಾಯಿಯು ಆಹಾರ ಸಿಕ್ಕಿದಾಗ ಹೆಚ್ಚಾಗಿಯೇ ತಿನ್ನುತ್ತದೆ. ಸಿಗದೆ ಇದ್ದಾಗ ಸ್ವಲ್ಪದರಲ್ಲಿಯೇ ಸಂತೋಷಪಡುತ್ತದೆ. ಸುಖವಾಗಿ ನಿದ್ರಿಸುತ್ತದೆ. ಆದರೆ ಸ್ವಲ್ಪ ಶಬ್ದಕ್ಕೂ ಎಚ್ಚರವಾಗುತ್ತದೆ. ಸ್ವಾಮಿಭಕ್ತಿ ಮತ್ತು ಶೌರ್ಯ ಅದರ ಉಳಿದ ಎರಡು ಗುಣಗಳು. ಈ ಆರುಗುಣಗಳನ್ನು ನಾಯಿಯಿಂದ ಕಲಿತುಕೊಳ್ಳಬೇಕು.

ನಾಯಿಗೆ ನಿಯಮಿತವಾಗಿಯೇನೂ ಆಹಾರ ಸಿಕ್ಕುವುದಿಲ್ಲ. ಸಿಕ್ಕಿದಾಗ ಅದು ಹೆಚ್ಚಾಗಿಯೇ ತಿನ್ನುತ್ತದೆ. ಸಿಗದೆ ಇದ್ದಾಗ ಸಿಕ್ಕಿದುದರಲ್ಲಿಯೇ ಅದಕ್ಕೆ ತೃಪ್ತಿಯಿದೆ. ಕಾರ್ಯಸಾಧಕನೂ ಅಂತೆಯೇ ಮೃಷ್ಟಾನ್ನ ಸಿಕ್ಕಿದಾಗಲೂ, ಕದನ್ನ ತಿನ್ನಬೇಕಾಗಿ ಬಂದಾಗಲೂ ಅದಕ್ಕೆ ಹೊಂದಿಕೊಂಡು ಸಂತುಷ್ಟನಾಗಿರಬೇಕು. ನಿದ್ರೆಯಲ್ಲಿಯೂ ಚಿಂತೆಯಿಲ್ಲದೆ ಸುಖ ನಿದ್ರೆ ಮಾಡಬೇಕು. ಆದರೆ ಆ ಸಂದರ್ಭದಲ್ಲಿಯೂ ಜಾಗರೂಕನಾಗಿರಬೇಕು. ನಾಯಿ ಸ್ವಲ್ಪ ಶಬ್ದವಾದರೂ ಎದ್ದು ಬಿಡುತ್ತದೆ. ಸ್ವಾಮಿಭಕ್ತಿಗಂತೂ ನಾಯಿ ಬಹಳ ಪ್ರಸಿದ್ಧ. ಸಮಯ ಬಂದಾಗ ತನ್ನ ಒಡೆಯನಿಗಾಗಿ ಜೀವದ ಹಂಗು ತೊರೆದು ಹೋರಾಡುತ್ತದೆ. ಇವು ಆರೂ ನಾಯಿಯಿಂದ ಕಲಿಯಬೇಕಾಗಿರುವ

ಗುಣಗಳು. ॥೧೯॥

सुश्रान्तोऽपि वहेद् भारं शीतोष्णं न च पश्यति।
सन्तुष्टश्चरते नित्यं त्रीणि शिक्षेच्च गर्दभात्॥

ಬಹಳ ಆಯಾಸವಾಗಿದ್ದರೂ ಭಾರವನ್ನು ಹೊರುತ್ತಲೇ ಇರುತ್ತದೆ. ಶೀತ ಮತ್ತು ಉಷ್ಣಗಳನ್ನು ಗಮನಿಸುವುದಿಲ್ಲ. ಸದಾ ಸಂತೋಷದಿಂದ ಇರುತ್ತದೆ. ಈ ಮೂರು ಗುಣಗಳನ್ನು ಕತ್ತೆಯಿಂದ ಕಲಿಯಬೇಕು.

ಕತ್ತೆಯು ಎಷ್ಟು ಬಳಲಿದ್ದರೂ ವಿಶ್ರಾಂತಿಯನ್ನು ಬಯಸದೆ, ತನ್ನ ಭಾರ ಹೊರುವ ಕೆಲಸವನ್ನು ಮಾಡುತ್ತಲೇ ಇರುತ್ತದೆ. ಕಾರ್ಯಸಾಧಕನೂ ಹಾಗೆಯೇ ಕೆಲಸವಾಗುವವರೆಗೆ ವಿಶ್ರಾಂತಿಯನ್ನು ಬಯಸಬಾರದು. ಚಳಿಮಳೆಗಳನ್ನು ಕೂಡ ತಡೆದುಕೊಂಡು ಅದು ಹೋಗುವಂತೆ ಅವನೂ ವಿಷಮ ಪರಿಸ್ಥಿತಿಯಲ್ಲಿಯೂ ತನ್ನ ಪ್ರಯತ್ನವನ್ನು ಬಿಡಬಾರದು. ಇಷ್ಟಾದರೂ ಅವುಗಳನ್ನು ಸಹಿಸುವ ಕಠಿಣ ಪರಿಸ್ಥಿತಿಯಲ್ಲಿಯೂ ಕತ್ತೆಯು ಹೇಗೆ ಶಾಂತವಾಗಿ ಹೋಗುತ್ತಿರುತ್ತದೋ ಹಾಗೆ ಗೊಣಗದೆ ಸಮಾಧಾನ ಮನಸ್ಕನಾಗಿ ಕಾರ್ಯಸಾಧನೆಗೆ ಪ್ರಯತ್ನಿಸಬೇಕು. ಈ ಗುಣಗಳು ಕಾರ್ಯಸಾಧಕನಿಗೆ ಅವಶ್ಯಕವಾಗಿವೆ. ॥೨೦॥

य एतान् विंशतिगुणानाचरिष्यति मानवः।
कार्याऽवस्थासु सर्वासु अजेयः स भविष्यति॥

ಯಾವ ಮಾನವನು ಈ ಮೇಲೆ ಹೇಳಿದ ೨೦ ಗುಣಗಳನ್ನು ತನ್ನ ಆಚರಣೆಯಲ್ಲಿ ತಂದುಕೊಳ್ಳುತ್ತಾನೆಯೋ, ಎಲ್ಲ ಕೆಲಸಗಳಲ್ಲಿ ಅವನ್ನು ಅಳವಡಿಸಿಕೊಳ್ಳುತ್ತಾನೆಯೋ ಅವನು ಯಾರಿಂದಲೂ ಜಯಿಸಲ್ಪಡುವುದಿಲ್ಲ.

ಮನುಷ್ಯನು ಬುದ್ಧಿಜೀವಿ. ಅವನು ಪರಿಸರದ ಎಲ್ಲ ಕಡೆಗಳಿಂದಲೂ ಉತ್ತಮ ಅಂಶಗಳನ್ನು ಸ್ವೀಕರಿಸಬೇಕು. ಪ್ರಾಣಿಗಳಲ್ಲಿಯೂ ಕೂಡ ಅನೇಕ ಅನುಕರಣೀಯ ಗುಣಗಳು ಇರುತ್ತವೆ. ಅವುಗಳನ್ನು ಗಮನಿಸಿ, ಅವುಗಳನ್ನು ನಮ್ಮ ಕೆಲಸಗಳಲ್ಲಿ ಉಪಯೋಗಿಸಿಕೊಂಡರೆ ಜಯವು ನಿಶ್ಚಿತವೆಂದು ಆಚಾರ್ಯರ ಅಭಿಪ್ರಾಯ. ಅಂತಹ ಇಪ್ಪತ್ತು ಗುಣಗಳನ್ನು ಇಲ್ಲಿ ಹೇಳಿದೆ. ॥೨೧॥

## ಅಧ್ಯಾಯದ ಸಾರಾಂಶ

ಶಾಸ್ತ್ರಾಧ್ಯಯನ ಮಾಡುವುದರಿಂದ ಅಥವಾ ಪ್ರವಚನವನ್ನು ಆಲಿಸುವುದರಿಂದ



## ॥ ಅಧ್ಯಾಯ - ೭ ॥

**ವಿದ್ಯೆಯಿಲ್ಲದವನ ಜೀವನವು ನಾಯಿಯ ಬಾಲದಂತೆ ವ್ಯರ್ಥವು. ಅದು ಎತ್ತಿಕೊಂಡಿರುವುದರಿಂದ ಗುಪ್ತಾಂಗಗಳನ್ನು ಮುಚ್ಚುವುದಿಲ್ಲ, ಸುಲಭವಾಗಿ ಚಲಿಸದೆ ಇರುವುದರಿಂದ ಮೈಮೇಲೆ ಕುಳಿತ ಸೊಳ್ಳೆಗಳನ್ನು ಓಡಿಸಲಾರದು.**

अर्थनाशं मनस्तापं गृहे दुश्चरितानि च।
वञ्चनं चाऽपमानं च मतिमान्न प्रकाशयेत्॥

ಹಣವು ಹಾಳಾದುದು, ಮನಸ್ಸಿನ ತಾಪ, ಮನೆಯಲ್ಲಿನ ಕೆಟ್ಟ ಸಂಗತಿಗಳು, ಮೋಸ ಹೋದ ಪ್ರಸಂಗಗಳು ಮತ್ತು ಅವಮಾನಕರವಾದ ವಿಷಯಗಳನ್ನು ಬುದ್ಧಿವಂತನಾದವನು ಪ್ರಕಾಶಪಡಿಸಬಾರದು.

ಯಾವುದಾದರೂ ವಿಷಯವನ್ನು ಬಹಿರಂಗಪಡಿಸುವುದರಿಂದ ಪ್ರಯೋಜನ ವಾಗುವುದಾದರೆ ಅದನ್ನು ನಾಲ್ಕು ಜನರಲ್ಲಿ ಹೇಳಬಹುದು. ಕೆಲವು ವಿಷಯಗಳನ್ನು ಬೇರೆಯವರ ಜೊತೆ ಹೇಳಿದಾರ ನಮ್ಮ ದೋಷಗಳು ಬಯಲಾಗಿ ಜನರಲ್ಲಿ ಅಪಹಾಸ್ಯಕ್ಕೆ ಗುರಿಯಾಗಬಹುದು. ಅಂತಹ ಸಂಗತಿಗಳನ್ನು ಗುಪ್ತವಾಗಿಡುವುದೇ ಒಳ್ಳೆಯದು.

ಯಾವುದಾದರೂ ದುರ್ವ್ಯಸನಗಳಲ್ಲಿ ಹಣವನ್ನು ಕಳೆದುಕೊಂಡರೆ, ತಮ್ಮ ದುಶ್ಚಟ ಬಹಿರಂಗವಾಗುವುದೇ ಹೊರತು ಹಣವೇನೂ ಬರುವುದಿಲ್ಲ. ಕೆಲವು ಸಲ ಬೇರೆಯವರೊಂದಿಗೆ ಮನಸ್ತಾಪವುಂಟಾಗಿರಬಹುದು. ಕಾಲಕ್ರಮೇಣ ತಾನೇ

ಸರಿಯಾಗಬಹುದು. ಅದಕ್ಕೆ ಅವಕಾಶಕೊಡದೆ ಎಲ್ಲರಲ್ಲೂ ತಮ್ಮ ಅಸಮಾಧಾನವನ್ನು ಪ್ರಕಟಿಸುತ್ತ ಹೋದರೆ ಪರಿಸ್ಥಿತಿ ವಿಕೋಪಕ್ಕೆ ಹೋಗುವ ಸಾಧ್ಯತೆಯಿದೆ. 'ಸಂಸಾರ ಗುಟ್ಟು ವ್ಯಾಧಿ ರಟ್ಟು' ಎಂಬ ಗಾದೆ ಮಾತಿನಂತೆ ಸಂಸಾರದ ಆಗುಹೋಗುಗಳನ್ನು ಹೊರಗಿನವರೊಂದಿಗೆ ಚರ್ಚಿಸಿದರೆ ನಗೆಪಾಟಲಾಗಬೇಕಾದೀತು! ನಾಲ್ಕನೆಯದಾಗಿ ನಾವು ಮೋಸಹೋದ ಪ್ರಸಂಗಗಳನ್ನು ಇನ್ನೊಬ್ಬರೊಂದಿಗೆ ಹೇಳಿದರೆ ಅವರಿಗೆ ನಮ್ಮ ಬುದ್ಧಿಗೇಡಿತನದ ಅರಿವಾಗುವುದಲ್ಲದೆ ಮತ್ತೆ ಮೋಸಮಾಡುವ ವ್ಯಕ್ತಿಗಳಿಗೆ ಅವಕಾಶಕೊಟ್ಟಂತೆ ಆಗುವುದು. ಅವಮಾನಕರವಾದ ವಿಷಯಗಳು ಹೊರಗಿನ ಚರ್ಚೆಗೆ ವಿಷಯಗಳೇ ಅಲ್ಲ, ಇವುಗಳೆಲ್ಲಹರಡದಂತೆ ಎಚ್ಚರ ವಹಿಸಬೇಕು. ॥೧॥

धन-धान्यप्रयोगेषु विद्यासंग्रहणेषु च।
आहारे व्यवहारे च त्यक्तलज्जः सुखी भवेत्॥

ಹಣ ಮತ್ತು ಧಾನ್ಯಗಳ ಉಪಯೋಗ, ವಿದ್ಯೆಯನ್ನು ಕಲಿಯುವುದು, ಭೋಜನ ಮತ್ತು ವ್ಯವಹಾರಗಳಲ್ಲಿ ನಾಚಿಕೆಯ ಸ್ವಭಾವವನ್ನು ದೂರ ಮಾಡಿದರೆ ಸುಖಿಯಾಗುವನು.

ಹಣ ಮತ್ತು ಧಾನ್ಯಗಳ ಸಂಗ್ರಹಣೆ ಮತ್ತು ಉಪಯೋಗ ಮುಂದಿನ ದಿನಗಳನ್ನು ಸುಖವಾಗಿ ಕಳೆಯಲು ಅವಶ್ಯಕವಾಗಿರುತ್ತದೆ. ಮನುಷ್ಯನು ಅನುಕೂಲಕರವಾದ ಸನ್ನಿವೇಶವಿದ್ದಾಗ ಸಾಧ್ಯವಾದಷ್ಟೂ ಇವುಗಳನ್ನು ಸಂಗ್ರಹಿಸಬೇಕು. ಯಾರು ಏನನ್ನುವರೋ ಎಂಬ ಭಯ ನಾಚಿಕೆಗಳಿಂದ ಸರಿಯಾದ ಸಮಯದಲ್ಲಿ ಸಂಗ್ರಹಿಸದಿದ್ದರೆ ಕಷ್ಟದ ಸಮಯದಲ್ಲಿ ಹಂಗಿಸಿದವರಾರೂ ಸಹಾಯಕ್ಕೆ ಬರುವುದಿಲ್ಲ. ವಿದ್ಯೆಯನ್ನು ಕಲಿಯುವಾಗಲೂ ಕೂಡ ಯಾವ ವಯಸ್ಸಿನಲ್ಲಿ ಏನು ಬೇಕಾದರೂ ಎಷ್ಟು ಬೇಕಾದರೂ ಕಲಿಯಬಹುದು. ತನಗೆ ಇಷ್ಟವಾದ ವಿದ್ಯೆಯನ್ನು ನಿರ್ಭಯವಾಗಿ ಕಲಿಯಬೇಕು. ಊಟಮಾಡುವಾಗ ಸಂಕೋಚಪಟ್ಟರೆ ಹೊಟ್ಟೆ ತುಂಬುವುದಿಲ್ಲ. ಬೇಕಾದುದನ್ನು ಹಾಕಿಸಿಕೊಂಡು ತೃಪ್ತಿಯಿಂದ ಊಟ ಮಾಡಬೇಕು. ವ್ಯವಹಾರದಲ್ಲಿ ಸಂಕೋಚದಿಂದ ಹೇಳಬೇಕಾದ ನಿಬಂಧನೆಗಳನ್ನು ಹೇಳದಿದ್ದರೆ ಮುಂದೆ ಪೇಚಿಗೆ ಸಿಕ್ಕಿ ಹಾಕಿಕೊಳ್ಳಬೇಕಾಗುತ್ತದೆ. ಈ ನಾಲ್ಕು ಸಂದರ್ಭಗಳಲ್ಲಿ ನಾಚಿಕೆ ಪಡಬಾರದು. ॥೨॥

सन्तोषाऽमृततृप्तानां यत्सुखं शान्तचेतसाम्।
न च तद् धनलुब्धानामितश्चेतश्च धावताम्॥

ಸಂತೋಷವೆಂಬ ಅಮೃತವನ್ನು ಪಾನಮಾಡಿರುವ ಶಾಂತಚಿತ್ತರಿಗೆ ಯಾವ ಸುಖವು ಇರುತ್ತದೆಯೋ ಅಂತಹ ಸುಖವು ಅಲ್ಲಿಂದಿಲ್ಲಿಗೆ ಸುಮ್ಮನೆ ಓಡುತ್ತಾ ಪರದಾಡುತ್ತಿರುವ

ಧನಲೋಭಿಗಳಿಗೆ ಇರುವುದಿಲ್ಲ.

ಸಂತೋಷವೆಂಬುದು ಧನವೇ ಮುಂತಾದ ಬಾಹ್ಯ ವಿಷಯಗಳಿಂದ ಬರತಕ್ಕದ್ದಲ್ಲ. ಬಂದರೂ ಅದು ಕ್ಷಣಿಕವಾದ ಸುಖವು. ಧನದ ಆಸೆಯಿಂದ ಮನುಷ್ಯನು ಎಲ್ಲೆಲ್ಲಿಗೋ ಹೋಗುತ್ತಾನೆ. ಮಾಡಬಾರದ ಕೆಲಸಗಳನ್ನೆಲ್ಲ ಮಾಡುತ್ತಾನೆ. ಅಂತಹ ದುರಾಸೆಯ ಜನರಿಗೆ ಸಂತೋಷವೆಂಬುದೇ ಇರುವುದಿಲ್ಲ. ಶಾಂತಚಿತ್ತರಾದ ಜನರು ತಮಗೆ ದೊರೆತ ಐಶ್ವರ್ಯದಿಂದ ತೃಪ್ತರಾಗಿ ಸಂತುಷ್ಟರಾಗಿರುತ್ತಾರೆ. ॥೩॥

सन्तोषस्त्रिषु कर्तव्यः स्वदारे भोजने धने।
त्रिषु चैव न कर्तव्योऽध्ययने तपदानयोः॥

ತನ್ನ ಹೆಂಡತಿ, ಊಟ ಮತ್ತು ಧನಗಳಲ್ಲಿ ಮನುಷ್ಯನಿಗೆ ಸಂತೋಷವಿರಬೇಕು. ಹಾಗೆಯೇ ಅಧ್ಯಯನ, ತಪಸ್ಸು ಮತ್ತು ದಾನಗಳಲ್ಲಿ ತೃಪ್ತಿಯಿರಬಾರದು.

ಮನುಷ್ಯನು ತನ್ನ ಪತ್ನಿಯಲ್ಲಿ ಸಂತುಷ್ಟನಾಗಿದ್ದರೆ ಅವನು ಪರಸ್ತ್ರೀಯರಲ್ಲಿ ಆಸಕ್ತನಾಗುವುದಿಲ್ಲ. ಊಟದಲ್ಲಿ ತೃಪ್ತಿಯಿದ್ದರೆ ಆರೋಗ್ಯವಾಗಿರುತಾನೆ. ತನಗೆ ಬಂದಷ್ಟು ಹಣದಲ್ಲಿ ಸಂತೋಷವಿದ್ದರೆ ದುರಾಸೆ ಪಡುವುದಿಲ್ಲ. ಆದ್ದರಿಂದ ಈ ಮೂರರಲ್ಲಿ ತನಗೆ ದೊರಕಿದ ವಸ್ತುಗಳಲ್ಲಿ ತೃಪ್ತಿ ಮತ್ತು ಸಂತೋಷವನ್ನು ಹೊಂದಬೇಕು.

ಅಧ್ಯಯನ ಮಾಡುವಾಗ ಎಷ್ಟು ಮಾಡಿದರೂ ಸಾಲದೆಂಬ ಭಾವನೆಯಿದ್ದರೆ ಹೆಚ್ಚು ಓದಿ, ವಿಷಯಗಳನ್ನು ತಿಳಿಯಲು ಸಹಾಯವಾಗುತ್ತವೆ. ಇಷ್ಟೇ ಸಾಕೆಂದು ತೃಪ್ತನಾದರೆ ಜ್ಞಾನಸಂಪಾದನೆ ಕುಂಠಿತಗೊಳ್ಳುವುದು. ಹಾಗೆಯೇ ತಪಸ್ಸು ಮತ್ತು ದಾನಗಳನ್ನು ಎಷ್ಟು ಮಾಡಿದರೂ ತೃಪ್ತಿಹೊಂದದೆ ಹೆಚ್ಚಿಸುತ್ತಾ ಹೋಗಬೇಕು. ॥೪॥

विप्रयोर्विप्रवह्न्योश्च दम्पत्योः स्वामिभृत्ययोः।
अन्तरेण न गन्तव्यं हलस्य वृषभस्य च॥

ಇಬ್ಬರು ಬ್ರಾಹ್ಮಣರ ನಡುವೆ, ಬ್ರಾಹ್ಮಣ ಮತ್ತು ಅವನು ಆರಾಧಿಸುತ್ತಿರುವ ಅಗ್ನಿಯ ಮಧ್ಯೆ, ದಂಪತಿಗಳ ಮಧ್ಯೆ, ಯಜಮಾನ ಮತ್ತು ಸೇವಕರ ನಡುವೆ, ನೇಗಿಲು ಮತ್ತು ಎತ್ತುಗಳ ನಡುವೆ ಹಾದುಹೋಗಬಾರದು.

ಇಬ್ಬರು ಬ್ರಾಹ್ಮಣರು ವೇದವಿಷಯಕವಾದ ಚರ್ಚೆಯನ್ನು ಮಾಡುತ್ತಿರಬಹುದು ಬ್ರಾಹ್ಮಣನು ಅಗ್ನಿಯನ್ನು ತತ್ಪರನಾಗಿ ಉಪಾಸನೆ ಮಾಡುತ್ತಿರುವಾಗ ಮಧ್ಯೆ ಹಾದು ಹೋದರೆ ಗಮನ ಅತ್ತ ಸರಿದು ಪ್ರಕೃತ ಕಾರ್ಯಕ್ಕೆ ಭಂಗವುಂಟಾಗುತ್ತದೆ. ದಂಪತಿಗಳ

ಮಧ್ಯೆ ಹೋಗುವುದೂ ಹಾಗೆಯೇ ಅಸಂಗತವು. ಯಜಮಾನ ಸೇವಕರ ನಡುವೆ ಮೂರನೆಯವರ ಪ್ರವೇಶವು ಸರಿಯಲ್ಲ. ಎತ್ತು ನೇಗಿಲನ್ನು ಎಳೆಯುವಾಗ ನಡುವೆ ಹೋಗುವುದೂ ಅಹಿತಕರ. ಇಂತಹ ವಿಪರೀತ ಫಲಪ್ರದವಾದ ಕಾರ್ಯಗಳನ್ನು ಮಾಡಬಾರದು. ।।೫।।

पादाभ्यां न स्पृशेदग्निं गुरुं ब्राह्मणमेव च।
नैव गां न कुमारीं च न वृद्धं न शिशुं तथा।।

ಅಗ್ನಿ, ಗುರು, ಬ್ರಾಹ್ಮಣ, ಹಸು, ಕುಮಾರಿ, ವೃದ್ಧ ಮತ್ತು ಮಗುವನ್ನು ಕಾಲಿನಿಂದ ಸ್ಪರ್ಶಿಸಬಾರದು.

ಅಗ್ನಿ, ಗುರು, ಬ್ರಾಹ್ಮಣ, ಹಸುಗಳು ಪೂಜ್ಯವಾದುದರಿಂದ ಅವುಗಳನ್ನು ಕಾಲಿನಿಂದ ಸ್ಪರ್ಶಿಸುವುದು ಉಪೇಕ್ಷೆಯ ಸೂಚನೆಯಾಗುತ್ತದೆ. ಅಂತಹ ಅವಹೇಳನೆಯ ಕೆಲಸವನ್ನು ಮಾಡಬಾರದು. ಅವಿವಾಹಿತ ಕನ್ಯೆ, ವೃದ್ಧರು ಮತ್ತು ಮಗುವನ್ನು ಕಾಲಿನಿಂದ ಸ್ಪರ್ಶಿಸುವುದು ಅವರ ಗೌರವಕ್ಕೆ ಅಥವಾ ಪ್ರೀತಿಗೆ ಧಕ್ಕೆ ತರುತ್ತದೆ. ಈ ರೀತಿ ವರ್ತಿಸುವುದು ದುಷ್ಟರ ಲಕ್ಷಣ. ।।೬।।

शकटं पञ्चहस्तेन दशहस्तेन वाजिनम्।
हस्ती शतहस्तेन देशत्यागेन दुर्जनम्।।

ಗಾಡಿಯಿಂದ ಐದು ಮೊಳ, ಕುದುರೆಯಿಂದ ಹತ್ತು ಮೊಳ, ಆನೆಯಿಂದ ನೂರು ಮೊಳ ಮತ್ತು ದುಷ್ಟನಿಂದ ದೇಶಬಿಟ್ಟು ಹೋಗುವಷ್ಟು ದೂರದಲ್ಲಿ ಇರಬೇಕು.

ಎತ್ತಿನ ಗಾಡಿಯು ನಿಧಾನವಾಗಿ ಚಲಿಸುವುದರಿಂದ ಐದು ಮೊಳ ಅಂತರದಲ್ಲಿದ್ದರೂ ಅಪಾಯದಿಂದ ಪಾರಾಗಬಹುದು. ಕುದುರೆಯು ಅಕಸ್ಮಾತ್ ಮೇಲೆ ಹಾಯ್ದು ಬಂದರೆ ತಪ್ಪಿಸಿಕೊಳ್ಳಲು ಹತ್ತು ಮೊಳದಷ್ಟಾದರೂ ದೂರದಲ್ಲಿದ್ದರೆ ಕ್ಷೇಮ. ಆನೆ ಬಹಳ ಬಲಶಾಲಿಯಾದುದರಿಂದ ಅದರಿಂದ ರಕ್ಷಣೆಗೆ ನೂರು ಮೊಳ ಅಂತರವಾದರೂ ಬೇಕು. ದುರ್ಜನನು ಇವರೆಲ್ಲರಿಗಿಂತ ಹೆಚ್ಚು ಕೆಡುಕನ್ನು ಉಂಟುಮಾಡಬಲ್ಲನು. ಅವನಿರುವ ಪ್ರದೇಶವನ್ನೇ ತೊರೆದು ದೂರ ಹೋಗುವುದೇ ಕ್ಷೇಮವು. ।।೭।।

हस्ती अंकुशमात्रेण वाजी हस्तेन ताड्यते।
शृंगी लगुडहस्तेन खड्गहस्तेन दुर्जनः।।

ಆನೆಯನು ಅಂಕುಶದಿಂದ ಹತೋಟಿಗೆ ತರಬಹುದು. ಕುದುರೆಯನ್ನು ಕೈನಿಂದ ತಟ್ಟಿ

ಸರಿಯಾದ ಮಾರ್ಗದಲ್ಲಿ ಓಡಿಸಬಹುದು. ಎತ್ತುಗಳನ್ನು ಕೋಲಿನಿಂದ ಹೆದರಿಸಿ ಅಧೀನದಲ್ಲಿಟ್ಟುಕೊಳ್ಳಬಹುದು. ದುಷ್ಟನಿಗೆ ಮಾತ್ರ ಖಡ್ಗವೇ ಕೈಯಲ್ಲಿಬೇಕು.

ಆನೆ, ಕುದುರೆ, ಕೊಂಬುಗಳುಳ್ಳ ಎತ್ತು ಮುಂತಾದ ಪ್ರಾಣಿಗಳನ್ನು ಸಣ್ಣ ಆಯುಧಗಳಿಂದ ಹೆದರಿಸಿ ಹತೋಟಿಯಲ್ಲಿಟ್ಟುಕೊಳ್ಳಲು ಸಾಧ್ಯ. ಆದರೆ ದುಷ್ಟನಾದವನನ್ನು ನಂಬಲು ಸಾಧ್ಯವೇ ಇಲ್ಲ. ಅವನಿಗೆ ಖಡ್ಗಪ್ರಹಾರವೇ ಸೂಕ್ತವು. ॥೮॥

तुष्यन्ति भोजने विप्रा मयूरा घनगर्जिते।
साधवः परसम्पत्तौ खलः परविपत्तिषु॥

ಬ್ರಾಹ್ಮಣರು ಊಟದಿಂದ ತೃಪ್ತರಾಗುವರು. ನವಿಲುಗಳು ಗುಡುಗಿನ ಶಬ್ದದಿಂದ ಸಂತಸಪಡುವುವು. ಸಾಧುಗಳು ಅನ್ಯರು ಸುಖಸಂಪತ್ತನ್ನು ನೋಡಿ ಸುಖಿಸುವರು. ದುಷ್ಟನು ಇನ್ನೊಬ್ಬರ ಕಷ್ಟವನ್ನು ನೋಡಿ ಸಂತೋಷಪಡುತ್ತಾನೆ.

'ಬ್ರಾಹ್ಮಣಾಃ ಭೋಜನ ಪ್ರಿಯಾಃ' ಎಂಬ ಗಾದೆ ಮಾತಿದೆ. ಅವರಿಗೆ ಒಳ್ಳೆಯ ಊಟ ಸಿಕ್ಕಿಬಿಟ್ಟರೆ ಅಷ್ಟರಿಂದಲೇ ತೃಪ್ತರು. ನವಿಲುಗಳು ಗುಡುಗಿನ ಶಬ್ದ ಕೇಳಿದ ಕೂಡಲೇ ಸಂತೋಷದಿಂದ ನರ್ತಿಸುತ್ತವೆ. ಸತ್ಪುರುಷರು ಬೇರೆಯವರ ಸಂತೋಷದಲ್ಲಿ ತಮ್ಮ ಸುಖವನ್ನು ಕಂಡರೆ ದುರ್ಜನರು ಇನ್ನೊಬ್ಬರಿಗೆ ದುಃಖವುಂಟಾಗುವುದರಲ್ಲಿ ಸಂತೋಷವನ್ನು ಕಾಣುತ್ತಾನೆ. ॥೯॥

अनुलोमेन बलिनं प्रतिलोमेन दुर्जनम्।
आत्मतुल्यबलं शत्रुं विनयेन बलेन वा॥

ಬಲಶಾಲಿಯಾದವನನ್ನು ನೀತಿಗೆ ಅನುಸಾರವಾಗಿ ವಿಧಾನದಿಂದ, ದುಷ್ಟನಾದವನನ್ನು ನೀತಿಗೆ ವಿರುದ್ಧವಾದ ವಿಧಾನದಿಂದಲೂ ಎದುರಿಸಬೇಕು. ತನಗೆ ಸಮಾನನಾದ ಶತ್ರುವನ್ನು ವಿನಯದಿಂದ ಅಥವಾ ಬಲದಿಂದ ಮಣಿಸಬಹುದು.

ಶತ್ರುಗಳನ್ನು ಎದುರಿಸುವಾಗ ಮೊದಲು ಅವನು ಎಂತಹವನೆಂಬುದನ್ನು ಖಚಿತಪಡಿಸಿಕೊಳ್ಳಬೇಕು. ಅವನು ಬಲಶಾಲಿಯಾಗಿದ್ದರೆ ನೀತಿಯುಕ್ತವಾದ ಅಂದರೆ ರಾಜನೀತಿಯಲ್ಲಿ ತಿಳಿಸಿರುವ ವಿಧಾನಗಳ ಮೂಲಕ ಅವನ ವಿಶ್ವಾಸವನ್ನು ಸಂಪಾದಿಸಬೇಕು. ಶತ್ರುವೇನಾದರೂ ದುಷ್ಟನಾದರೆ, ಅವನಲ್ಲಿ ನೀತಿಯ ವ್ಯವಹಾರವು ಪ್ರಯೋಜನಕ್ಕೆ ಬರುವುದಿಲ್ಲ, ಆಗ ನೀತಿಬಾಹಿರವಾದ ವಿಧಾನಗಳನ್ನೂ ಬಳಸಿ ಅವನನ್ನು ಸೋಲಿಸಬೇಕಾಗಬಹುದು. ಶತ್ರುವು ತನಗೆ ಸಮಬಲವಾದರೆ ಪರಿಸ್ಥಿತಿಗೆ ಅನುಸಾರವಾಗಿ ವಿನಯದಿಂದಲೋ, ಬಲದಿಂದಲೋ ಜಯಿಸಬಹುದು. ॥೧೦॥

बाहुवीर्यं बलं राज्ञो ब्राह्मणो ब्रह्मविद् बली।
रूपयौवनमाधुर्यं स्त्रीणां बलमुत्तमम्॥

ರಾಜರಿಗೆ ತಮ್ಮ ಬಾಹುಬಲವೇ ಪ್ರಮುಖವಾದುದು. ಬ್ರಾಹ್ಮಣರಲ್ಲಿ ಬ್ರಹ್ಮಜ್ಞಾನಿಯು ಶ್ರೇಷ್ಠನಾದವನು. ಸ್ತ್ರೀಯರಿಗೆ ರೂಪ, ಯೌವನ ಮತ್ತು ಮಧುರವಾದ ಸ್ವಭಾವವುಬಲವನ್ನು ಕೊಡುತ್ತದೆ.

ರಾಜರು ಶಕ್ತಿಶಾಲಿಗಳಾಗಿದ್ದರೆ ಶತ್ರುಗಳನ್ನು ಜಯಿಸಿ ಉನ್ನತಿಗೆ ಬರಬಲ್ಲರು. ಬ್ರಾಹ್ಮಣರಲ್ಲಿ ವಿದ್ಯೆಗೆ ಗೌರವವು. ಬ್ರಹ್ಮಜ್ಞಾನಿಯನ್ನು ಎಲ್ಲರೂ ಶ್ರೇಷ್ಠನೆಂದು ಒಪ್ಪಿಕೊಳ್ಳುತ್ತಾರೆ. ಸ್ತ್ರೀಯರು ತಮ್ಮ ರೂಪು ಯೌವನಾದಿಗಳಿಂದಲೇ ಎಲ್ಲರನ್ನೂ ಆಕರ್ಷಿಸಬಲ್ಲರು. ॥೧೧॥

नाऽत्यन्तं सरलैर्भाव्यं गत्वा पश्य वनस्थलीम्।
छिद्यन्ते सरलास्तत्र कुब्जास्तिष्ठन्ति पादपाः॥

ಅತ್ಯಂತ ಸರಳತನವು ಒಳ್ಳೆಯದಲ್ಲ. ಗಿಡಗಳನ್ನು ಹೋಗಿ ನೋಡು. ಸರಳವಾದ ವೃಕ್ಷಗಳು ಕತ್ತರಿಸಲ್ಪಡುತ್ತವೆ. ಕುಳ್ಳಾಗಿ ಅಂದವಾಗಿಲ್ಲದ ವೃಕ್ಷಗಳು ಉಳಿದುಕೊಳ್ಳುತ್ತವೆ.

ತುಂಬ ಸರಳವಾದ ವ್ಯಕ್ತಿಯನ್ನು ಉಳಿದವರು ಸುಲಭವಾಗಿ ಮೋಸಗೊಳಿಸುತ್ತಾರೆ. ಅವನ ಸರಳ ಸ್ವಭಾವವನ್ನು ಒಳ್ಳೆಯ ಗುಣವನ್ನಾಗಿ ಭಾವಿಸುವುದಿಲ್ಲ. ಇದಕ್ಕೆ ಆಚಾರ್ಯರು ಕಾಡಿನಲ್ಲಿರುವ ವೃಕ್ಷಗಳನ್ನು ಉದಾಹರಣೆಯಾಗಿ ಕೊಟ್ಟಿರುತ್ತಾರೆ. ಸರಳವಾಗಿ ನೇರವಾಗಿ ಬೆಳೆದು ನಿಂತಿರುವ ಮರಗಳನ್ನು ಕಡಿದುಕೊಂಡು ಹೋಗುತ್ತಾರೆ. ಆದೇ ಕುಳ್ಳಾಗಿ, ವಕ್ರವಾಗಿ ಇರುವ ಮರಗಳನ್ನು ಯಾರೂ ಕಡಿಯಹೋಗುವುದಿಲ್ಲ. ಸರಳ ಸ್ವಭಾವದವರಿಗೇ ತೊಂದರೆ ಹೆಚ್ಚು. ॥೧೨॥

यत्रोदकं तत्र वसन्ति हंसाः तथैव शुष्कं परिवर्जयन्ति।
न हंसतुल्येन नरेण भाव्यं पुनस्त्यजन्ते पुनराश्रयन्ते॥

ಹಂಸಗಳು ನೀರು ಇರುವ ಜಾಗವನ್ನು ಆಶ್ರಯಿಸುತ್ತವೆ. ಹಾಗೆಯೇ ಒಣಗಿ ಹೋದ ನೀರಿನ ಆಸರೆಗಳನ್ನು ತ್ಯಜಿಸಿಬಿಡುತ್ತವೆ. ಆದರೆ ಮನುಷ್ಯರು ಹಂಸಗಳ ಹಾಗಲ್ಲ. ಅವರು ಕೆಲವರನ್ನು ತ್ಯಜಿಸುತ್ತಾರೆ. ಮತ್ತೆ ಅವರನ್ನೇ ಆಶ್ರಯಿಸುತ್ತಾರೆ.

ಹಂಸಗಳು ಸರಳವಾದ ಸ್ವಭಾವದ ಪಕ್ಷಿಗಳು. ಅವು ತಮಗೆ ಅನುಕೂಲವಾದ ನೀರಿನ ಆಶ್ರಯದಲ್ಲಿ ಸುಖವಾಗಿರುವುವು. ಹಾಗೆಯೇ ನೀರು ಬತ್ತಿದರೆ, ಬೇರೆ ಆಶ್ರಯವನ್ನು ಹುಡುಕುವುವು. ಮನುಷ್ಯರಾದರೋ ದುಷ್ಟರೆಂದು ಕೆಲವರನ್ನು ಒಮ್ಮೆ ತ್ಯಜಿಸಿದರೆ, ಮತ್ತೆ

ಅವರನ್ನ ಹುಡುಕಿಕೊಂಡು ಹೋಗುವುದು ಉಂಟು. ತಮ್ಮ ಸ್ವಾರ್ಥಕ್ಕೆ ತಕ್ಕ ಹಾಗೆ ವ್ಯವಹಾರ ನಡೆಸುವರು. ॥೧೩॥

उपार्जितानां वित्तानां त्याग एव हि रक्षणम्।
तडागोदरसंस्थानां परीवाह इवाऽम्भसाम्॥

ಗಳಿಸಿದ ಸಂಪತ್ತಿಗೆ ದಾನವೇ ರಕ್ಷಣೆಯು. ಕೆರೆಯಲ್ಲಿರುವ ನೀರು ಸುರಕ್ಷಿತವಾಗಿ ಇರಬೇಕಾದರೆ ಕೋಡಿಯ ವ್ಯವಸ್ಥೆಯಿರುವಂತೆ ಇದು.

ಗಳಿಸಿದ ಐಶ್ವರ್ಯವು ಸದ್ವಿನಿಯೋಗವಾಗಿ ಉಪಯುಕ್ತವೆನಿಸಬೇಕಾದರೆ ಅದನ್ನು ದಾನ ಮಾಡಬೇಕು. ದಾನ ಮತ್ತು ಭೋಗಕ್ಕೆ ಬಾರದ ಹಣವು ನಾಶ ಹೊಂದುತ್ತದೆ. ಅದಕ್ಕೆ ಆಚಾರ್ಯರು ಕೊಳದಲ್ಲಿರುವ ನೀರಿನ ಉದಾಹರಣೆಯನ್ನು ಕೊಡುತ್ತಾರೆ. ಮಳೆಬಂದು ಕೆರೆಯಲ್ಲಿ ಅಧಿಕ ನೀರು ಶೇಖರವಾದರೆ, ಹೆಚ್ಚಾದ ನೀರು ತೂಬಿನ ಮೂಲಕ ಹೊರಬಂದು ಕೋಡಿ ಬೀಳಬೇಕು. ಆಗ ಒಳಗೆ ಇರುವ ನೀರು ಸುರಕ್ಷಿತವಾಗುತ್ತದೆ. ಇಲ್ಲದಿದ್ದರೆ ದಡದ ಮೇಲೆ ಒತ್ತಡ ಬಿದ್ದು ಕೆರೆ ಒಡೆದು ಹೋಗಬಹುದು. ಸಂಪತ್ತು ಕೂಡ ಹಾಗೆಯೇ ನಾಶವಾಗಬಹುದು. ॥೧೪॥

यस्याऽर्थास्तस्य मित्राणि यस्याऽर्थास्तस्य बान्धवाः।
यस्याऽर्थाः स पुमांल्लोके यस्याऽर्थाः स च जीवति॥

ಯಾರ ಬಳಿಯಲ್ಲಿ ಹಣವು ಇರುತ್ತದೆಯೋ ಅವನಿಗೆ ಗೆಳೆಯರು ಆಗುತ್ತಾರೆ. ಅವನನ್ನು ಬಂಧುಗಳು ಪ್ರೀತಿಸುತ್ತಾರೆ. ಜಗತ್ತಿನಲ್ಲಿ ಹಣವಿರುವವನೇ ನರನು. ಯಾರ ಬಳಿಯಲ್ಲಿ ಹಣವು ಇರುತ್ತದೆಯೋ ಅವನು ಮಾತ್ರ ಬದುಕಿರುವವನು.

ಹಣದ ಮಹಿಮೆಯನ್ನು ಆಚಾರ್ಯರು ಈ ಶ್ಲೋಕದಲ್ಲಿ ವಿವರಿಸಿರುತ್ತಾರೆ. ಹಣವಂತನನ್ನು ಬಹಳ ಜನರು ಆಶ್ರಯಿಸುತ್ತಾರೆ. ಅವರಿಗೆ ಹಣವಂತನಿಂದ ಸಹಾಯ ದೊರೆಯಬಹುದೆಂದು ಅವರು ಭಾವಿಸುತ್ತಾರೆ. ಬಂಧುಗಳೂ ಕೂಡ ಹೀಗೆಯೇ ವರ್ತಿಸುತ್ತಾರೆ. ಧನಹೀನನನ್ನು ಯಾರೂ ಆಶ್ರಯಿಸುವುದೂ ಇಲ್ಲ, ಗೌರವಿಸುವುದೂ ಇಲ್ಲ, ಧನವಂತನೇ ಈ ಪ್ರಪಂಚಕ್ಕೆ ಬೇಕಾದವನು. ಧನಹೀನನು ಬದುಕಿದ್ದರೂ ಸತ್ತಂತೆ. 'ಸರ್ವೇ ಜನಾಃ ಕಾಂಚನ ಮಾಶ್ರಯಂತಿ' ಎಂದು ಭರ್ತೃಹರಿಯು ಹೇಳಿರುವುದಾಗಿ ಇದೇ ಅರ್ಥವನ್ನು ಕೊಡುತ್ತದೆ. ॥೧೫॥

स्वर्गस्थितानामिह जीवलोके चत्वारि चिह्नानि वसन्ति देहे।

दानप्रसंगो मधुरा च वाणी देवाऽर्चनं ब्राह्मणतर्पणं च॥

ಸ್ವರ್ಗದಲ್ಲಿರುವ ದೇವತೆಗಳಲ್ಲಿ ನಾಲ್ಕು ವಿಶೇಷ ಚಿಹ್ನೆಗಳು ಇರುವಂತೆ ಈ ಲೋಕದಲ್ಲಿಯೂ ದೇವತೆಗಳಿಗೆ ಸಮಾನರಾದ ಪುರುಷರಲ್ಲಿ ನಾಲ್ಕು ಚಿಹ್ನೆಗಳು ಇರುತ್ತವೆ. ಅವುಗಳೆಂದರೆ ದಾನಬುದ್ಧಿ, ಮಧುರವಾದ ಮಾತುಗಳು, ದೇವತಾರ್ಚನೆ ಮತ್ತು ಬ್ರಾಹ್ಮಣರನ್ನು ತೃಪ್ತಿಪಡಿಸುವುದು.

ಸ್ವರ್ಗದಲ್ಲಿರುವ ದೇವತೆಗಳಲ್ಲಿ ಮನುಷ್ಯರಿಗಿಂತ ಭಿನ್ನವಾದ ನಾಲ್ಕು ಲಕ್ಷಣಗಳು ಇರುತ್ತವೆ. ಅವೆಂದರೆ (೧) ಅವರ ಕಾಲುಗಳು ನೆಲಕ್ಕೆ ತಗಲುವುದಿಲ್ಲ (೨) ಧರಿಸಿದ ಹೂಮಾಲೆ ಬಾಡುವುದಿಲ್ಲ (೩) ಕಣ್ಣ ರೆಪ್ಪೆಗಳನ್ನು ಮಿಟುಕಿಸುವುದಿಲ್ಲ (೪) ಮೈ ಬೆವರುವುದಿಲ್ಲ. ಈ ಗುರುತುಗಳಿಂದಲೇ ದಮಯಂತಿ ದೇವತೆಗಳಿಂದ ಬೇರೆಯಾಗಿ ನಳನನ್ನು ಗುರ್ತಿಸಿದಳು. ಭೂಮಿಯಲ್ಲಿಯೂ ಕೆಲವು ಜನರು ದೇವತೆಗಳಿಗೆ ಸಮಾನರಾಗಿರುತ್ತಾರೆ. ಅವರಲ್ಲಿಯೂ ನಾಲ್ಕು ಪ್ರತ್ಯೇಕ ಲಕ್ಷಣಗಳಿರುತ್ತವೆ. ಅವುಗಳೆಂದರೆ (೧) ದಾನ ಮಾಡುವ ಸ್ವಭಾವ :- ಯಾರು ಕೇಳಿದರೂ ಇಲ್ಲವೆನ್ನದೆ ಅವರು ದಾನ ಮಾಡುತ್ತಾರೆ. (೨) ಎಲ್ಲರೊಡನೆಯೂ ಮಧುರವಾಗಿ ಮಾತನಾಡುತ್ತಾರೆ. (೩) ಪ್ರತಿದಿನವೂ ದೇವತೆಗಳನ್ನು ಪೂಜಿಸುತ್ತಾರೆ. (೪) ಬ್ರಾಹ್ಮಣರನ್ನೂ ಭಕ್ತಿಯಿಂದ ಗೌರವಿಸಿ ಅವರನ್ನು ತೃಪ್ತಿಗೊಳಿಸುತ್ತಾರೆ. ॥೧೬॥

अत्यन्तकोप: कटुका च वाणी दरिद्रता च स्वजनेषु वैरम्।
नीचप्रसंग: कुलहीनसेवा चिह्नानि देहे नरकस्थितानाम्॥

ನರಕದಲ್ಲಿದ್ದು ಭೂಮಿಗೆ ಬಂದ ಜೀವಗಳಲ್ಲಿಯೂ ಕೆಲವು ವಿಶೇಷ ಚಿಹ್ನೆಗಳಿರುತ್ತವೆಂದು ಆಚಾರ್ಯರು ಹೇಳುತ್ತಾರೆ. ಅವರು ಅತ್ಯಂತ ಕೋಪಿಷ್ಠರಾಗಿರುತ್ತಾರೆ. ಅವರ ಮಾತುಗಳು ಕಠೋರವಾಗಿರುತ್ತವೆ, ಬಡತನದಲ್ಲಿಯೇ ಸದಾ ಇರುತ್ತಾರೆ. ತನ್ನ ಬಂಧುಗಳಲ್ಲಿಯೋ ವೈರವನ್ನು ಸಾಧಿಸುತ್ತಾರೆ. ನೀಚರ ಸಂಬಂಧವನ್ನೇ ಮಾಡುತ್ತಾರೆ ಮತ್ತು ಹೀನಕುಲದವರ ಸೇವೆ ಮಾಡುತ್ತಾರೆ.

ಜೀವವು ಅದರ ಹಿಂದಿನ ಕರ್ಮಗಳಿಗೆ ತಕ್ಕಂತೆ ಸ್ವರ್ಗ ಅಥವಾ ನರಕ ವಾಸವನ್ನು ಅನುಭವಿಸಿ ಭೂಮಿಗೆ ಹಿಂದಿರುಗುವುದು. ಇಲ್ಲಿಗೆ ಬರುವಾಗಲೂ ಅದರ ಕರ್ಮಶೇಷವನ್ನು ಇಟ್ಟುಕೊಂಡೇ ಬರುತ್ತದೆ. ಅದಕ್ಕೆ ತಕ್ಕಂತೆ ಆಯಾ ಮನುಷ್ಯರ ಸ್ವಭಾವಗಳೂ ಇರುತ್ತವೆ. ಅವರವರ ಸ್ವಭಾವವೇ ಅವರ ಹಿಂದಿನ ಜನ್ಮಗಳ ಕರ್ಮಗಳನ್ನು ಸೂಚಿಸುತ್ತದೆ.॥೧೭॥

गम्यते यदि मृगेन्द्र-मन्दिरं लभ्यते करिकपोलमौक्तिकम्।
जम्बुकाऽऽलयगते च प्राप्यते वत्स-पुच्छ-खर-चर्म-खण्डनम्॥

ಸಿಂಹದ ಗುಹೆಗೇನಾದರೂ ಹೋದರೆ ಆನೆಯ ಮಸ್ತಕದ ಮುತ್ತುಗಳು ದೊರೆಯಬಹುದು. ನರಿಯ ಮನೆಗೇನಾದರೂ ಹೋದರೆ ಕರುವಿನ ಬಾಲ, ಕತ್ತೆಯ ಚರ್ಮದ ಚೂರುಗಳು ಸಿಗುತ್ತವೆ.

ಈ ಶ್ಲೋಕದಲ್ಲಿ ಆಚಾರ್ಯರು ಅವರವರ ಸ್ವಭಾವಕ್ಕೆ ಅನುಗುಣವಾಗಿ ವ್ಯಕ್ತಿಗಳ ಕೆಲಸಗಳನ್ನು ಕೈಗೊಳ್ಳುವರೆಂಬ ಅಂಶವನ್ನು ಸ್ಪಷ್ಟಪಡಿಸುತ್ತಾರೆ. ಸಿಂಹವು ತನ್ನ ಯೋಗ್ಯತೆಗೆ ಅನುಸಾರವಾಗಿ ಆನೆಗಳನ್ನು ಬೇಟೆಯಾಡುತ್ತವೆ. ಆದ್ದರಿಂದ ಅದರ ಗುಹೆಯಲ್ಲಿ ಆನೆಯ ಮಸ್ತಕದ ಮುತ್ತುಗಳು ತುಂಬಿರುತ್ತವೆ. ಅಂತಹ ವ್ಯಕ್ತಿಗಳ ಸಂಬಂಧವನ್ನು ಬೆಳೆಸುವುದರಿಂದ ನಮ್ಮ ಗೌರವವೂ ಅಧಿಕವಾಗುತ್ತದೆ. ಅವರಿಂದ ಉತ್ತಮವಾದ ವಸ್ತುಗಳನ್ನು ಪಡೆಯಬಹುದು. ನರಿಯಂತಹ ನೀಚಪ್ರಾಣಿ ತನ್ನ ಯೋಗ್ಯತೆಗೆ ತಕ್ಕಂತೆ ಕರು, ಕತ್ತೆ ಮುಂತಾದವುಗಳನ್ನು ಬೇಟೆಯಾಡುತ್ತವೆ. ಅದರ ಬಳಿ ಈ ಪ್ರಾಣಿಗಳ ದೇಹದ ತುಂಡುಗಳನ್ನು ಬಿಟ್ಟು ಇನ್ನೇನೂ ಇರುವುದಿಲ್ಲ. ಅಂತಹ ಸ್ವಭಾವದ ನೀಚರೂ ಕೂಡ ನೀಚವಾದ ವಸ್ತುಗಳನ್ನೇ ಹೊಂದಿರುತ್ತಾರೆ. ಅವರ ಮನೆಗಳಿಗೆ ಹೋದರೆ ಉತ್ತಮ ವ್ಯವಹಾರವನ್ನಾಗಲೀ, ಉತ್ತಮವಾದ ವಸ್ತುಗಳನ್ನಾಗಲೀ ಅಪೇಕ್ಷಿಸುವುದು ವ್ಯರ್ಥ.॥೧೮॥

शुनः पुच्छमिव व्यर्थं जीवितं विद्यया विना।
न गुह्यगोपने शक्तं न च दंशनिवारणे॥

ವಿದ್ಯೆಯಿಲ್ಲದವನ ಜೀವನವು ನಾಯಿಯ ಬಾಲದಂತೆ ವ್ಯರ್ಥವಾದುದು. ನಾಯಿಯ ಬಾಲವು ಎತ್ತಿಕೊಂಡಿರುವುದರಿಂದ ಗುಪ್ತಾಂಗಗಳನ್ನು ಮುಚ್ಚಲು ಉಪಯುಕ್ತವಾಗುವುದಿಲ್ಲ. ಉಳಿದ ಪ್ರಾಣಿಗಳ ಬಾಲದಂತೆ ಸುಲಭವಾಗಿ ಚಲಿಸಲಾರದುದಾದುದರಿಂದ ಮೈಮೇಲೆ ಕುಳಿತ ಸೊಳ್ಳೆಗಳನ್ನು ಕೂಡ ಓಡಿಸಲಾರದು. ಉಳಿದ ಪ್ರಾಣಿಗಳ ಬಾಲಗಳು ಈ ಎರಡೂ ಕ್ರಿಯೆಯಲ್ಲಿ ಸಹಕಾರಿಯಾಗುತ್ತವೆ.

ವಿದ್ಯೆಯಿಲ್ಲದ ಮನುಷ್ಯನೂ ಕೂಡ ಯಾವ ರೀತಿಯಿಂದಲೂ ಮನೆಯವರಿಗಾಗಲೀ, ಹೊರಗಿನವರಿಗಾಗಲೀ ಪ್ರಯೋಜಕನಾಗಲಾರನು. ॥೧೯॥

वाचः शौचं च मनसः शौचमिन्द्रियनिग्रहः।
सर्वभूते दया शौचं एतच्छौत्रं पराऽर्थिनाम्॥

ಮಾತು ಮತ್ತು ಮನಸ್ಸಿನ ಶುಚಿತ್ವವು ಪರೋಪಕಾರಿಗಳ ಲಕ್ಷಣವು. ಹಾಗೆಯೇ

ಇಂದ್ರಿಯಗಳ ನಿಗ್ರಹವು ಕೂಡ ಶೌಚವು. ಎಲ್ಲ ಪ್ರಾಣಿಗಳಲ್ಲಿಯೂ ದಯಾಭಾವವನ್ನು ಇಡುವುದು ಇವೆಲ್ಲವೂ ಪರೋಪಕಾರಿಗಳ ಶುದ್ಧತೆಯ ರೂಪವು.

ಬಾಹ್ಯಶುದ್ಧಿಗಿಂತ ಆಂತರಿಕ ಶುದ್ಧಿಗೆ ಇರುವ ಪ್ರಾಮುಖ್ಯವನ್ನು ಇಲ್ಲಿ ಆಚಾರ್ಯರು ವಿಸ್ತರಿಸಿದ್ದಾರೆ. ಪರಹಿತವನ್ನು ಬಯಸುವವನು ಹಿತವಾದ ಮಾತುಗಳನ್ನು ಆಡಬೇಕು. ಮನಸ್ಸು ಶುದ್ಧವಾಗಿರಬೇಕು ಇಂದ್ರಿಯಗಳನ್ನು ಹಿಡಿತದಲ್ಲಿ ಇಟ್ಟುಕೊಂಡಿರಬೇಕು. ಎಲ್ಲ ಪ್ರಾಣಿಗಳನ್ನು ದಯೆಯಿಂದ ಕಾಣಬೇಕು. ಇದೇ ನಿಜವಾದ ಶೌಚ. ಬಾಹ್ಯದಲ್ಲಿ ಮೈಯನ್ನು ತೊಳೆಯುವುದು ಕೇವಲ ತೋರಿಕೆಯ ಶೌಚವು.॥೨೦॥

पुष्पे गन्धं तिले तैलं काष्ठेऽग्निं पयसि घृतम्।
इक्षौ गुडं तथा देहे पश्याऽऽत्मानं विवेकत:॥

ಹೂವಿನಲ್ಲಿ ಸುವಾಸನೆಯು ಇರುವ ಹಾಗೆ, ಎಳ್ಳಿನಲ್ಲಿ ಎಣ್ಣೆಯು ವ್ಯಾಪಿಸಿರುವ ಹಾಗೆ, ಸೌದೆಯಲ್ಲಿ ಅಗ್ನಿಯು ಗುಪ್ತವಾಗಿರುವ ಹಾಗೆ, ಹಾಲಿನಲ್ಲಿ ಬೆಣ್ಣೆಯು ಇರುವ ಹಾಗೆ, ಕಬ್ಬಿನಲ್ಲಿ ಬೆಲ್ಲವು ಸೇರಿರುವ ಹಾಗೇ ವಿವೇಕದಿಂದ ಆತ್ಮನನ್ನು ಕಂಡುಕೊಳ್ಳಬೇಕು.

ಹೂವಿನಲ್ಲಿರುವ ಸುವಾಸನೆಯು ಹೂವಿನ ಎಲ್ಲ ಭಾಗಗಳಲ್ಲಿಯೂ ವ್ಯಾಪಕವಾಗಿರುತ್ತದೆ. ಹಾಗೆಯೇ ಉಳಿದ ವಸ್ತುಗಳಲ್ಲಿಯೂ ಗುಣವನ್ನು ಗುಣಿಯಿಂದ ಬೇರ್ಪಡಿಸಿದರೆ ಅದರ ಸಾರವೇ ಹೋಗುತ್ತದೆ. ಈ ರೀತಿ ದೇಹದ ಒಳಗೆ ದೇಹಕ್ಕೆ ಚೈತನ್ಯರೂಪನಾದ ಆತ್ಮನನ್ನು ವಿವೇಕದಿಂದ ಅರಿಯಬೇಕು. ॥೨೧॥

## ಅಧ್ಯಾಯದ ಸಾರಾಂಶ

ಜಗತ್ತಿನಲ್ಲಿ ಮನುಷ್ಯರು ಹಲವು ಕಾರಣಗಳಿಂದ ಧನ ಹಾನಿಯನ್ನು ಎದುರಿಸುವರು. ಹಲವಾರು ಕಾರಣಗಳಿಂದ ದುಃಖಿತರಾಗುವರು. ಅನೇಕ ನ್ಯೂನತೆಗಳು ಉದ್ಭವಿಸುವುವು ಹಾಗೂ ಧೂರ್ತದಿಂದ ಮೋಸವಾಗುವ ಪರಿಸ್ಥಿತಿ ಉಂಟಾಗುವುದು. ಅಂಥ ಸನ್ನಿವೇಶದಲ್ಲಿ ಧನಹಾನಿ ಬಗ್ಗೆ ಉಂಟಾದ ವಿಕಟ ಪರಿಸ್ಥಿತಿಯ ಬಗ್ಗೆ ವಿವರಿಸುವುದರಿಂದ ಜನರು ವ್ಯಕ್ತಿಯನ್ನು ಪರಿಹಾಸ್ಯಕ್ಕೆ ಒಳಪಡಿಸುವರು. ಕಳೆದುಕೊಂಡ ಹಣ ವಾಪಸಾಗುವುದಿಲ್ಲ.

ಹಣ ಕೊಡುವುದು, ಮರಳಿ ವಾಪಸು ಪಡೆಯುವ ವಿಷಯದಲ್ಲಿ ಸಂಕೋಚ ವ್ಯಕ್ತ ಪಡಿಸಿದರೆ ಸ್ವಯಂ ವ್ಯಕ್ತಿ ನಷ್ಟದ ಪರಿಸ್ಥಿತಿ ಎದುರಿಸ ಬೇಕಾಗುವುದು. ಅಂತೆಯೇ ವಿದ್ಯಾರ್ಜನೆ ಅಥವಾ ನಡತೆಗಳನ್ನು ಕಲಿಯುವ ಸಮಯ ಮನುಷ್ಯನಿಗೆ ಸಂಕೋಚ



## ॥ ಅಧ್ಯಾಯ ೮ ॥

**ಪೃಥ್ವಿಯ ಅಂತರಾಳದಲ್ಲಿ ಚಿಮ್ಮುವ ನೀರು ಶುದ್ಧ ಜಲವೆನಿಸಲ್ಪಡುತ್ತದೆ. ಪತಿವ್ರತೆಯಾದ ನಾರಿ ಪವಿತ್ರಳು. ಲೋಕ ಕಲ್ಯಾಣಕ್ಕೆ ಶ್ರಮಿಸುವ ರಾಜನು ಪವಿತ್ರನು ಹಾಗೂ ಸಂತೋಷದಿಂದಿರುವ ಬ್ರಾಹ್ಮಣ ಪವಿತ್ರನು.**

अधमा: धनमिच्छन्ति धनं मानं च मध्यमा:।
उत्तमा: मानमिच्छन्ति मानो हि महतां धनम्॥

ಅಧಮರಾದವರು ಧನವನ್ನು ಮಾತ್ರ ಬಯಸುತ್ತಾರೆ. ಮಧ್ಯಮರು ಧನ ಮತ್ತು ಗೌರವಗಳೆರಡನ್ನೂ ಬಯಸುತ್ತಾರೆ. ಉತ್ತಮರಾದವರು ಗೌರವವನ್ನು ಮಾತ್ರ ಬಯಸುತ್ತಾರೆ. ಮಹಾತ್ಮರಾದವರಿಗೆ ಗೌರವವೇ ಧನವು.

ಸಮಾಜದಲ್ಲಿರುವ ಜನರನ್ನು ಮೂರು ಗುಂಪುಗಳಾಗಿ ವಿಂಗಡಿಸಬಹುದು. ಕೇವಲ ಧನಕ್ಕಾಗಿ ಆಸೆಪಟ್ಟು, ತಮ್ಮ ಸಮಯವನ್ನೆಲ್ಲ ಧನಾರ್ಜನೆಗಾಗಿಯೇ ಕಳೆಯುವವರು ಅಧಮರು. ಎರಡನೆಯ ವರ್ಗದ ಜನರು ಮಧ್ಯಮರು ಇವರಿಗೆ ಧನವೂ ಬೇಕು. ಗೌರವವೂ ಬೇಕು. ಮೊದಲನೆಯ ವರ್ಗದವರಂತೆ ಇವರು ಹಣಕ್ಕಾಗಿ ಏನು ಬೇಕಾದರು ಮಾಡಲು ಸಿದ್ಧರಿಲ್ಲ. ಗೌರವವನ್ನು ಕಳೆದುಕೊಳ್ಳದೆ ಧನಸಂಪಾದನೆಗೆ ಪ್ರಯತ್ನಿಸುತ್ತಾರೆ. ಮೂರನೆಯವರಿಗೆ ಗೌರವವೇ ಪ್ರಧಾನ. ಸಮಾಜದಲ್ಲಿ ನಾಲ್ಕು ಜನರಲ್ಲಿ ಒಳ್ಳೆಯ ಹೆಸರು ಇವರಿಗೆ ಮುಖ್ಯ . ಧನವನ್ನು ಇವರು ವಿಶೇಷವಾಗಿ ಗಳಿಸಲು ಪ್ರಯತ್ನಿಸುವುದಿಲ್ಲ. ಏಕೆಂದರೆ ಉನ್ನತ ವ್ಯಕ್ತಿಗಳಿಗೆ ಗೌರವವೇ ಧನವು. ಗೌರವವನ್ನೂ ಕಳೆದುಕೊಂಡರೆ ಎಷ್ಟು

ಹಣವಿದ್ದರೂ ವ್ಯರ್ಥ. ॥೧॥

**इक्षुराप: पयो मूलं ताम्बूलं फलमौषधम्।**
**भक्षयित्वाऽपि कर्तव्या: स्नानदानाऽऽदिका: क्रिया:॥**

ಸ್ನಾನ, ದಾನ, ಪೂಜೆ ಮುಂತಾದ ಕ್ರಿಯೆಗಳನ್ನು ಆಹಾರ ಸೇವಿಸುವ ಮೊದಲು ಮಾಡಬೇಕೆಂಬುದು ನಿಯಮ. ಆದರೆ ಕಬ್ಬು, ನೀರು, ಹಾಲು, ಗೆಡ್ಡೆ ಗೆಣಸುಗಳು, ತಾಂಬೂಲ, ಹಣ್ಣು ಮತ್ತು ಔಷಧಗಳನ್ನು ಸೇವಿಸಿದ ನಂತರವೂ ಸ್ನಾನಾದಿ ನಿತ್ಯಕ್ರಿಯೆಗಳನ್ನು ನೆರವೇರಿಸಬಹುದೆಂದು ಆಚಾರ್ಯರು ಹೇಳುತ್ತಾರೆ. ಆಪದ್ಧರ್ಮವೆಂಬ ಒಂದು ವಿಭಾಗವೇ ಇದೆ. ಸಾಧಾರಣ ಸಂದರ್ಭದಲ್ಲಿ ಅನುಸರಿಸುವ ನಿಯಮಗಳನ್ನು ಆಪತ್ಕಾಲದಲ್ಲಿ ಅನುಸರಿಸಲು ಸಾಧ್ಯವಾಗದಿರಬಹುದು. ಅಂತಹ ಸಂದರ್ಭಗಳಲ್ಲಿ ಕೆಲವು ವಿನಾಯಿತಿಗಳನ್ನು ಧರ್ಮವು ನೀಡುತ್ತದೆ. ಔಷಧ ಸೇವನೆಯನ್ನು ಬರಿಯ ಹೊಟ್ಟೆಯಲ್ಲಿ ಮಾಡಬಾರದು. ಅಂತಹ ಸಂದರ್ಭದಲ್ಲಿ ಮೇಲೆ ಹೇಳಿದ ಪದಾರ್ಥಗಳನ್ನು ತಿಂದ ನಂತರವೂ ಸ್ನಾನದಾನಾದಿ ಕ್ರಿಯೆಗಳನ್ನು ಮಾಡಬಹುದು. ॥೨॥

**दीपो भक्षयते ध्वान्तं कज्जलं च प्रसूयते।**
**यदन्नं भक्षयेन्नित्यं जायते तादृशी प्रजा॥**

ದೀಪವು ಕತ್ತಲೆಯನ್ನು ಭಕ್ಷಿಸುತ್ತದೆ. ಅದಕ್ಕೆ ಸಮನಾದ ಕಾಡಿಗೆಯನ್ನು ಹೊರಚೆಲ್ಲುತ್ತದೆ. ಹಾಗೆಯೇ ಮನುಷ್ಯನು ಸದಾ ಯಾವ ಆಹಾರವನ್ನು ತಿನ್ನುತ್ತಲೇ ಇರುವನೋ ಅದಕ್ಕೆ ತಕ್ಕಂತಹ ಮಕ್ಕಳು ಜನಿಸುತ್ತಾರೆ.

ದೀಪವು ಕಪ್ಪಾಗಿರುವ ಕತ್ತಲೆಯನ್ನು ಭಕ್ಷಿಸುವ ಕಾರಣ ಅದರಂತೆ ಕಪ್ಪಾದ ಕಾಡಿಗೆಯು ಉತ್ಪತ್ತಿಯಾಗುತ್ತದೆ. ಮನುಷ್ಯನ ವಿಷಯದಲ್ಲಿಯೂ ಹಾಗೆಯೇ ಹೇಳಬಹುದು. ಹುಟ್ಟುವ ಮಕ್ಕಳು ತಂದೆ ತಾಯಿಯರು ತಿನ್ನುವ ಆಹಾರದ ಸಂಸ್ಕಾರಕ್ಕೆ ತಕ್ಕಂತೆ ಇರುತ್ತಾರೆ. ಸಾತ್ವಿಕವಾದ ಆಹಾರವನ್ನು ಸೇವಿಸುವವರಿಗೆ ಅಂತಹ ಮಕ್ಕಳೇ ಜನಿಸುವರು. ತಾಮಸಾಹಾರವನ್ನು ನಿತ್ಯವೂ ಸೇವಿಸುವವರ ಮನೆಯಲ್ಲಿ ತಾಮಸಿಗಳಾದ ಮಕ್ಕಳೇ ಜನಿಸುವರು. ॥೩॥

**वित्तं देहि गुणान्वितेषु मतिमन्नान्यत्र देहि क्वचित्**
**प्राप्तं वारिनिधेर्जलं घनमुखे माधुर्ययुक्तं सदा**
**जीवान्स्थावरजंगमांश्च सकलान् संजीव्य भूमण्डलम्**
**भूय: पश्य तदेव कोटिगुणितं गच्छन्तमम्भोनिधिम्॥**

ಬುದ್ಧಿವಂತರೇ ಗುಣವಂತರಿಗೆ ಹಣವನ್ನು ಕೊಡಿ. ಅದನ್ನು ಬಿಟ್ಟು ಬೇರೆ ಕಡೆ ಏನನ್ನೂ ಕೊಡಬೇಡಿ. ಸಮುದ್ರದಿಂದ ಮೋಡಗಳು ಉಪ್ಪು ನೀರನ್ನು ಪಡೆದರೂ ಯಾವಾಗಲೂ ಮಾಧುರ್ಯದಿಂದ ಕೂಡಿರುತ್ತವೆ. ಆ ನೀರಿನಿಂದ ಚರಾಚರ ಜಗತ್ತಿನಲ್ಲಿರುವ ಎಲ್ಲ ಜೀವಿಗಳನ್ನೂ ತೃಪ್ತಿಗೊಳಿಸಿ, ಮತ್ತೆ ತಾನು ತೆಗೆದುಕೊಂಡ ನೀರಿಗೆ ಕೋಟಿಯಷ್ಟು ಹೆಚ್ಚು ಮಾಡಿ ಮತ್ತೆ ಸಮುದ್ರಕ್ಕೆ ಹಿಂದಿರುಗಿಸುತ್ತವೆ.

ದಾನವನ್ನು ಸತ್ಪಾತ್ರರಲ್ಲಿ ಮಾಡಿದಾಗ ಅದು ಸಫಲವಾಗುತ್ತದೆ. ಅಯೋಗ್ಯನಾದವನು ತೆಗೆದುಕೊಂಡ ಹಣವನ್ನು ಅಪವ್ಯಯಮಾಡಿ, ಕೊಟ್ಟವರಿಗೂ ಕೆಟ್ಟ ಹೆಸರು ತರುತ್ತಾನೆ. ಅದ್ದರಿಂದ ಗುಣವಂತರಿಗೆ ಮಾತ್ರ ಧನವನ್ನು ಕೊಡಬೇಕು. ಅದಕ್ಕೆ ಮೇಘದ ದೃಷ್ಟಾಂತವನ್ನು ಆಚಾರ್ಯರು ಕೊಟ್ಟಿರುತ್ತಾರೆ. ಮೇಘವು ಸಮುದ್ರದಿಂದ ನೀರನ್ನು ತೆಗೆದುಕೊಂಡರೂ, ಮಳೆಯ ನೀರು ಮಧುರವಾಗಿಯೇ ಇರುತ್ತದೆ. ಈ ನೀರಿನಿಂದ ಅದು ಜಗತ್ತೆಲ್ಲವನ್ನೂ ತೋಯಿಸಿ ಎಲ್ಲ ಪ್ರಾಣಿಗಳಿಗೂ ಜೀವದಾನ ಮಾಡುತ್ತದೆ. ನಂತರ ನದಿಗಳಲ್ಲಿ ತುಂಬಿದ ಅದೇ ನೀರು ಮತ್ತೆ ಸಮುದ್ರವನ್ನೇ ಸೇರುತ್ತದೆ. ಹಾಗೆ ಸತ್ಪಾತ್ರರಲ್ಲಿ ಮಾಡಿದ ದಾನವು ಕೋಟಿಗುಣಿತವಾಗಿ ನಮ್ಮನ್ನೇ ಸೇರುತ್ತದೆಯಲ್ಲದೆ ವ್ಯರ್ಥವಾಗುವುದಿಲ್ಲ.॥೪॥

चाण्डालानां सहस्रे च सूरिभिस्तत्त्वदर्शिभिः।
एको हि यवनः प्रोक्तो न नीचो यवनात् परः॥

ತತ್ವದರ್ಶಿಗಳಾದ ವಿದ್ವಾಂಸರ ಅಭಿಪ್ರಾಯದಂತೆ ಸಾವಿರ ಚಂಡಾಲರಿಗೆ ಒಬ್ಬ ಯವನನು ಸಮನು. ಯವನನಿಗಿಂತ ನೀಚನಾದವನು ಯಾರೂ ಇಲ್ಲ.

ಚಂಡಾಲರೆಂದರೆ ನಿಮ್ನ ಜಾತಿಯವರು. ಅವರು ಸ್ವಭಾವತಃ ಕ್ರೂರಿಗಳಾಗಿರುತ್ತಾರೆ. ಅದರೆ ಮ್ಲೇಚ್ಛನು ಅತ್ಯಂತ ಕ್ರೂರಸ್ವಭಾವವುಳ್ಳವನು. ಆದುದರಿಂದ ತಿಳಿದವರು ಅವನನ್ನು ಸಾವಿರ ಚಂಡಾಲರಿಗೆ ಸಮನಾದ ಕ್ರೂರತೆಯುಳ್ಳವನೆಂದು ಹೇಳುತ್ತಾರೆ. ॥೫॥

तैलाऽभ्यंगे चिताधूमे मैथुने क्षौरकर्मणि।
तावद्भवति चाण्डालो यावत्स्नानं न चाऽऽचरेत्॥

ಎಣ್ಣೆಯನ್ನು ಲೇಪಿಸಿಕೊಂಡನಂತರ, ಚಿತೆಯ ಹೊಗೆಯನ್ನು ಸೇವಿಸಿದಾಗ, ಸ್ತ್ರೀ ಸಂಭೋಗದ ನಂತರ, ಕ್ಷೌರಕರ್ಮವನ್ನು ಮಾಡಿಸಿಕೊಂಡಾಗ ಸ್ನಾನ ಮಾಡಬೇಕು. ಅವನು ಸ್ನಾನಮಾಡಿ ಶುದ್ಧನಾಗುವವರೆಗೂ ಅವನನ್ನು ಚಾಂಡಾಲನಂತೆಯೇ ಭಾವಿಸಬೇಕು.

ಅಭ್ಯಂಗವೆಂದರೆ ಮೈಗೆಲ್ಲ ಎಣ್ಣೆಯ ಲೇಪನ. ನಂತರ ಬಿಸಿನೀರಿನ ಸ್ನಾನದಿಂದ ದೇಹ

ಮತ್ತು ಮನಸ್ಸು ಹಗುರವಾಗುವುದು. ಚಿತೆಯಲ್ಲಿ ಹಾಕಿರುವ ವ್ಯಕ್ತಿ ಯಾವುದೋ ರೋಗದಿಂದ ಮೃತನಾಗಿರಬಹುದು. ಅದರ ಪರಿಣಾಮವನ್ನು ಕಳೆಯಲು ಸ್ನಾನ ಮಾಡಬೇಕು. ಉಳಿದೆರಡು ಸಂದರ್ಭಗಳಲ್ಲಿಯೂ ಸ್ವಚ್ಛತೆಯ ದೃಷ್ಟಿಯಿಂದ ಸ್ನಾನ ಆವಶ್ಯಕ. ಇದು ಆರೋಗ್ಯ ನಿಯಮವೂ ಹೌದು. ॥೬॥

अजीर्णे भेषजं वारि जीर्णे वारि बलप्रदम्।
भोजने चामृतं वारि भोजनान्ते विषप्रदम्॥

ಅಜೀರ್ಣವಾದಾಗ ನೀರು ಕುಡಿಯುವುದು ಔಷಧದಂತೆ ವರ್ತಿಸುತ್ತದೆ. ಜೀರ್ಣವಾದ ನಂತರ ನೀರು ಕುಡಿಯುವುದು ಬಲವನ್ನು ನೀಡುತ್ತದೆ. ಭೋಜನ ಸಮಯದಲ್ಲಿ ನೀರು ಅಮೃತಕ್ಕೆ ಸಮಾನವು. ಆದರೆ ಭೋಜನದ ಅಂತ್ಯದಲ್ಲಿ ನೀರು ಕುಡಿಯುವುದು ವಿಷಕ್ಕೆ ಸಮಾನವು.

ಆಹಾರ ಹೆಚ್ಚಾಗಿ ಅಜೀರ್ಣವಾಗಿದ್ದರೆ, ಆಹಾರವನ್ನು ತ್ಯಜಿಸಿ ಬರೀ ನೀರನ್ನು ಕುಡಿದರೆ, ಅದು ಔಷಧದಂತೆ ವರ್ತಿಸಿ, ಪಚನಕ್ರಿಯೆಯಲ್ಲಿ ನೆರವಾಗುತ್ತದೆ. ಆಹಾರವು ಹೊಟ್ಟೆಯಲ್ಲಿ ಇಲ್ಲದಾಗ ನೀರು ಕುಡಿದರೆ ಬಲವನ್ನು ನೀಡುತ್ತದಂತೆ. ಊಟದ ಮಧ್ಯದಲ್ಲಿ ನೀರನ್ನು ಕುಡಿಯಬೇಕೆಂದೂ, ಅಂತ್ಯದಲ್ಲಿ ಕುಡಿಯಬಾರದೆಂದೂ ಇಲ್ಲಿ ಹೇಳಿದೆ. ಆದರೆ ಎಲ್ಲರೂ ಊಟವಾದ ಮೇಲೆ ನೀರನ್ನು ಕುಡಿಯುತ್ತಾರೆ ಮತ್ತು ಅದು ಒಳ್ಳೆಯದೆಂದು ವೈದ್ಯಶಾಸ್ತ್ರ ಹೇಳುತ್ತದೆ. ॥೭॥

हतं ज्ञानं क्रियाहीनं हतश्चाऽज्ञानतो नरः।
हतं निर्नायकं सैन्यं स्त्रियो नष्टा ह्यभर्तृकाः॥

ಕಾರ್ಯಕ್ಕೆ ಉಪಯುಕ್ತವಾಗದ ಜ್ಞಾನವು ವ್ಯರ್ಥವು. ಅಜ್ಞಾನಿಯಾದ ನರನೂ ಕೂಡ ಹತನಾಗುತ್ತಾನೆ. ನಾಯಕನಿಲ್ಲದ ಸೈನ್ಯ ನಾಶವಾಗುತ್ತದೆ. ಪತಿಯಿಲ್ಲದ ಸ್ತ್ರೀಯು ಹಾಳಾಗುತ್ತಾಳೆ.

ಅರ್ಜಿಸಿದ ಜ್ಞಾನವು ಯಾವುದಾದರೂ ರೀತಿಯಲ್ಲಿ ಉಪಯೋಗಿಸಲ್ಪಡಬೇಕು. ಯಾವ ಕೆಲಸಕ್ಕೂ ಬಾರದ ಜ್ಞಾನವು ಅಪ್ರಯೋಜಕವು. ಹಾಗೆಂದು ಜ್ಞಾನವನ್ನೇ ಸಂಪಾದಿಸದಿದ್ದರೆ ಅಂತಹ ಮನುಷ್ಯನೂ ನಾಶವನ್ನು ಹೊಂದುತ್ತಾನೆ. ನಾಯಕನಿಲ್ಲದ ಸೈನ್ಯ ಮತ್ತು ಪತಿಯಿಲ್ಲದ ಸ್ತ್ರೀಯರ ಗತಿಯಾದರೂ ಅಂತೆಯೇ ನಷ್ಟವಾಗುತ್ತದೆ. ॥೮॥

वृद्धकाले मृता भार्या बन्धुहस्ते गतं धनम्।
भोजनं च पराधीनं तिस्त्रः पुंसां विडम्बना॥

ವೃದ್ಧಾಪ್ಯದಲ್ಲಿ ಪತ್ನಿಯು ಮೃತಳಾದರೆ, ಹಣವು ಬಂಧುಗಳ ಕೈ ಸೇರಿದರೆ, ಊಟಕ್ಕೂ ಪರಾಧೀನವಾಗುವ ಸ್ಥಿತಿ ಬಂದರೆ, ಇವು ಮೂರೂ ಪುರುಷರಿಗೆ ಹಿಂಸೆಯ ಪರಿಸ್ಥಿತಿಯು.

ವೃದ್ಧನಾದವನಿಗೆ ಇನ್ನೊಬ್ಬರ ಆಸರೆ ಬೇಕಾಗುತ್ತದೆ. ಆಗ ಪ್ರೀತಿಯಿಂದ ಆದರಿಸುವ ಮಡದಿಯಿದ್ದರೆ, ಅವನ ಬಾಳು ಸಹನೀಯವಾಗುತ್ತದೆ. ಅಂತಹ ಪತ್ನಿಯು ಮೃತಳಾದರೆ ಅವನನ್ನು ಪ್ರೀತಿಯಿಂದ ಕಾಣುವವರು ಯಾರೂ ಇರುವುದಿಲ್ಲ. ಹಣವು ಬಂಧುಗಳ ವಶವಾದರೆ ಅವರು ಅದನ್ನು ಮತ್ತೆ ಹಿಂದಿರುಗಿಸುವುದಿಲ್ಲ. ತಾನು ದುಡಿದ ಹಣವು ತನ್ನ ಕಣ್ಣ ಮುಂದೆಯೇ ಪರರ ಪಾಲಾಗಿ ತುತ್ತು ಅನ್ನಕ್ಕೂ ಕೈಯೊಡ್ಡುವ ಪರಿಸ್ಥಿತಿ ಎದುರಾಗುತ್ತದೆ. ಅಂತಹ ಮನುಷ್ಯನ ಜೀವನವು ಎಲ್ಲರಿಗೂ ಹಾಸ್ಯಾಸ್ಪದವಾದ ಹಿಂಸೆಯ ಪರಿಸ್ಥಿತಿಯಾಗುತ್ತದೆ. ||೯||

नाग्निहोत्रं विना वेदा न च दानं विना क्रिया।
न भावेन विना सिद्धिस्तस्माद्भावो हि कारणम्॥

ವೇದಗಳ ಪಠಣ ಮತ್ತು ಪ್ರಯೋಜನಕ್ಕೆ ಅಗ್ನಿಹೋತ್ರಾದಿ ಕರ್ಮಗಳು ಅವಶ್ಯಕವು. ವೇದೋಕ್ತ ಕರ್ಮಗಳನ್ನು ಮಾಡಿ ನಂತರ ದಾನ ಮಾಡಬೇಕು. ಮನಸ್ಸಿನಲ್ಲಿ ಸರಿಯಾದ ಭಾವನೆಯಿಲ್ಲದೆ ಸಿದ್ಧಿಯಾಗುವುದಿಲ್ಲ. ಆದ್ದರಿಂದ ಮನಸ್ಸಿನ ಭಾವನೆಯು ಬಹಳ ಮುಖ್ಯವಾದುದು.

ವೇದಗಳನ್ನು ಸುಮ್ಮನೆ ಓದಿದರೆ ಪ್ರಯೋಜವಿಲ್ಲ. ಅದರಲ್ಲಿರುವ ಅಗ್ನಿಹೋತ್ರ ಮುಂತಾದ ಕರ್ಮಗಳನ್ನು ಆಚರಿಸಬೇಕು. ಈ ರೀತಿಯ ವೈದಿಕ ಕರ್ಮಗಳನ್ನು ಮಾಡಿದ ನಂತರ ವಿಧಿವತ್ತಾಗಿ ದಾನ ಮತ್ತು ದಕ್ಷಿಣೆಗಳನ್ನು ನೀಡಬೇಕು. ಹಾಗೆ ದಾನ ಮಾಡಬೇಕಾದರೆ ಮನಸ್ಸಿನಲ್ಲಿ ಒಳ್ಳೆಯ ಭಾವನೆಯಿರಬೇಕು. ಆದ್ದರಿಂದ ಒಳ್ಳೆಯ ಭಾವನೆಯೇ ಪರಂಪರೆಯಿಂದ ಎಲ್ಲಕ್ಕೂ ಕಾರಣವಾಗಿರುತ್ತದೆ. ||೧೦||

काष्ठपाषाणधातूनां कृत्वा भावेन सेवनम्।
श्रद्धया च तया सिद्धस्तस्य विष्णुः प्रसीदति॥

ಮರ, ಕಲ್ಲು, ಲೋಹಗಳಿಂದ ಮಾಡಿದ ಪ್ರತಿಮೆಗಳಲ್ಲಿ ದೇವತಾ ಭಾವನೆಯನ್ನು ಇರಿಸಿಕೊಂಡು, ಶ್ರದ್ಧೆಯಿಂದ ಪೂಜಿಸಿದರೆ ವಿಷ್ಣುವು ಪ್ರಸನ್ನನಾಗುವುದರಿಂದ ಸಿದ್ಧಿಯಾಗುತ್ತದೆ.

ಪ್ರತಿಮೆಗಳಲ್ಲಿ ಕೇವಲ ಮರ, ಕಲ್ಲು ಮುಂತಾದ ಭಾವನೆಯನ್ನು ಇಡದೆ ಸಾಕ್ಷಾತ್ ದೇವತೆಯೆಂಬ ಭಾವನೆಯನ್ನು ಇಟ್ಟು ಶ್ರದ್ಧೆಯಿಂದ ಅರ್ಚನೆ ಮಾಡಬೇಕು. ಅಲ್ಲಿ

ವಸ್ತುವಿಗಿಂತ ಶ್ರದ್ಧೆಯು ಮುಖ್ಯವಾದುದು. ಶ್ರದ್ಧೆಯಿಂದ ಸೇವಿಸಿದರೆ ಪರಮಾತ್ಮನು ಪ್ರಸನ್ನನಾಗುತ್ತಾನೆ. ॥೧೧॥

न देवो विद्यते काष्ठे न पाषाणे न मृन्मये।
भावे हि विद्यते देवस्तस्माद् भावो हि कारणम्॥

ದೇವನು ಮರದಲ್ಲಿಯಾಗಲೀ, ಕಲ್ಲಿನಲ್ಲಿಯಾಗಲೀ, ಮಣ್ಣಿನ ಮೂರ್ತಿಯಲ್ಲಿಯಾಗಲೀ ಇರುವುದಿಲ್ಲ. ಅವನು ಮನುಷ್ಯರ ಭಾವನೆಯಲ್ಲಿರುತ್ತಾನೆ. ಆದ್ದರಿಂದ ಪರಮಾತ್ಮನ ಸಾಕ್ಷಾತ್ಕಾರಕ್ಕೆ ಭಾವನೆಯೇ ಕಾರಣ.

ಹಿಂದಿನ ಶ್ಲೋಕದ ಭಾವವನ್ನೇ ಇದರಲ್ಲಿ ಮುಂದುವರಿಸಲಾಗಿದೆ. ಪ್ರತಿಮೆಗಳನ್ನು ಯಾವುದರಿಂದಲಾದರೂ ಮಾಡಿರಬಹುದು. ಅದು ಮುಖ್ಯವಲ್ಲ. ಅದರಲ್ಲಿ ದೇವತೆಯನ್ನು ಮನಸಾ ಭಾವಿಸಿ ಆರಾಧಿಸಬೇಕು. ಅವರವರ ಭಾವನೆಯಂತೆ ಸಿದ್ಧಿ ದೊರಕುವುದು. ॥೧೨॥

शान्तितुल्यं तपो नास्ति न सन्तोषात्परं सुखम्।
न तृष्णाया: परो व्याधिर्न च धर्मो दयापर:॥

ಶಾಂತಿಗೆ ಸಮನಾದ ತಪವಿಲ್ಲ. ಸಂತೋಷಕ್ಕೆ ಸಮನಾದ ಸುಖವಿಲ್ಲ. ದುರಾಸೆಗೆ ಸಮನಾದ ವ್ಯಾಧಿಯಿಲ್ಲ. ದಯೆಗಿಂತ ಶ್ರೇಷ್ಠವಾದ ಧರ್ಮವಿಲ್ಲ.

ಶಾಂತನಾಗಿರುವ ವ್ಯಕ್ತಿಯೇ ನಿಜವಾದ ತಪಸ್ವಿಯು. ಅವನಿಗೆ ಬೇರೆ ರೀತಿಯ ತಪಸ್ಸಿನ ಅಗತ್ಯವಿಲ್ಲ. ಇರುವುದರಲ್ಲಿಯೇ ಸಂತುಷ್ಟನಾಗಿದ್ದರೆ ಅವನು ಸದಾ ಸುಖಿಯು. ಬೇರಾವುದರಿಂದಲೂ ಅಂತಹ ಸುಖ ಸಿಗುವುದಿಲ್ಲ. ಇಲ್ಲದ ವಸ್ತುವಿಗೆ ಆಸೆಪಡುತ್ತ ಹೋದರೆ, ಅದೇ ರೋಗವಾಗಿ ಪರಿಣಮಿಸುತ್ತದೆ. ಅವನಿಗೆ ಮನಃಶಾಂತಿಯೇ ಇರುವುದಿಲ್ಲ. ಹಾಗೆಯೇ ಎಲ್ಲರಲ್ಲಿಯೂ ದಯಾಪರವಾಗಿದ್ದರೆ ಅವನೇ ಧರ್ಮಾತ್ಮನು.॥೧೩॥

क्रोधो वैवस्वतो राजा तृष्णा वैतरणी नदी।
विद्या कामदुधा धेनु: सन्तोषो नन्दनं वनम्॥

ಕ್ರೋಧವೆಂಬುದೇ ಯಮರಾಜನು. ದುರಾಸೆಯೆಂಬುದೇ ವೈತರಣೀ ನದಿಯು. ವಿದ್ಯೆಯೆಂಬುದು ಕಾಮಧೇನುವಾದರೆ ಸಂತೋಷವು ನಂದನವನವು.

ಕ್ರೋಧ ಮತ್ತು ದುರಾಸೆಗಳು ನರಕದ ದಾರಿ ತೋರಿಸುತ್ತವೆ. ಕ್ರೋಧವೇ ಯಮರಾಜನಿಗೆ ಸಮ. ಯಮನು ಎಲ್ಲರನ್ನೂ ಅಂತ್ಯಗೊಳಿಸುವಂತೆ, ಕೋಪವು

ಮನುಷ್ಯನನ್ನು ಸಾವಿನ ದವಡೆಗೆ ನೂಕಿ ನರಕಕ್ಕೆ ತಳ್ಳುತ್ತದೆ. ಅದರ ಜೊತೆಯಲ್ಲಿ ದುರಾಸೆಯು ಇದ್ದರೆ ಅದು ದಾಟಲಾಗದ ವೈತರಣೀ ನದಿಯಂತೆ. ವೈತರಣಿಯು ಯಮ ಲೋಕದಲ್ಲಿರುವ ನದಿ.

ಅದಕ್ಕೆ ವಿರುದ್ಧವಾಗಿ ಮನುಷ್ಯನು ವಿದ್ಯಾವಂತನಾದರೆ ಇಲ್ಲಿಯೇ ಸ್ವರ್ಗಸುಖವನ್ನು ಪಡೆಯಬಹುದು. ವಿದ್ಯೆಯೇ ಸ್ವರ್ಗಲೋಕದ ಹಸುವಾದ ಕಾಮಧೇನುವಿಗೆ ಸಮ. ಅದು ಬೇಡಿದುದನ್ನೆಲ್ಲ ಕೊಡುತ್ತದೆ. ಸಂತೋಷವೇ ಸ್ವರ್ಗದ ಉದ್ಯಾನವನವಾದ ನಂದನವನ. ಅಲ್ಲಿದ್ದಂತೆಯೇ ಇಲ್ಲಿ ಸಂತೋಷವಾಗಿರಬಹುದು.॥೧೪॥

गुणो भूषयते रूपं शीलं भूषयते कुलम्।
सिद्धिर्भूषयते विद्यां भोगो भूषयते धनम्॥

ಗುಣದಿಂದ ಸೌಂದರ್ಯವು ವರ್ಧಿಸುತ್ತದೆ. ಶೀಲದಿಂದ ಕುಲವು ಅಲಂಕೃತವಾಗುತ್ತದೆ. ಸಿದ್ಧಿಯು ವಿದ್ಯೆಗೆ ಭೂಷಣವಾಗುತ್ತದೆ. ಹಣಕ್ಕೆ ಭೋಗವೇ ಭೂಷಣವು.

ಕೇವಲ ರೂಪವಿದ್ದು ಗುಣವಿಲ್ಲದಿದ್ದರೆ, ಆ ರೂಪಕ್ಕೆ ಬೆಲೆ ಬರುವುದಿಲ್ಲ. ರೂಪವೂ, ಗುಣವೂ ಎರಡೂ ಸೇರಿದರೆ ಸೌಂದರ್ಯವು ಹೆಚ್ಚು ಹಿತವಾಗುತ್ತದೆ. ಉತ್ತಮವಾದ ಕುಲದಲ್ಲಿ ಜನಿಸಿದ ಮಕ್ಕಳು ತಮ್ಮ ಶೀಲವನ್ನು ಕಾಪಾಡಿಕೊಂಡಿರೆ ಆ ಕುಲವು ಎಲ್ಲರಿಂದಲೂ ಪ್ರಶಂಸೆಗೆ ಪಾತ್ರವಾಗುತ್ತದೆ. ವಿದ್ಯೆಯನ್ನು ಕಲಿತ ನಂತರ ಅದನ್ನು ಸರಿಯಾಗಿ ಉಪಯೋಗಿಸಿಕೊಂಡು ಸಾಧನೆ ಮಾಡಿದರೆ, ಆಗ ವಿದ್ಯೆಯು ಸಾರ್ಥಕವಾಗುವುದು. ಕೊನೆಯದಾಗಿ ಸಂಪಾದಿಸಿದ ಹಣವನ್ನು ಭೋಗಿಸಬೇಕು. ಸುಮ್ಮನೆ ಹಣವನ್ನು ತುಂಬಿಟ್ಟರೆ ಅದು ಪರರ ಪಾಲಾಗುತ್ತದೆ. ಆದ್ದರಿಂದ ಆ ಹಣವನ್ನು ಖರ್ಚುಮಾಡಿ ಸುಖಪಟ್ಟರೆ ಹಣಕ್ಕೆ ಬೆಲೆ ಬಂದಂತೆ ಆಗುತ್ತದೆ.॥೧೫॥

निर्गुणस्य हतं रूपं दु:शीलस्य हतं कुलम्।
असिद्धस्य हता विद्या अभोगेन हतं धनम्॥

ಹಿಂದಿನ ಶ್ಲೋಕದ ಅರ್ಥವನ್ನೇ ಇಲ್ಲಿ ನಕಾರಾತ್ಮಕವಾಗಿ ವಿವರಿಸಿದೆ. ರೂಪವಿದ್ದರೂ ಗುಣವಿಲ್ಲದಿದ್ದರೆ ವ್ಯರ್ಥವು. ಒಬ್ಬನ ಕೆಟ್ಟ ನಡತೆಯಿಂದ ಇಡೀ ಕುಲವೇ ಹಾಳಾಗುತ್ತದೆ. ವಿದ್ಯೆಯು ಸಿದ್ಧಿಸದಿದ್ದರೆ ಅಂತಹ ವಿದ್ಯೆ ಅಪ್ರಯೋಜಕವು. ಸುಖಪಡದ ಹಣವು ನಷ್ಟ ಸಮಾನವು.

ಇದರಿಂದ ರೂಪಕ್ಕಿಂತ ಗುಣಕ್ಕೆ ಇರುವ ಪ್ರಾಧಾನ್ಯ, ಶೀಲದಿಂದ ಕುಲಕ್ಕೆ ಇರುವ

ಮಹತ್ಕಾರ್ಯಯೋಜನ, ವಿದ್ಯೆ ಮತ್ತು ಹಣದ ಸದ್ವಿನಿಯೋಗವು ವ್ಯಕ್ತವಾಗುತ್ತದೆ. ॥೧೭॥

**शुचिर्भूमिगतं तोयं शुद्धा नारी पतिव्रता।**
**शुचिः क्षेमकरो राजा सन्तोषी ब्राह्मणः शुचिः॥**

ಭೂಮಿಯ ಒಳಗಡೆಯಿರುವ ನೀರು ಶುದ್ಧವಾಗಿರುವುದು. ಪತಿವ್ರತೆಯಾದ ಹೆಂಗಸು ಶುದ್ಧಳು. ಪ್ರಜೆಗಳ ಕ್ಷೇಮದಲ್ಲಿ ನಿರತನಾದ ರಾಜನು ಶುದ್ಧನು. ಸಂತುಷ್ಟನಾದ ಬ್ರಾಹ್ಮಣನು ಶುದ್ಧನು.

ನೀರು ನೆಲದ ಮೇಲೆ ಬಿದ್ದಾಗ ಧೂಳು, ಮಣ್ಣುಗಳಿಂದ ಮಿಶ್ರವಾಗಿ ಕಲುಷಿತವಾಗುತ್ತದೆ. ನಂತರ ಕೆಳಗೆ ಇಳಿದಂತೆ ಬಂಡೆಗಳ ಮಧ್ಯೆ ಹಾಗೂ ಶೋಧಿಸಲ್ಪಟ್ಟು ಶುದ್ಧವಾಗುತ್ತದೆ. ಹೆಂಗಸು ಪತಿವ್ರತೆಯಾಗಿದ್ದರೆ ಮನಸ್ಸು ಕಾಮಕಲುಷಿತವಾಗಿಲ್ಲದೆ ಶುದ್ಧವಾಗಿರುವುದು. ರಾಜನಿಗೆ ಪ್ರಜೆಗಳ ಕ್ಷೇಮವೇ ಮುಖ್ಯವಾದ ಉದ್ದೇಶ. ಅದನ್ನು ಅವನು ಸರಿಯಾಗಿ ನೆರವೇರಿಸಿದರೆ ಬೇರೆ ಯಾವ ಪುಣ್ಯಕಾರ್ಯಗಳ ಅವಶ್ಯಕತೆಯೂ ಇರುವುದಿಲ್ಲ. ಕಡೆಯದಾಗಿ ಬ್ರಾಹ್ಮಣನಲ್ಲಿ ದುರಾಸೆ ಇರಬಾರದು. ಅವನು ತನಗೆ ಬಂದುದರಲ್ಲಿ ಸಂತುಷ್ಟನಾಗಿದ್ದರೆ ಅವನು ಬ್ರಾಹ್ಮಣನಾಗಿ ಜನಿಸಿದುದಕ್ಕೆ ಸಾರ್ಥಕವು.॥೧೭॥

**असन्तुष्टा द्विजा नष्टाः सन्तुष्टाश्च महीभृतः।**
**सलज्जा गणिका नष्टा निर्लज्जाश्च कुलांगना॥**

ಹಿಂದಿನ ಶ್ಲೋಕದ ಭಾವವನ್ನೇ ಪ್ರಕಾರಾಂತರದಿಂದ ಇಲ್ಲಿ ಹೇಳಿದೆ. ದ್ವಿಜನು ತನಗೆ ಬಂದುದರಲ್ಲಿ ತೃಪ್ತಿಯಿಲ್ಲದೆ ಅಸಂತುಷ್ಟನಾಗಿದ್ದರೆ ಅವನು ಕೆಟ್ಟನು. ರಾಜನಿಗೆ ಮಹತ್ವಾಕಾಂಕ್ಷೆಯಿರಬೇಕು. ಅವನು ಅಲ್ಪತೃಪ್ತನಾದರೆ ವಿಶೇಷವಾದ ಮಹತ್ಕಾರ್ಯಗಳನ್ನು ಸಾಧಿಸಿ, ಪ್ರಜಾಹಿತ ಮತ್ತು ಕೀರ್ತಿಗಳನ್ನು ಪಡೆಯಲಾರನು. ವೇಶ್ಯಾಸ್ತ್ರೀ ತನ್ನ ಉದ್ಯೋಗದಲ್ಲಿ ಮುಂದುವರಿಯಬೇಕಾದರೆ ಲಜ್ಜೆಯನ್ನು ತ್ಯಜಿಸಬೇಕು. ಅದರಂತೆಯೇ ಕುಲಾಂಗನೆಗೆ ಲಜ್ಜೆಯೇ ಭೂಷಣವು. ಅವಳು ಲಜ್ಜಾಹೀನಳಾದರೆ ಕುಲವು ಅವನತಿಗೆ ಬರುವುದು.॥೧೮॥

**किं कुलेन विशालेन विद्याहीनेन देहिनाम्।**
**दुष्कुलीनोऽपि विद्वांश्च देवैरपि सुपूज्यते॥**

ಮನುಷ್ಯರು ವಿದ್ಯಾಹೀನರಾಗಿದ್ದರೆ ಅವರ ವಂಶವು ಉನ್ನತವಾಗಿದ್ದರೂ ಏನು ಪ್ರಯೋಜನ? ವಿದ್ವಾಂಸನ ದುಷ್ಕುಲದಲ್ಲಿ ಜನ್ಮ ತಾಳಿದ್ದರೂ ಅವನನ್ನು ದೇವತೆಗಳು

ಪೂಜಿಸುವರು.

ಮನುಷ್ಯನ ಗೌರವಕ್ಕೆ ಅವನ ವಂಶಕ್ಕಿಂತಲೂ ವಿದ್ಯೆಯು ಪ್ರಧಾನವಾಗಿರುವುದು. ಉತ್ತಮ ವಂಶಜನಾದರೂ, ಅವನು ವಿದ್ಯಾವಂತನಲ್ಲದಿದ್ದರೆ, ಜನ ಅವನಿಗೆ ಬೆಲೆ ಕೊಡುವುದಿಲ್ಲ. ಅದೇ ಒಳ್ಳೆಯ ಕುಲದಲ್ಲಿ ಜನಿ ದಿದ್ದರೂ ಪಾಂಡಿತ್ಯವನ್ನು ಸಂಪಾದಿಸಿದ ವ್ಯಕ್ತಿಯು ಗೌರವಕ್ಕೆ ಪಾತ್ರನಾಗುವನು. ಪಿತ್ರಾರ್ಜಿತವಾದ ಉತ್ತಮ ವಂಶಕ್ಕಿಂತ ಸ್ವಯಾರ್ಜಿತವಾದ ವಿದ್ಯೆಯು ಮಹತ್ವಪೂರ್ಣವಾದುದು. ॥೧೯॥

विद्वान् प्रशस्यते लोके विद्वान् गच्छति गौरवम्।
विद्यया लभते सर्वं विद्या सर्वत्र पूज्यते॥

ವಿದ್ವಾಂಸನು ಲೋಕದಲ್ಲಿ ಪ್ರಶಂಸೆಗೆ ಪಾತ್ರನಾಗುತ್ತಾನೆ. ಅವನಿಗೆ ಎಲ್ಲಕಡೆ ಗೌರವವು ದೊರೆಯುತ್ತದೆ. ವಿದ್ಯೆಯಿಂದ ಅವನು ಎಲ್ಲವನ್ನೂ ಪಡೆಯುತ್ತಾನೆ. ವಿದ್ಯೆ ಎಲ್ಲ ಕಡೆಗಳಲ್ಲಿಯೂ ಪೂಜಿಸಲ್ಪಡುತ್ತದೆ.

ವಿದ್ಯೆಯ ಮಹಿಮೆಯನ್ನು ಆಚಾರ್ಯರು ಈ ಶ್ಲೋಕದಲ್ಲಿ ವಿವರಿಸಿರುತ್ತಾರೆ. ಎಲ್ಲರೂ ವಿದ್ಯಾಂಸನನ್ನು ಹೊಗಳಿ ಗೌರವಿಸುತ್ತಾರೆಯೇ ಹೊರತು ಅವಿದ್ಯಾವಂತನನ್ನು ಯಾರೂ ಹೊಗಳುವುದಿಲ್ಲ. ಆದ್ದರಿಂದ ಎಲ್ಲಕ್ಕಿಂತ ಮಿಗಿಲಾದ ವಿದ್ಯೆಯನ್ನು ಎಲ್ಲರೂ ಸಂಪಾದಿಸಬೇಕು. ॥೨೦॥

मांसभक्षैः सुरापानैर्मूर्खैश्चाक्षरवर्जितैः।
पशुभिः पुरुषाकारैर्भाराऽऽक्रान्ता च मेदिनी॥

ಮಾಂಸವನ್ನು ತಿನ್ನುವ, ಮದ್ಯಪಾನವನ್ನು ಮಾಡುವ, ಆಚಾರಗಳನ್ನು ವರ್ಜಿಸಿರುವ ಪಶುರೂಪಿಗಳಾದ, ಕೇವಲ ಮನುಷ್ಯರ ಆಕಾರದಲ್ಲಿರುವ ಮೂರ್ಖರ ಭಾರದಿಂದ ಭೂಮಿಯು ಆಕ್ರಮಿಸಲ್ಪಟ್ಟಿದೆ.

ಮೂರ್ಖರು ಉಚಿತ ಮತ್ತು ಅನುಚಿತವಾದ ಕೆಲಸಗಳ ಪರಿಜ್ಞಾನವನ್ನು ಹೊಂದಿರುವುದಿಲ್ಲ. ಅವರು ಕೇವಲ ತಮ್ಮ ಆಮೋದ-ಪ್ರಮೋದಗಳಲ್ಲಿಯೇ ಕಾಲಯಾಪನೆ ಮಾಡುತ್ತಾರೆ. ಸತ್ಪುರಷನಿಗೆ ಇರಬೇಕಾದ ಆಚಾರ-ವಿಚಾರಗಳು ಅವರಲ್ಲಿ ಇರುವುದಿಲ್ಲ. ಅವರು ಕೇವಲ ಆಕಾರದಿಂದ ಮನುಷ್ಯರಷ್ಟೆ. ಯಾವಾಗಲೂ ಮದ್ಯ-ಮಾಂಸಗಳಲ್ಲಿ ಆಸಕ್ತರಾಗಿರುತ್ತಾರೆ. ಅಂತಹವರು ಭೂಮಿಗೆ ಭಾರ ಸ್ವರೂಪರು॥೨೧॥

अन्नहीनो दहेद् राष्ट्रं मन्त्रहीनश्च ऋत्विजः।

**यजमानं दानहीनो नास्ति यज्ञसमो रिपुः॥**

ಯಜ್ಞವು ಅನ್ನದಾನದಿಂದ ವಿರಹಿತವಾಗಿದ್ದರೆ ಅದು ರಾಷ್ಟ್ರವನ್ನೇ ಸುಡುತ್ತದೆ. ಮಂತ್ರಲೋಪವಾದರೆ ಋತ್ವಿಜರನ್ನು ಘಾಸಿಗೊಳಿಸುತ್ತದೆ. ದಾನಗಳನ್ನು ಮಾಡದಿದ್ದರೆ ಯಜಮಾನನನ್ನೇ ದಹಿಸುತ್ತದೆ. ಸರಿಯಾಗಿ ನಡೆಸದ ಯಜ್ಞವು ಶತ್ರುಸಮಾನವು. ಅದಕ್ಕೆ ಸಮನಾದ ಬೇರೆ ಶತ್ರುವಿಲ್ಲ.

ವಿಧಿಪೂರ್ವಕವಾಗಿ ಮಾಡಿದ ಯಜ್ಞದಿಂದ ಮಳೆ-ಬೆಳೆಗಳಾಗಿ ದೇಶಕ್ಕೆ ಸುಭಿಕ್ಷವೂ, ಯಜಮಾನನಿಗೆ ಶುಭವೂ ಉಂಟಾಗುತ್ತದೆ. ಯಜ್ಞದಲ್ಲಿ ಸಾಕಷ್ಟು ಅನ್ನದಾನ ಮಾಡಬೇಕು. ಇಲ್ಲದಿದ್ದರೆ ದೇಶಕ್ಕೆ ಆಪತ್ತು. ಪುರೋಹಿತರು ಸರಿಯಾಗಿ ಮಂತ್ರಗಳನ್ನು ಉಚ್ಚರಿಸದಿದ್ದರೆ ಅವರಿಗೆ ವಿಪತ್ತನ್ನು ತರುತ್ತದೆ. ದಕ್ಷಿಣೆ-ದಾನಗಳನ್ನು ಕೊಡದಿದ್ದರೆ ಯಜಮಾನನಿಗೆ ಕೇಡು. ಹೀಗೆ ಯಜ್ಞವು ಅಶುಭವೂ ಆಗಬಹುದು. ॥೨೨॥

## ಅಧ್ಯಾಯದ ಸಾರಾಂಶ

ಆಚಾರ್ಯರು ಭಿನ್ನ ಶ್ರೇಣಿಯ ವ್ಯಕ್ತಿಗಳಿಗೆ ಈ ಅಧ್ಯಾಯದಲ್ಲಿ ವಿಶೇಷ ಸಲಹೆ ನೀಡಿರುವರು. ಮಾನ-ಅಪಮಾನಗಳ ಬಗ್ಗೆ ಕಾಳಜಿ ಇರದ ನಿಮ್ನ ವರ್ಗದ ವ್ಯಕ್ತಿಗಳು ಅನ್ಯಾಯದ ರೀತಿಯಲ್ಲಿ ಹಣ ಸಂಗ್ರಹಿಸಲು ಹಾತೊರೆಯುವರು. ಮಧ್ಯಮ ವರ್ಗದ ವ್ಯಕ್ತಿಗಳು ಗೌರವ-ಸನ್ಮಾನಗಳಿಂದ ಹಣ ಸಂಪಾದಿಸಲು ಪ್ರಯತ್ನಿಸುವರು. ಹಣಕ್ಕೆ ಬೆಲೆ ನೀಡದ ಕುಲೀನ ವರ್ಗದ ವ್ಯಕ್ತಿಗಳು ತಮ್ಮ ಅಂತಸ್ತು ಗೌರವಗಳಿಗೆ ಹೆಚ್ಚು ಪ್ರಾಧಾನ್ಯತೆ ನೀಡುವರೆಂದು ಅವರು ವಿವರಿಸಿರುತ್ತಾರೆ.

ಜಗತ್ತಿನಲ್ಲಿ ಎದುರಿಸಬೇಕಾದ ದುಃಖ ಪರಿಸ್ಥಿತಿಗೆ ಕಾರಣವಾದ ಘಟನೆಗಳ ಬಗ್ಗೆ ಆಚಾರ್ಯರು ಮಾಹಿತಿ ನೀಡಿರುವರು. ವೃದ್ಧಾವಸ್ಥೆಯಲ್ಲಿ ವ್ಯಕ್ತಿಯು ವಿಧುರನಾದಾಗ, ತನ್ನ ಆಸ್ತಿಪಾಸ್ತಿ ಪರಭಾರೆಯಾಗಿರುವಾ... ...ಾಗೂ ಊಟ ತಿಂಡಿಯನ್ನು ಪಡೆಯಲು ಪರರ ... ...ನಲ್ಲಿರುವ ... ದುಃಖ ನೀಡುವರೆಂದು ಆವರ... ... ಸಮಾನ



## ॥ ಅಧ್ಯಾಯ - ೬ ॥

**ಜೀವನೋಪಾಯದ ದೃಷ್ಟಿಯಿಂದ ವೇದಗಳ ಅಧ್ಯಯನ ನಡೆಸುವವನು, ಶೂದ್ರ ಅಂದರೆ ನಿಮ್ನ ಜಾತಿಯ ಮನುಷ್ಯರ ಕುಟುಂಬದಲ್ಲಿ ಭೋಜನ ಮಾಡುವ ಬ್ರಾಹ್ಮಣನು ಮಾಡಿದ ಸಮಸ್ತ ಕಾರ್ಯಗಳು ವಿಷರಹಿತ ಹಾವಿನಂತೆ ನಿಷ್ಪ್ರಯೋಜಕವಾಗುವುವು.**

मुक्तिमिच्छसि चेत्तात विषयान् विषवत् त्यज।
क्षमाऽऽर्जवं दया शौचं सत्यं पीयूषवद् भज॥

ಅಪ್ಪ, ಮುಕ್ತಿಯನ್ನು ಬಯಸುವೆಯಾದರೆ ವಿಷಯಸುಖವನ್ನು ವಿಷದಂತೆ ತ್ಯಜಿಸು. ಕ್ಷಮೆ, ಸರಳತೆ, ದಯೆ, ಶುಚಿತ್ವ, ಸತ್ಯಗಳನ್ನು ಅಮೃತದಂತೆ ಭಜಿಸು.

ಮನುಷ್ಯನು ಮುಕ್ತನಾಗಬೇಕೆಂದು ಬಯಸಿದರೆ ಮೊದಲನೆಯದಾಗಿ ಅವನಿಗೆ ಬೇಕಾದುದು ಇಂದ್ರಿಯಗಳ ನಿಗ್ರಹವು. ಇಂದ್ರಿಯಗಳು ವಿಷಯಗಳ ಕಡೆಗೆ ಎಳೆಯಲ್ಪಟ್ಟರೆ ಮನುಷ್ಯನು ಹಾಳಾಗುತ್ತಾನೆ. ಇಂದ್ರಿಯಗಳನ್ನು ಹತೋಟಿಯಲ್ಲಿಟ್ಟಿ ಕೊಂಡು, ಒಳ್ಳೆಯ ಗುಣಗಳಾದ ಕ್ಷಮೆ ಮುಂತಾದವುಗಳನ್ನು ಅಭ್ಯಾಸಮಾಡಿದರೆ ಮುಕ್ತಿಯು ಕರಗತವು. ॥೧॥

परस्परस्य मर्माणि ये भाषन्ते नराधमाः।
त एवं विलयं यान्ति वल्मीकोदरसर्पवत्॥

ಯಾವ ನರಾಧಮರು ಇನ್ನೊಬ್ಬರ ಗುಪ್ತವಿಷಯಗಳನ್ನು ಬಹಿರಂಗ

ಪಡಿಸುತ್ತಾರೆಯೋ ಅವರು ಹುತ್ತದ ಗರ್ಭದಲ್ಲಿ ಸೇರಿದ ಹಾವಿನಂತೆ ನಾಶಹೊಂದುತ್ತಾರೆ.

ಇನ್ನೊಬ್ಬರಲ್ಲಿ ಇರುವ ಒಳ್ಳೆಯ ಗುಣಗಳನ್ನು ಪ್ರಕಟಪಡಿಸಬೇಕೇ ಹೊರತು, ಅವರಲ್ಲಿರುವ ದೋಷಗಳನ್ನು ಎತ್ತಿ ಆಡುವುದು ಸಜ್ಜನರ ಲಕ್ಷಣವಲ್ಲ. ಕೆಲವು ಸಲ ಹಾವು ಹುತ್ತದ ಅಡಿಯಲ್ಲಿ ಸೇರಿಹೋಗಿ ಮೇಲೆ ಬರಲಾರದೆ ಅಲ್ಲಿಯೇ ನಾಶಹೊಂದುತ್ತದೆ. ಹಿಂದೆ ಹೇಳಿದ ನರಾಧಮರನ್ನು ಆಚಾರ್ಯರು ಈ ಗುಂಪಿಗೆ ಸೇರಿಸಿರುತ್ತಾರೆ. ॥೨॥

गन्धः सुवर्णे फलमिक्षुदण्डे
नाऽकारि पुष्पं खलु चन्दनस्य।
विद्वान् धनाढ्यश्च नृपश्चिरायुः
धातुः पुरा कोऽपि न बुद्धिदोऽभूत्॥

ಬ್ರಹ್ಮನು ಸುವರ್ಣದಲ್ಲಿ ಸುಗಂಧವನ್ನು, ಕಬ್ಬಿನ ಜಲ್ಲೆಯಲ್ಲಿ ಹಣ್ಣನ್ನು ಸೃಷ್ಟಿಸಲಿಲ್ಲ. ಹಾಗೆಯೇ ಗಂಧದ ಮರದಲ್ಲಿಯೂ ಹೂವುಗಳಿಲ್ಲ. ಅದೇ ಬ್ರಹ್ಮನು ವಿದ್ವಾಂಸನನ್ನು ಶ್ರೀಮಂತನನ್ನಾಗಿಯೂ, ರಾಜನನ್ನು ಚಿರಂಜೀವಿಯಾಗಿಯೂ ಮಾಡಲಿಲ್ಲ. ಈ ಬ್ರಹ್ಮನಿಗೆ ಬುದ್ಧಿಹೇಳುವವರು ಹಿಂದೆ ಯಾರೂ ಇರಲಿಲ್ಲ.

ಚಿನ್ನವು ಅಮೂಲ್ಯವಾದ ವಸ್ತುವಾದರೂ ಅದರಲ್ಲಿ ಸುಗಂಧವನ್ನು ಬ್ರಹ್ಮನು ಸೃಷ್ಟಿಸಲಿಲ್ಲ. ಹಾಗೆಯೇ ಸಿಹಿಯಾದ ಕಬ್ಬಿನ ಗಿಡದಲ್ಲಿ ಹಣ್ಣನ್ನಾಗಲೀ, ಸುಗಂಧಭರಿತವಾದ ಗಂಧದ ಮರದಲ್ಲಿ ಹೂವನ್ನಾಗಲೀ ನಾವು ಕಾಣುವುದಿಲ್ಲ. ಈ ರೀತಿಯಲ್ಲಿ ಬ್ರಹ್ಮನು ಯಾವುದನ್ನೂ ಪೂರ್ಣ ನಿರ್ದೋಷಿಯನ್ನಾಗಿ ಸೃಷ್ಟಿಸುವುದಿಲ್ಲ. ವಿದ್ಯಾವಂತರಾದವರಿಗೆ ಹಣವನ್ನಾಗಲೀ, ಉತ್ತಮರಾಜನಿಗೆ ಬಹಳ ಆಯುಸ್ಸನ್ನಾಗಲೀ ಕೊಡುವುದಿಲ್ಲ. ಪ್ರಾಯಶಃ ಬ್ರಹ್ಮನಿಗೆ ಬುದ್ಧಿ ಹೇಳುವವರು ಹಿಂದೆ ಯಾರೂ ಇದ್ದಿರಲಿಲ್ಲ. ಯಾವುದೂ ಪೂರ್ಣತೆಯನ್ನು ಪಡೆದಿಲ್ಲ. ॥೩॥

सर्वौषधीनाममृता प्रधाना सर्वेषु सौख्येष्वशनं प्रधानम्।
सर्वेन्द्रियाणां नयनं प्रधानं सर्वेषु गात्रेषु शिरः प्रधानम्॥

ಎಲ್ಲ ಔಷಧಗಳಲ್ಲಿ ಅಮೃತವು ಪ್ರಧಾನವಾದುದು. ಎಲ್ಲ ಸುಖಗಳಿಗಿಂತ ಊಟವೇ ಮುಖ್ಯವಾದ ಸುಖವು. ಇಂದ್ರಿಯಗಳಲ್ಲಿ ಕಣ್ಣು ಪ್ರಧಾನವು. ಶರೀರದ ಅಂಗಗಳಲ್ಲಿ ತಲೆಯು ಪ್ರಧಾನವಾದುದು.

'ಅಮೃತಾ' ಎಂಬ ಸ್ತ್ರೀಲಿಂಗ ಪ್ರಯೋಗವು 'ಅಮೃತಾ ಮಾಗಧೀ ಪಥ್ಯಾಗುಡೂ ಚ್ಯಾಮಲಕೀಷು ಚ' ಎಂಬ ಅರ್ಥಗಳನ್ನು ಹೊಂದಿದೆಯೆಂದು ಮೇದಿನೀಕೋಶವು

ಹೇಳುತ್ತದೆ. ವಾರಾಹೀಗೆಡ್ಡೆ ಅಮೃತಬಳ್ಳಿ, ತುಲಸಿ, ಹಿಪ್ಪಲಿ, ಆಳಲೆಗಿಡ, ಜ್ಯೋತಿಷ್ಮತೀ ಲತೆ, ನೆಲ್ಲಿ ಇವುಗಳಿಗೆಲ್ಲ ಅಮೃತಶಬ್ದ ಪ್ರಯೋಗವಿದ್ದಿತು. ಇವುಗಳನ್ನು ಬೇರೆ ಬೇರೆ ಔಷಧಗಳಲ್ಲಿ ಆಯುರ್ವೇದದಲ್ಲಿ ಇಂದಿಗೂ ಬಳಸುತ್ತಾರೆ. ಎಲ್ಲ ಸುಖಕ್ಕಿಂತ ಭೋಜನ ಸುಖವೇ ಪ್ರಧಾನವು. ಹಿತವಾದ ಮತ್ತು ರುಚಿಯಾದ ಊಟವಿಲ್ಲದಿದ್ದರೆ ಮತ್ತಾವ ಸುಖವೂ ಹಿತವಾಗುವುದಿಲ್ಲ. 'ಹೊಟ್ಟೆಗೆ ಹಿಟ್ಟಿಲ್ಲ, ಜುಟ್ಟಿಗೆ ಮಲ್ಲಿಗೆ ಹೂ' ಎಂಬಂತೆ ಆಗುತ್ತದೆ. ಕಣ್ಣು ಇಲ್ಲದಿದ್ದರೆ ಇಡೀ ಪ್ರಪಂಚವೇ ಅಂಧಕಾರಮಯ. ಮನುಷ್ಯನ ಎಲ್ಲ ಅಂಗಗಳೂ ಕೆಲಸ ಮಾಡುವುದು ತಲೆಯಲ್ಲಿರುವ ಮಿದುಳಿನಿಂದ. ಹೀಗೆ ಅವುಗಳಿಗೆ ಪ್ರಾಧಾನ್ಯವು. ।।೪।।

दूतो न सञ्चरति खे न चलेच्च वार्ता
पूर्वं न जल्पितमिदं न च संगमोऽस्ति।
व्योम्नि स्थितं रविशशिग्रहणं प्रशस्तं
जानाति यो द्विजवरः स कथं न विद्वान्॥

ದೂತರು ಆಕಾಶದಲ್ಲಿ ಸಂಚರಿಸುವುದಿಲ್ಲ. ಆಕಾಶದಿಂದ ವಾರ್ತೆಗಳು ತಾವಾಗಿ ಚಲಿಸಿ, ಬಂದು ತಲಪುವುದೂ ಇಲ್ಲ. ಇದು ಹೀಗೆ ಯಾರೋ ಹೇಳಿರುವುದನ್ನು ಮತ್ತೆ ಹೇಳಿರುವುದೂ ಅಲ್ಲ. ಹೀಗಿದ್ದಾಗ್ಯೂ ಆಕಾಶದಲ್ಲಿರುವ ಸೂರ್ಯಚಂದ್ರರ ಗ್ರಹಣ ಮುಂತಾದವುಗಳನ್ನು ದ್ವಿಜಶ್ರೇಷ್ಠರು ನಿಖರವಾಗಿ ತಿಳಿಯುತ್ತಾರೆ. ಅವರು ವಿದ್ವಾಂಸರಲ್ಲದೆ ಮತ್ತಾರು?

ಇಲ್ಲಿ ವಿದ್ವಾಂಸರಾದ ದ್ವಿಜರನ್ನು ಹೊಗಳಿದೆ. ದ್ವಿಜರೆಂದರೆ ತ್ರೈವರ್ಣಿಕರು ಯಾರಾದರೂ ಆಗಬಹುದು. ಇಲ್ಲಿಗೆ ಜಾತಿಗೆ ಪ್ರಾಧಾನ್ಯವಿಲ್ಲ. ಗ್ರಹ-ನಕ್ಷತ್ರಗಳ ಚಲನೆಯನ್ನು ಗಮನಿಸಿ, ಆಕಾಶದಲ್ಲಿ ನಡೆಯುವ ವಿದ್ಯಮಾನಗಳನ್ನು ಕರಾರುವಾಕ್ಕಾಗಿ ಹೇಳಬಲ್ಲ ಖಗೋಳಶಾಸ್ತ್ರಜ್ಞರನ್ನು ಆಚಾರ್ಯರು ಪ್ರಶಂಸಿಸಿದ್ದಾರೆ. ಯಾವುದೇ ಆಧುನಿಕ ಉಪಕರಣಗಳಿಲ್ಲದ ಕಾಲದಲ್ಲಿಯೂ ಆಕಾಶಕಾಯಗಳನ್ನು ಅಧ್ಯಯನ ಮಾಡಿದ ಕೀರ್ತಿ ಭಾರತೀಯರಿಗೆ ಸಲ್ಲಬೇಕು. ।।೫।।

विद्यार्थी सेवकः पान्थः क्षुधाऽऽर्तो भयकातरः।
भाण्डारी प्रतिहारी च सप्त सुप्तान् प्रबोधयेत्॥

ವಿದ್ಯಾರ್ಥಿ, ಸೇವಕ, ಯಾತ್ರಿಕ, ಹಸಿದು ಬಳಲಿದವನು, ಭಯದಿಂದ ಕಾತುರನಾಗಿರುವವನು, ಉಗ್ರಾಣದ ಅಧಿಕಾರಿ, ರಕ್ಷಣಾ ಪಡೆಯವನು ಇವೆಲ್ಲರೂ

ನಿದ್ರಿಸುತ್ತಿದ್ದರೆ ಎಚ್ಚರಿಸಬೇಕು.

'ವಿದ್ಯಾತುರಾಣಾಂ ನ ಸುಖಂ ನ ನಿದ್ರಾ' ಎಂಬುದು ಪ್ರಸಿದ್ಧಸೂಕ್ತಿಯು. ವಿದ್ಯಾರ್ಥಿ ನಿದ್ರಾಸಕ್ತನಾದರೆ ಅಭ್ಯಾಸ ಸಾಗುವುದಿಲ್ಲ. ಅವನನ್ನು ಎಚ್ಚರಿಸಿ ಓದುವಂತೆ ಹೇಳಬೇಕು. ಸೇವಕನು ಯಜಮಾನನ ಕೆಲಸಗಳಲ್ಲಿ ಜಾಗರೂಕನಾಗದೆ ತೂಕಡಿಸುವುದು ಅವನ ಉದ್ಯೋಗಕ್ಕೆ ಸಲ್ಲದು. ಯಾತ್ರಿಕರು ಸರಿಯಾದ ಸಮಯಕ್ಕೆ ಹೊರಟು ಯಾತ್ರೆಯ ಸ್ಥಳವನ್ನು ತಲಪಬೇಕಾದರೆ ನಿದ್ರೆಯಲ್ಲಿ ಕಾಲಕಳೆಯಬಾರದು. ಹಸಿದು ಬಳಲಿ ಆಯಾಸದಿಂದ ನಿದ್ರಿಸುತ್ತಿದ್ದರೆ, ಅವನನ್ನು ಎಚ್ಚರಿಸಿ ಅನ್ನ ನೀಡಬೇಕು. ಭಯದಿಂದ ಮೂರ್ಛಿತನಾಗಿ ನಿದ್ರೆಬಂದಂತೆ ಬಿದ್ದಿದ್ದರೆ ಅವನ ಭಯವನ್ನು ಮೊದಲು ದೂರಮಾಡಿ ಸಮಾಧಾನ ಪಡಿಸಬೇಕು. ಉಗ್ರಾಣದ ಅಧಿಕಾರಿ ನಿದ್ರಿಸಿದರೆ ಕಾವಲು ಕಾಯುವವರು ಯಾರು? ಹಾಗೆಯೇ ರಕ್ಷಣಾ ಪಡೆಯುವರು ಎಚ್ಚರದಿಂದ ಕಾರ್ಯನಿರ್ವಹಿಸದಿದ್ದರೆ ಎಚ್ಚರಿಸಬೇಕಾದೀತು. ॥೬॥

**अहिं नृपं च शार्दूलं किटिं च बालकं तथा।**
**परश्वानं च मूर्खं च सप्त सुप्तान् न बोधयेत्॥**

ಸರ್ಪ, ರಾಜ, ಹುಲಿ, ಹಂದಿ, ಬಾಲಕ, ಆಯುಧ ಹಿಡಿದಿರುವವನು ಮತ್ತು ಮೂರ್ಖ ಈ ಏಳು ಜನರು ಮಲಗಿದ್ದರೆ ಏಳಿಸಬಾರದು.

ಈ ಶ್ಲೋಕದಲ್ಲಿ ಆಚಾರ್ಯರು ಮಲಗಿರುವ ಯಾರನ್ನು ಎಚ್ಚರಿಸಬಾರದೆಂದು ತಿಳಿಸಿರುತ್ತಾರೆ. ಸರ್ಪವು ಎಚ್ಚರಿಸಿದವರನ್ನು ಕಚ್ಚಬಹುದು. ರಾಜನು ಕುಪಿತನಾಗಬಹುದು. ಹುಲಿ ಮತ್ತು ಹಂದಿ ಮೇಲೆ ನುಗ್ಗಿ ಸಾಯಿಸಬಹುದು. ಮಕ್ಕಳನ್ನು ಅರ್ಧನಿದ್ದೆಯಲ್ಲಿ ಎಚ್ಚರಿಸಿದರೆ ಅಳಲು ಪ್ರಾರಂಭಿಸುತ್ತವೆ. ಅವುಗಳನ್ನು ಸಮಾಧಾನ ಪಡಿಸುವುದು ಕಷ್ಟ. ಆಯುಧ ಹಿಡಿದು ನಿದ್ರಿಸುತ್ತಿರುವವನು ಅರ್ಧನಿದ್ದೆಯಲ್ಲಿ ಗೊತ್ತಾಗದೆ ಅದನ್ನು ಪ್ರಯೋಗಿಸಬಹುದು. ಮೂರ್ಖನನ್ನು ಎಚ್ಚರಿಸುವುದರಲ್ಲಿ ಅರ್ಥವಿಲ್ಲ. ಹೀಗಾಗಿ ಇವರನ್ನು ಹಾಗೆಯೇ ಬಿಟ್ಟರೆ ಕ್ಷೇಮ. ॥೭॥

**अर्थाऽधीताश्च यैर्वेदास्तथा शूद्रान्नभोजिनाः।**
**ते द्विजाः किं करिष्यन्ति निर्विषा इव पन्नगाः॥**

ಯಾರಿಂದ ಕೇವಲ ಧನಾರ್ಜನೆಗಾಗಿ ವೇದಗಳು ಅಧ್ಯಯನ ಮಾಡಲ್ಪಟ್ಟಿವೆಯೋ ಮತ್ತು ಶೂದ್ರರ ಅನ್ನವನ್ನು ಯಾರು ತಿನ್ನುತ್ತಾರೆಯೋ ಅಂತಹ ಬ್ರಾಹ್ಮಣರು ಏನು ತಾನೇ ಮಾಡಬಲ್ಲರು? ಅವರು ವಿಷರಹಿತವಾದ ಸರ್ಪದಂತೆ ಇರುತ್ತಾರೆ.

ವಿಷರಹಿತವಾದ ಹಾವು ಯಾರನ್ನು ಏನನ್ನೂ ಮಾಡಲಾರದು. ಅದರಲ್ಲಿ ಯಾವ ಶಕ್ತಿಯೂ ಇರುವುದಿಲ್ಲ. ಹಾಗೆಯೇ ಕೇವಲ ಜೀವನೋಪಾಯಕ್ಕಾಗಿ ವೇದವನ್ನು ಓದಿದ ಮತ್ತು ಆಹಾರಾದಿಗಳಲ್ಲಿ ನಿಗ್ರಹವಿಲ್ಲದ ಬ್ರಾಹ್ಮಣರಿಗೆ ಶಾಪಾನುಗ್ರಹಶಕ್ತಿಗಳೇನೂ ಇರುವುದಿಲ್ಲ. ಅವರು ವಿಷವಿರದ ಹಾವಿನಂತೆ ಇರುತ್ತಾರೆ. ।।೮।।

यस्मिन् रुष्टे भयं नास्ति तुष्टे नैव धनाऽऽगमः।
निग्रहोऽनुग्रहो नास्ति स रुष्टः किं करिष्यति॥

ಹಿಂದಿನ ಶ್ಲೋಕದ ಭಾವವನ್ನೇ ಇಲ್ಲಿ ವಿಶದ ಪಡಿಸಿದೆ. ಯಾರ ಕೋಪದಿಂದ ಯಾವ ಭಯ ಯಾರಿಗೂ ಉಂಟಾಗುವುದಿಲ್ಲವೋ, ಯಾರು ಸಂತುಷ್ಟರಾದರೂ ಯಾರಿಗೂ ಲಾಭವಾಗುವುದಿಲ್ಲವೋ, ಅಂದರೆ ಯಾರಿಗೆ ನಿಗ್ರಹ ಅಥವಾ ಅನುಗ್ರಹ ಶಕ್ತಿಯಿಲ್ಲವೋ ಅವನು ಕೋಪ ಮಾಡಿಕೊಂಡರೂ ಏನು ಪ್ರಯೋಜನ?

ಶಕ್ತನಾದ ಒಬ್ಬ ವ್ಯಕ್ತಿಯು ಕೋಪಗೊಂಡರೆ, ಜಗತ್ತನ್ನೇ ಭಸ್ಮ ಮಾಡಿಬಿಡಬಲ್ಲನು. ಅವನ ಕೋಪಕ್ಕೆ ಎಲ್ಲರು ನಡುಗುತ್ತಾರೆ. ಅಂತಹ ವ್ಯಕ್ತಿಯೇನಾದರೂ ಪ್ರಸನ್ನನಾದರೆ ಅಷ್ಟೈಶ್ವರ್ಯಗಳನ್ನು ದಯಪಾಲಿಸಬಲ್ಲನು. ಇವರು ನಿಗ್ರಹ-ಅನುಗ್ರಹ ಶಕ್ತಿಗಳುಳ್ಳ ಮಹಾತ್ಮರು. ಅವರ ಭಾವನೆಗಳಿಗೆ ಬೆಲೆಯಿದೆ. ಅಂತಹ ಶಕ್ತಿಯಿಲ್ಲದವನ ಕೋಪ-ಪ್ರಸನ್ನತೆಗಳೆರಡೂ ವ್ಯರ್ಥವು. ।।೯।।

निर्विषेणाऽपि सर्पेण कर्तव्या महती फणा।
विषमस्तु न चाप्यस्तु घटाटोपो भयंकरः॥

ಸರ್ಪವು ತನ್ನಲ್ಲಿ ವಿಷವಿಲ್ಲದಿದ್ದರೂ ದೊಡ್ಡದಾಗಿ ಹೆಡೆಬಿಚ್ಚಿ ಹೆದರಿಸಬೇಕು. ವಿಷವು ಇದೆಯೋ ಇಲ್ಲವೋ ಯಾರಿಗೂ ಗೊತ್ತಿರುವುದಿಲ್ಲ. ಹೆಡೆ ಮತ್ತು ಆರ್ಭಟಕ್ಕೆ ಜನ ಹೆದರುತ್ತಾರೆ.

ಸರ್ಪದಲ್ಲಿರುವ ವಿಷದ ಬಗ್ಗೆ ಯಾರೂ ಯೋಚಿಸುವುದಿಲ್ಲ. ಅದು ಹೆಡೆ ಬಿಚ್ಚಿ ಫೂತ್ಕರಿಸಿದರೆ ಹೆದರಿ ಅವರ ಬಳಿಗೆ ಹೋಗುವುದಿಲ್ಲ. ಇಲ್ಲದಿದ್ದರೆ ನಿರುಪದ್ರವಿ ಜೀವಿಯೆಂದೇನಾದರೂ ಗೊತ್ತಾದರೆ ಸುಮ್ಮನೆ ಪೀಡಿಸುತ್ತಾರೆ. ಆತ್ಮರಕ್ಷಣೆಗಾಗಿ ಮನುಷ್ಯನೂ ಕೆಲವು ಸಲ ತನ್ನಲ್ಲಿ ಇಲ್ಲದ ಶಕ್ತಿಗಳನ್ನು ಇವೆಯೆಂಬಂತೆ ತೋರಿಸಿಕೊಳ್ಳಬೇಕಾಗುತ್ತದೆ. ತೀರ ಮೃದು ಸ್ವಭಾವದವರನ್ನು ಎಲ್ಲರೂ ತುಳಿಯುತ್ತಾರೆ।।೧೦।।

प्रातर्द्यूतप्रसंगेन मध्याह्ने स्त्रीप्रसंगतः।
रात्रौ चौर्यप्रसंगेन कालो गच्छत्यधीमताम्॥

ಮೂರ್ಖರಾದವರು ಬೆಳಗಿನ ಸಮಯದಲ್ಲಿ ಜೂಜಾಡುವುದರಿಂದ, ಮಧ್ಯಾಹ್ನದಲ್ಲಿ ಸ್ತ್ರೀಯರ ವಿಷಯವಾಗಿ ಮಾತನಾಡುವುದರಿಂದ, ರಾತ್ರಿಯಲ್ಲಿ ಕಳ್ಳತನ ಮಾಡುವುದರಿಂದ ಕಾಲವನ್ನು ಕಳೆಯುತ್ತಾರೆ.

ಮೂರ್ಖರಾದವರು ತಮ್ಮ ಕಾಲವನ್ನು ಸದುಪಯೋಗಪಡಿಸಿಕೊಳ್ಳುವುದಿಲ್ಲ. ಅವರು ಹಗಲಿನಲ್ಲಿ ಜೂಜಾಡುತ್ತ ಕಾಲಹರಣ ಮಾಡುತ್ತಾರೆ. ಮದ್ಯಾಹ್ನದಲ್ಲಿ ಸ್ವಪ್ನವನ್ನು ಕಾಣುತ್ತ ಅದರಲ್ಲಿ ಸ್ತ್ರೀ ಪ್ರಸಂಗಗಳನ್ನು ಮೆಲುಕುಹಾಕುತ್ತ ಕಾಲಕಳೆಯುತ್ತಾರೆ. ರಾತ್ರಿಯಲ್ಲಿ ಕಳ್ಳತನ ಮುಂತಾದ ದುರ್ಮಾರ್ಗದಿಂದ ಹಣ ಸಂಪಾದಿಸುತ್ತಾರೆ. ॥೧೧॥

स्वहस्तग्रथिता माला स्वहस्तघृष्टचन्दनम्।
स्वहस्तलिखितं स्तोत्रं शक्रस्यापि श्रियं हरेत्॥

ತನ್ನ ಕೈಯಿಂದಲೇ ಕಟ್ಟಲ್ಪಟ್ಟ ಮಾಲೆ, ತನ್ನ ಕೈಯಿಂದಲೇ ತೇಯಲ್ಪಟ್ಟ ಚಂದನ, ತನ್ನ ಕೈಯಿಂದಲೇ ಬರೆಯಲ್ಪಟ್ಟ ಸ್ತೋತ್ರ ಇವು ಇಂದ್ರನ ಐಶ್ವರ್ಯವನ್ನು ಅಪಹರಿಸಬಹುದು.

ಭಗವಂತನ ಪೂಜೆಗೆ ನಾವೇ ಕೈಂಕರ್ಯ ಮಾಡುವುದು ಶ್ರೇಷ್ಠವು. ತಾನು ಮಾಡುವುದು ಉತ್ತಮ. ನಮ್ಮ ಶ್ರೇಯಸ್ಸಿಗೆ ನಾವೇ ಪ್ರಯತ್ನಿಸಬೇಕೆನ್ನುವುದು ಇದರ ಭಾವಾರ್ಥವಾಗಬಹುದು. ಭಗವಂತನಿಗಾಗಿ ನಾವೇ ಬೆಳೆದ ಹೂಗಳನ್ನು ಮಾಲೆಕಟ್ಟಿ, ನಮ್ಮ ಕೈಗಳಿಂದಲೇ ಗಂಧ ತೇಯ್ದು, ಒಂದು ಸಾಲು ಸ್ತೋತ್ರವನ್ನು ಅವನಿಗಾಗಿ ಬರೆದರೆ ಭಗವಂತನು ಪ್ರಸನ್ನನಾಗಿ ಸ್ವರ್ಗದ ಸಾಮ್ರಾಜ್ಯವನ್ನೇ ದಯಪಾಲಿಸುತ್ತಾನೆ. 'ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ' ಎಂಬುದು ಗೀತಾವಾಕ್ಯವು. ॥೧೨॥

इक्षुदण्डास्तिलाः क्षुद्राः कान्ता हेम च मेदिनी।
चन्दनं दधि ताम्बूलं मर्दनं गुणवर्धनम्॥

ಕಬ್ಬಿನ ಜಲ್ಲೆ, ಎಳ್ಳು, ನೀಚವ್ಯಕ್ತಿಗಳು, ಸ್ತ್ರೀ, ಚಿನ್ನ, ಭೂಮಿ, ಗಂಧ, ಮೊಸರು ಮತ್ತು ತಾಂಬೂಲ ಇವುಗಳನ್ನು ಮರ್ದನ ಮಾಡಿದಷ್ಟು ಗುಣವೃದ್ಧಿಯಾಗುವುದು.

ಕಬ್ಬನ್ನು ಗಾಣಕ್ಕೆ ಹಾಕಿ ಅರೆದರೆ ಸಿಹಿಯಾದ ರಸವು ಬರುವುದು. ಎಳ್ಳನ್ನು ಕೂಡ ಹಿಂಡಿದಷ್ಟೂ ಎಣ್ಣೆಯನ್ನು ಪಡೆಯಬಹುದು. ನೀಚವ್ಯಕ್ತಿಗಳನ್ನು ಶಿಕ್ಷಿಸಿದರೆ ಹತೋಟಿಗೆ ತರಬಹುದು. ಸ್ತ್ರೀಯರನ್ನು ಕೂಡ ಹತೋಟಿಯಲ್ಲಿಟ್ಟಿದ್ದರೆ ಗುಣವತಿಯರಾಗಿರುವರು.

ಚಿನ್ನವನ್ನು ಕುಟ್ಟುವುದು, ಉಜ್ಜುವುದು ಮುಂತಾದ ವಿಧಾನಗಳಿಂದ ಹೊಳಪಾಗಿ ಮಾಡಬಹುದು. ಭೂಮಿಯನ್ನು ಉತ್ತು ಹದಮಾಡಿದರೆ ಬೆಳೆ ಚೆನ್ನಾಗಿ ಬರುವುದು. ಗಂಧವು ತೀಯ್ದಷ್ಟು ಸುಗಂಧ ಹೆಚ್ಚು, ಮೊಸರನ್ನು ಕಡೆದಾಗಲೇ ಬೆಣ್ಣೆ ಬರುತ್ತದೆ. ತಾಂಬೂಲವನ್ನುಜಗಿದಾಗ ರಸ ಒಸರುವುದು. ಈ ಮೇಲಿನ ಎಲ್ಲ ವಸ್ತುಗಳೂ ಬಲಪ್ರಯೋಗದಿಂದಲೇ ಫಲ ಕೊಡುವಂತಹವುಗಳು. ||೧೩.||

दरिद्रता धीरतया विराजते कुवस्त्रता शुभ्रतया विराजते।
कदन्नता चोष्णतया विराजते कुरूपता शीलतया विराजते॥

ಬಡವನಾಗಿದ್ದರೂ ಧೀರನಾಗಿದ್ದರೆ ಅವನು ಶೋಭಿಸುತ್ತಾನೆ. ವಸ್ತ್ರವು ಹಳೆಯದಾಗಿದ್ದರೂ ಶುಭ್ರವಾಗಿದ್ದರೆ ಉಡಲು ಯೋಗ್ಯವಾಗಿರುತ್ತದೆ. ಒರಟಾದ ಅನ್ನವಾದರೂ ಬಿಸಿಯಾಗಿದ್ದರೆ ಊಟ ಮಾಡಬಹುದು. ಕುರೂಪಿಯಾದರೂ ಗುಣವತಿಯಾದರೆ ಪ್ರಶಂಸನೀಯಳು.

ಬಡತನದ ದೋಷವನ್ನು ಧೈರ್ಯವೆಂಬ ಗುಣದಿಂದ ಮುಚ್ಚಬಹುದು. ಹಾಗೆಯೇ ವಸ್ತ್ರವು ಉತ್ತಮವಾಗಿಲ್ಲದಿದ್ದರೂ ಶುಭ್ರವಾಗಿದ್ದರೆ ಅದರ ದೋಷ ಎದ್ದುಕಾಣುವುದಿಲ್ಲ.ಅನ್ನವು ಬಿಸಿಯಾಗಿದ್ದರೆ ರುಚಿ ಕಡಿಮೆಯಾದರೂ ಊಟ ಮಾಡಲು ಸಾಧ್ಯ. ರೂಪವು ಸಾಧಾರಣವಾದರೂ ಗುಣವು ಉತ್ತಮವಾಗಿದ್ದರೆ ಎಲ್ಲರೂ ಇಷ್ಟಪಡುತ್ತಾರೆ. ಹೀಗೆ ದೋಷವನ್ನು ನಮ್ಮ ಪ್ರಯತ್ನದಿಂದ ಗುಣವಾಗಿಸಿಕೊಳ್ಳುವುದು ಸಾಧ್ಯ. ||೧೪||

## ಅಧ್ಯಾಯದ ಸಾರಾಂಶ

...ನುಷ್ಯನ ಬದುಕಿನ ಉದ್ದೇಶದ ಬಗ್ಗೆ ತಿಳಿಸುತ್ತಾ ವಿಷಯ, ರಾಗ-ದ್ವೇಷ ...ನ್ನು ತ್ಯಜಿಸಿದ ಸಾಧಕರಿಗೆ ಸಾಯುಜ್ಯ ಲಭಿಸುವುದು. ಅಂತೆಯೇ ದ್ವೇಷಿಸಿ ...ಂ ವಾಕ್ ಮುಖಾಂತರ ಅನ್ಯರನ್ನು ತೆಗಳುವ ವ್ಯಕ್ತಿಯ ನಾಶ ಖಂಡಿತ ಎಂದು ಆಚಾರ್ಯರು ತಿಳಿಸಿರುವರು.

ಜಗತ್ತಿನ ವೈಪರೀತ್ಯಗಳ ಬಗ್ಗೆ ತಿಳಿಸುತ್ತಾ ಬಂಗಾರದಲ್ಲಿ ಪರಿಮಳವಿರದು. ಕಬ್ಬಿನ ಗಿಡ ಹಣ್ಣು ಉತ್ಪಾದಿಸದು. ಶ್ರೀ ಗಂಧದ ಮರ ಹೂಗಳನ್ನು ಬಿಡದು. ವಿದ್ವಾಂಸರು ನಿರ್ಧನರಾಗಿರುವರು ಹಾಗೂ ರಾಜ ಮಹಾರಾಜರು ದೀರ್ಘಾಯಸ್ಸು ಹೊಂದರು ಎಂದು ಆಚಾರ್ಯರು ತಿಳಿಸಿರುವರು.



## ॥ ಅಧ್ಯಾಯ - ೧೦ ॥

**ಪ್ರಭುವಿನ ಮಹಿಮೆ ಅಥವಾ ಮನುಷ್ಯನ ಅದೃಷ್ಟವು ವರ್ಣನಾತೀತ. ಕ್ಷಣದಲ್ಲಿ ನಿರ್ಧನನು ಚಕ್ರವರ್ತಿಯಾಗಬಲ್ಲನು. ದೊರೆಯು ನಿರ್ಧನನಾಗಬಲ್ಲನು.**



धनहीनो न हीनश्च धनिकः स सुनिश्चयः।
विद्यारत्नेन यो हीनः स हीनः सर्ववस्तुषु॥

ಧನವಿಲ್ಲದವನು ಖಂಡಿತ ಹೀನನಲ್ಲ. ಅವನು ನಿಜವಾಗಿಯೂ ಧನಿಕನೇ. ಯಾರಿಗೆ ವಿದ್ಯಾಧನವಿಲ್ಲವೋ ಅವನು ಎಲ್ಲ ವಸ್ತುಗಳಿಗಿಂತಲೂ ಹೀನನು.

ಬಡತನವೆಂಬುದು ಹಣದಿಂದ ಬಂದುದಲ್ಲ. ಹಣವಿಲ್ಲದ ಮಾತ್ರಕ್ಕೆ ಒಬ್ಬ ಮನುಷ್ಯನನ್ನು ಕೀಳಾಗಿ ಕಾಣಬಾರದು. ಅವನಲ್ಲಿ ವಿದ್ಯೆಯಿದ್ದರೆ ಅವನು ನಿಜವಾಗಿಯೂ ಧನಿಕನು. ಯಾರಲ್ಲಿ ವಿದ್ಯೆಯಿಲ್ಲವೋ ಅವನು ಬಡವನು. ಇಲ್ಲಿ ವಿದ್ಯೆಯ ಮಹತ್ವವು ನಿರೂಪಿತವಾಗಿದೆ. ॥೧॥

दृष्टिपूतं न्यसेत् पादं वस्त्रपूतं पिबेज्जलम्।
शास्त्रपूतं वदेत् वाक्यं मनः पूतं समाचरेत्॥

ನಡೆಯುವಾಗ ನೆಲವನ್ನು ನೋಡುತ್ತ ಸರಿಯಾದ ಸ್ಥಳದಲ್ಲಿ ಪಾದವನ್ನು ಇರಿಸಬೇಕು. ನೀರನ್ನು ಒಳ್ಳೆಯ ಬಟ್ಟೆಯಿಂದ ಶೋಧಿಸಿ ನಂತರ ಕುಡಿಯಬೇಕು. ಮಾತನಾಡುವಾಗ ಅದು ಶಾಸ್ತ್ರಸಮ್ಮತವಾಗಿರಬೇಕು. ಮನಸ್ಸಿಗೆ ಪವಿತ್ರವೆನಿಸುದದನ್ನು ಮಾಡಬೇಕು.

ನಡೆಯುವಾಗ ಎಲ್ಲಿಯೋ ನೋಡುತ್ತ ಹೋದರೆ ಅಪಾಯ ಹೆಚ್ಚು. ನೆಲವನ್ನು ನೋಡುತ್ತ ಕಲ್ಲು, ಮುಳ್ಳು, ಕಸಗಳನ್ನು ಗಮನಿಸಿ ಸರಿಯಾದ ಸ್ಥಳದಲ್ಲಿ ಹೆಜ್ಜೆಯಿಡಬೇಕು. ಕುಡಿಯುವ ನೀರು ಶುದ್ಧವಾಗಿರಬೇಕು. ಅದನ್ನು ಶೋಧಿಸಿ ಕುಡಿಯಬೇಕು. ಆಡುವ ಮಾತು ಸತ್ಯಾದಿ ಶಾಸ್ತ್ರಸಂಮತ ಗುಣಗಳಿಂದ ಕೂಡಿರಬೇಕು. ನಮ್ಮ ಮನಸ್ಸು ಸರಿಯೆಂದು ಒಪ್ಪಿದ ಕೆಲಸವನ್ನು ಮಾಡಬೇಕೇ ಹೊರತು ಬೇರೆಯವರನ್ನು ಮೆಚ್ಚಿಸಲು ಮಾಡಬಾರದು.॥೨॥

सुखार्थी वा त्यजेद्विद्यां विद्यार्थी वा त्यजेत् सुखम्।
सुखार्थिन: कुतो विद्या विद्यार्थिन: कुतो सुखम्॥

ಸುಖವನ್ನು ಬಯಸುವವನು ವಿದ್ಯೆಯನ್ನು ತ್ಯಜಿಸಬೇಕು ಅಥವಾ ವಿದ್ಯೆಯನ್ನು ಬಯಸುವವನು ಸುಖವನ್ನು ಬಿಡಬೇಕು. ಸುಖವನ್ನು ಆಸೆಪಡುವವನಿಗೆ ವಿದ್ಯೆಯಾಗಲೀ, ವಿದ್ಯೆಯ ಅಪೇಕ್ಷೆಯಿರುವವನಿಗೆ ಸುಖೋಪಭೋಗಗಳಾಗಲೀ ಸಾಧ್ಯವಿಲ್ಲ.

ಸುಖ ಮತ್ತು ವಿದ್ಯೆ ಇವೆರಡೂ ಪರಸ್ಪರ ವಿರುದ್ಧವಾದವುಗಳು. ವಿದ್ಯೆಯು ಒಂದು ರೀತಿಯ ಸಾಧನೆ. ಕಷ್ಟಪಟ್ಟು ನಿದ್ರೆ, ಸುಖಗಳನ್ನು ತ್ಯಜಿಸಿ ತಪಸ್ಸಿನಂತೆ ಸಾಧನೆ ಮಾಡಿದವನಿಗೆ ಅದು ಒಲಿಯುತ್ತದೆ. ಸುಖಾಭಿಲಾಷೆಯಿದ್ದು ಅವುಗಳ ಜೊತೆ ವಿದ್ಯೆಯನ್ನು ಕಲಿಯುತ್ತೇನೆಂದರೆ ಅದು ಸಾಧ್ಯವಾಗುವುದಿಲ್ಲ. ॥೩.॥

कवय: किं न पश्यन्ति किं न कुर्वन्ति योषित:।
मद्यपा: किं न जल्पन्ति किं न भक्षन्ति वायसा:॥

ಕವಿಗಳು ಏನನ್ನು ತಾನೇ ನೋಡಲಾರರು? ಪತ್ನಿಯರು ಏನನ್ನು ತಾನೇ ಮಾಡಲಾರರು? ಮದ್ಯಪಾನ ಮಾಡಿರುವವರು ಏನನ್ನು ತಾನೇ ಹರಟದಿರುತ್ತಾರೆ? ಕಾಗೆಯು ಏನನ್ನು ತಾನೇ ತಿನ್ನುವುದಿಲ್ಲ.

'ರವಿ ಕಾಣದ್ದನ್ನು ಕವಿ ಕಂಡ' ಎಂಬ ಗಾದೆ ಮಾತಿದೆ. ಕವಿಯು ಸೂಕ್ಷ್ಮಾತಿ ಸೂಕ್ಷ್ಮವಾದ, ಇತರರು ಕಾಣದ ಅರ್ಥಗಳನ್ನು ಕಾಣಬಲ್ಲನು. ಅದಕ್ಕಾಗಿಯೇ 'ಕವಿರೇವ ಪ್ರಜಾಪತಿಃ' ಎಂದು ಹೇಳುತ್ತಾರೆ. ಮನೆಯಲ್ಲಿ ಗೃಹಿಣಿಯು ಸಮಸ್ತ ಕಾರ್ಯಗಳನ್ನೂ ನಿರ್ವಹಿಸಿ, ಎಲ್ಲರ ಯೋಗಕ್ಷೇಮವನ್ನೂ ಗಮನಿಸುತ್ತಾಳೆ. ಮದ್ಯಪಾನ ಮಾಡಿ ಅಮಲಿನಲ್ಲಿರುವ ವ್ಯಕ್ತಿಯು ವಿವೇಚನಾ ಶಕ್ತಿಯನ್ನು ಕಳೆದುಕೊಂಡು, ಬಾಯಿಗೆ ಬಂದಂತೆ ಹರಟುತ್ತಾನೆ. ಕಾಗೆಯು ಹಾಗೆಯೇ ಕಂಡುದನ್ನೆಲ್ಲ ತಿಂದುಬಿಡುತ್ತದೆ.

ಮೊದಲ ಭಾಗದಲ್ಲಿ ಕವಿ ಮತ್ತು ಸ್ತ್ರೀಯರ ಬಗ್ಗೆ ಒಳ್ಳೆಯ ಅಭಿಪ್ರಾಯದಿಂದ ಅವರು ಎಲ್ಲವನ್ನೂ ಸಾಧಿಸಬಲ್ಲರೆಂದು ಹೇಳಿದರೆ, ಉತ್ತರಾರ್ಧದಲ್ಲಿ ಅದೇ ರೀತಿಯ ವಾಕ್ಯವನ್ನು ಋಣಾತ್ಮಕವಾದ ಅರ್ಥದಲ್ಲಿ ಬಳಸಿದೆ. ॥೪॥

रंकं करोति राजानं राजानं रंकमेव च।
धनिनं निर्धनं चैव निर्धनं धनिनं विधिः॥

ಅದೃಷ್ಟವೆಂಬುದು ವಿಚಿತ್ರವಾದುದು. ದೀನನನ್ನು ರಾಜನಾಗಿ ಮಾಡಬಲ್ಲದು; ಹಾಗೆಯೇ ರಾಜನನ್ನು ಕ್ಷಣಮಾತ್ರದಲ್ಲಿ ಬಡವನನ್ನಾಗಿಸುವುದು. ಧನವಂತನನ್ನು ಧನಹೀನನನ್ನಾಗಿ ಮಾಡಿದರೆ ಧನಹೀನನನ್ನು ಧನವಂತನನ್ನಾಗಿ ಮಾಡುತ್ತದೆ.

'ನೆನ್ನೆ ಪಾಲಕ ಇಂದು ಸೇವಕ ಒಂದು ಕ್ಷಣದಲ್ಲಿ ಎಲ್ಲಾ ತಕಮಕ' ಎಂದು ಹರಿಶ್ಚಂದ್ರನ ವಿಷಯದಲ್ಲಿ ಹೇಳಿದಂತೆ ಅದೃಷ್ಟದ ಆಟವು ವಿಚಿತ್ರವಾಗಿರುತ್ತದೆ. ॥೫॥

लुब्धानां याचकः शत्रुर्मूर्खाणां बोधकः रिपुः।
जारस्त्रीणां पतिः शत्रुश्चोराणां चन्द्रमा रिपुः॥

ಲೋಭಿಯಾದವನಿಗೆ ಬಿಕ್ಷುಕನು ಶತ್ರುವು. ಮೂರ್ಖರಿಗೆ ಬೋಧನೆ ಮಾಡುವವನು ಶತ್ರುವು. ವ್ಯಭಿಚಾರಿಣಿಯರಿಗೆ ಪತಿಯು ಶತ್ರುವು. ಕಳ್ಳರಿಗೆ ಚಂದ್ರನು ಶತ್ರುವು.

ಲೋಭಿಯಾದವನಿಗೆ ದಾನಮಾಡುವ ಇಚ್ಛೆಯಿರುವುದಿಲ್ಲ. ಅವನನ್ನು ಭಿಕ್ಷುಕನು ಏನಾದರೂ ಕೊಡುವಂತೆ ಪೀಡಿಸುತ್ತಾನೆ. ಆದುದರಿಂದ ಲೋಭಿಗೆ ಭಿಕ್ಷುಕನು ಶತ್ರುವಿನಂತೆ ಕಾಣುತ್ತಾನೆ. ಮೂರ್ಖರಿಗೆ ತಾವು ಮಾಡುತ್ತಿರುವುದೇ ಸರಿಯೆಂಬ ಭಾವನೆಯಿರುತ್ತದೆ. ಅವರು ಮಾಡುತ್ತಿರುವುದು ಮೂರ್ಖತನದ ಕೆಲಸವೆಂದು ಯಾರಾದರೂ ಉಪದೇಶ ಮಾಡಿದರೆ ಅವರಿಗೆ ಕೋಪಬಂದು ಉಪದೇಶಕರನ್ನು ಶತ್ರುಗಳಂತೆ ಭಾವಿಸುತ್ತಾರೆ. ವ್ಯಭಿಚಾರಿಣಿಯಾದವಳು ತನ್ನ ಪ್ರಿಯಕರನನ್ನು ಸಂಧಿಸುವ ಆತುರದಲ್ಲಿರುತ್ತಾಳೆ. ಅದನ್ನು ಪತಿಯು ವಿರೋಧಿಸುವುದರಿಂದ ಅವನನ್ನು ತನ್ನ ಶತ್ರುರೂಪವಾಗಿ ಕಾಣುತ್ತಾಳೆ. ಕಳ್ಳರಿಗೆ ಕಳ್ಳತನ ಮಾಡಲು ಕತ್ತಲೆಯಿದ್ದರೆ ಅನುಕೂಲ. ಚಂದ್ರನ ಬೆಳಕಿನಲ್ಲಿ ತಮ್ಮನ್ನು ಯಾರಾದರೂ ನೋಡಿ ಗುರ್ತಿಸುವರೆಂದು ಅವರಿಗೆ ಭಯ. ಹಾಗಾಗಿ ಚಂದ್ರನು ಅವರ ಶತ್ರುವು. ॥೬॥

येषां न विद्या न तपो दानं न ज्ञानं न शीलं न गुणो न धर्मः।

**ते मर्त्यलोके भुवि भारभूता मनुष्यरूपेण मृगाश्चरन्ति॥**

**ಯಾರಲ್ಲಿ ವಿದ್ಯೆ, ತಪಸ್ಸು, ದಾನ, ಜ್ಞಾನ, ಶೀಲ, ಗುಣ ಮತ್ತು ಧರ್ಮಗಳು ಇಲ್ಲವೋ ಅವರು ಭೂಮಿಗೆ ಭಾರಮಾತ್ರರು. ಅವರು ಮನುಷ್ಯರೂಪದಲ್ಲಿ ಓಡಾಡುತ್ತಿರುವ ಮೃಗಗಳು.**

ಭೂಮಿಯಲ್ಲಿ ಮನುಷ್ಯನಾಗಿ ಹುಟ್ಟಿದ ಮೇಲೆ ವಿದ್ಯೆ, ತಪಸ್ಸು ಮುಂತಾದ ವಿಶೇಷ ಗುಣಗಳನ್ನು ಆರ್ಜಿಸಬೇಕು. ಇಲ್ಲದಿದ್ದರೆ ಮನುಷ್ಯರಾಗಿ ಹುಟ್ಟಿದ್ದು ವ್ಯರ್ಥ. ಅಂತಹವರು ಕೇವಲ ಭೂಮಿಗೆ ಭಾರ. ಅವರಿಗೂ ಪಶುಪ್ರಾಣಿಗಳಿಗೂ ಯಾವುದೇ ವ್ಯತ್ಯಾಸವಿಲ್ಲ. ॥೭॥

**अन्त:सारविहीनानामुपदेशो न जायते।**
**मलयाचलसंसर्गात् न वेणुश्चन्दनायते॥**

ಒಳಗೆ ಸಾರವಿಲ್ಲದ ಅಂದರೆ ಪ್ರತಿಭೆಯಿಲ್ಲದವರಿಗೆ ಉಪದೇಶ ಮಾಡುವುದು ವ್ಯರ್ಥವು. ಮಲಯ ಪರ್ವತದಲ್ಲಿ ಗಂಧದ ಮರಗಳು ಬಹಳ ಬೆಳೆಯುತ್ತವೆ. ಆದರೆ ಅವುಗಳ ಜೊತೆಯಲ್ಲಿಯೇ ಬೆಳೆಯುವ ಬಿದಿರು ಗಂಧದ ಮರದ ಸಂಪರ್ಕದಿಂದ ಸುಗಂಧಿತವಾಗುವುದಿಲ್ಲ.

ಉಪದೇಶವನ್ನು ಅರ್ಥಮಾಡಿಕೊಳ್ಳುವವರಿಗೆ ಮತ್ತು ಅದರಂತೆ ನಡೆಯುವವರಿಗೆ ಉಪದೇಶ ಮಾಡಿದರೆ ಸಾರ್ಥಕವು. ಹಾಗಿಲ್ಲದವರಿಗೆ ಉಪದೇಶವು ವ್ಯರ್ಥ. ಅದಕ್ಕೆ ಒಂದು ದೃಷ್ಟಾಂತವನ್ನು ಕೊಟ್ಟಿದೆ. ಮಲಯ ಪರ್ವತದಲ್ಲಿ ಬೇಕಾದಷ್ಟು ಗಂಧದ ಮರಗಳಿದ್ದರೂ ಅವುಗಳ ಜೊತೆ ಇರುವ ಬಿದಿರು ಗಂಧಯುತವಾಗುವುದಿಲ್ಲ. ॥೮॥

**यस्य नास्ति स्वयं प्रज्ञा शास्त्रं तस्य करोति किम्।**
**लोचनाभ्यां विहीनस्य दर्पण: किं करिष्यति॥**

ಯಾರಿಗೆ ಸ್ವಂತ ಬುದ್ಧಿಶಕ್ತಿಯಿಲ್ಲವೋ ಅವರಿಗೆ ಶಾಸ್ತ್ರಗಳಿಂದ ಏನು ಪ್ರಯೋಜನ? ಕಣ್ಣುಗಳೇ ಇಲ್ಲದವನಿಗೆ ಕನ್ನಡಿಯಿಂದ ಉಪಯೋಗವೇನು?

ಶಾಸ್ತ್ರಗಳನ್ನು ಓದಿ ಅಥವಾ ಕೇಳಿ ಅರ್ಥಮಾಡಿಕೊಳ್ಳುವ ಸಾಮರ್ಥ್ಯವಿರುವವನಿಗೆ ಅದರಲ್ಲಿರುವ ವಿಷಯಗಳು ಮಾರ್ಗದರ್ಶಕವಾಗಬಲ್ಲವು. ಇಲ್ಲದಿದ್ದರೆ ಶಾಸ್ತ್ರಗಳನ್ನು ಓದುವುದು ವ್ಯರ್ಥ. ಕಣ್ಣುಗಳು ಇರುವವನು ಕನ್ನಡಿಯಲ್ಲಿ ತನ್ನ ಪ್ರತಿಬಿಂಬವನ್ನು ನೋಡಿಕೊಂಡು ಅಲಂಕರಿಸಿಕೊಳ್ಳಬಲ್ಲನು. ಕಣ್ಣುಗಳೇ ಇಲ್ಲದಿದ್ದರೆ ಕನ್ನಡಿಯಿಂದ ಉಪಯೋಗವಿಲ್ಲ. ॥೯॥

दुर्जनं सज्जनं कर्तुमुपायो न हि भूतले।
अपानं शतधा धौतं न श्रेष्ठमिन्द्रियं भवेत्॥

ದುರ್ಜನರನ್ನು ಸಜ್ಜನರನ್ನಾಗಿ ಮಾಡುವ ಯಾವ ಉಪಾಯವೂ ಭೂತಲದಲ್ಲಿಲ್ಲ. ಗುದದ್ವಾರವನ್ನು ನೂರುಸಲ ತೊಳೆದರೂ ಅದು ಶ್ರೇಷ್ಠವಾದ ಇಂದ್ರಿಯವಾಗುವುದಿಲ್ಲ.

ದುರ್ಜನರ ಸ್ವಭಾವವೇ ದುಷ್ಟವಾದುದು. ಸ್ವಭಾವವನ್ನು ಬದಲಾಯಿಸುವುದು ಅಸಂಭವ. ಅದಕ್ಕೆ ಗುದದ್ವಾರದ ಉದಾಹರಣೆಯನ್ನು ಇಲ್ಲಿ ಕೊಡಲಾಗಿದೆ. ॥೧೦॥

आत्मद्वेषात् भवेन्मृत्युः परद्वेषात् धनक्षयः।
राजद्वेषात् भवेन्नाशो ब्रह्मद्वेषात् कुलक्षयः॥

ಆತ್ಮದ್ವೇಷದಿಂದ ಎಂದರೆ ತನ್ನನ್ನೇ ತಾನು ದ್ವೇಷಿಸುವುದು ಮೃತ್ಯುವಿಗೆ ಕಾರಣ. ಆಪ್ತದ್ವೇಷವೆಂಬ ಪಾಠಾಂತರದಲ್ಲಿ ಆಪ್ತರಾದವರನ್ನು ದ್ವೇಷಿಸಿ, ಅವರ ಉಪದೇಶಗಳನ್ನು ತಿರಸ್ಕರಿಸಿದರೆ ಮೃತ್ಯುವಿಗೆ ಆಹ್ವಾನ ನೀಡಿದಂತೆ. ಪರರನ್ನು ದ್ವೇಷಿಸುವುದರಿಂದ ಧನನಾಶವಾಗುತ್ತದೆ. ರಾಜನನ್ನು ದ್ವೇಷಿಸುವುದು ನಾಶಕ್ಕೆ ಕಾರಣವು. ಬ್ರಾಹ್ಮಣರನ್ನು ದ್ವೇಷಿಸಿದರೆ ವಂಶನಾಶವಾಗುತ್ತದೆ.

ತನ್ನನ್ನೇ ತಾನು ದ್ವೇಷಿಸುವವನು ಆತ್ಮ ಹತ್ಯೆ ಮಾಡಿಕೊಳ್ಳುವ ಸಂಭವ ಹೆಚ್ಚು. ಪರರನ್ನು ದ್ವೇಷಿಸುವವನು ಅವರಿಗೆ ತೊಂದರೆ ಕೊಡಲು ಅನೇಕ ಉಪಾಯಗಳನ್ನು ಮಾಡುತ್ತಾನೆ. ಆದರಿಂದ ಧನವ್ಯಯವಾಗುತ್ತದೆ. ರಾಜನನ್ನು ದ್ವೇಷಿಸುವವನನ್ನು ರಾಜನು ಬಂಧನದಲ್ಲಿಡಬಹುದು ಇಲ್ಲವೇ ನಾಶಮಾಡಬಹುದು. ಬ್ರಾಹ್ಮಣರು ದುಃಖಿತರಾದರೆ ಅವರ ಶಾಪದಿಂದ ವಂಶನಾಶವಾಗುವುದು. ॥೧೧॥

वरं वनं व्याघ्रगजेन्द्रसेवितं द्रुमालयं पत्रफलाम्बुभोजनम्।
तृणेषु शय्या शतजीर्णवल्कलं न बन्धुमध्ये धनहीनजीवनम्॥

ಹುಲಿ, ಆನೆಗಳಿಂದ ತುಂಬಿರುವ ಕಾಡಿನಲ್ಲಿ ವಾಸಿಸುವುದು ಮೇಲು. ಮರದ ಕೆಳಗೆ ಪತ್ರ, ಹಣ್ಣು, ನೀರು ಮುಂತಾದವುಗಳನ್ನು ಸೇವಿಸುತ್ತಾ ಇದ್ದರೂ ಚಿಂತೆಯಿಲ್ಲ. ಹುಲ್ಲೇ ಹಾಸಿಗೆಯಾದರೂ, ಹರಕಲು ಮತ್ತು ಜೀರ್ಣವಾದ ನಾರುಮಡಿಯನ್ನು ಧರಿಸಿದರೂ ಸಾಕು. ಆದರೆ ಬಂಧುಗಳ ಮಧ್ಯೆ ನಿರ್ಧನವಾಗಿ ಜೀವಿಸುವುದು ಮಾತ್ರ ಬೇಡ.

ಬಂಧುಗಳ ಮಧ್ಯದಲ್ಲಿ ಬಡತನದಿಂದ ಜೀವಿಸುವುದುಹಲವಾರು ಅವಮಾನಕರವಾದ ಪ್ರಸಂಗಗಳಿಗೆ ದಾರಿಮಾಡಿಕೊಡುತ್ತದೆ. ಅದಕ್ಕಿಂತ ಕಾಡಿನಲ್ಲಿ

ಯಾರೂ ಕಾಣದಂತೆ ಕಷ್ಟದ ಜೀವನ ನಡೆಸುವುದು ಉತ್ತಮವೆಂದು ಶ್ಲೋಕದ ಅಭಿಪ್ರಾಯವು. ॥೧೨॥

विप्रो वृक्षस्तस्य मूलं च संध्या
वेदाः शाखा धर्मकर्माणि पत्रम्।
तस्मान्मूलं यत्नतो रक्षणीयं
छिन्ने मूले नैव शाखा न पत्रम्॥

ಬ್ರಾಹ್ಮಣರು ಸನಾತನ ಧರ್ಮದ ವೃಕ್ಷವಿದ್ದಂತೆ. ಸಂಧ್ಯಾವಂದನಾದಿ ನಿತ್ಯಕರ್ಮಗಳು ಅದರ ಬೇರು. ವೇದಗಳು ಅದರ ಕೊಂಬೆಗಳು. ಧಾರ್ಮಿಕ ಕೆಲಸಗಳು ಎಲೆಗಳು. ಆದುದರಿಂದ ಮೂಲವನ್ನು ಪ್ರಯತ್ನ ಪೂರ್ವಕವಾಗಿ ರಕ್ಷಿಸಬೇಕು. ಮೂಲವೇನಾದರೂ ಹಾಳಾದರೆ ಕೊಂಬೆಗಳಾಗಲೀ, ಎಲೆಗಳಾಗಲೀ ಇರುವುದಿಲ್ಲ.

ಧರ್ಮ ಮತ್ತು ಅದರ ಸಂರಕ್ಷಣೆಯ ಪ್ರಾಧಾನ್ಯತೆಯನ್ನು ಈ ಶ್ಲೋಕದಲ್ಲಿ ಹೇಳಿರುತ್ತಾರೆ. ಬ್ರಾಹ್ಮಣರೇ ಧರ್ಮದ ಬುನಾದಿ. ಅವರು ಮಾಡುವ ನಿತ್ಯಕರ್ಮಗಳು ವೇದಾಭ್ಯಾಸ ಧಾರ್ಮಿಕ ಕೆಲಸಗಳಿಂದ ಸಮಾಜವು ರಕ್ಷಿಸಲ್ಪಡುತ್ತದೆ. ಆದ್ದರಿಂದ ಬ್ರಾಹ್ಮಣರನ್ನು ಗೌರವಿಸಬೇಕು. ಇಲ್ಲದಿದ್ದರೆ ಸನಾತನ ಧರ್ಮದ ರಕ್ಷಣೆಯಾಗದು.॥೧೩॥

माता च कमलादेवी पिता देवो जनार्दनः।
बान्धवाः विष्णुभक्ताश्च स्वदेशो भुवनत्रयम्॥

ತಾಯಿಯು ಮಹಾಲಕ್ಷ್ಮಿಯು. ತಂದೆಯೇ ನಾರಾಯಣ ಸ್ವರೂಪನು. ಬಂಧುಬಾಂಧವರುಗಳೇ ವಿಷ್ಣುಭಕ್ತರು. ತಾಯ್ನಾಡು ಮೂರು ಲೋಕಗಳಿಗೆ ಸಮ.

ತಾಯಿ-ತಂದೆ-ಬಂಧುಗಳನ್ನು ನೋಡಬೇಕಾದ ದೃಷ್ಟಿಯನ್ನು ಇಲ್ಲಿ ಹೇಳಿದೆ. ಅವರನ್ನು ಸಾಕ್ಷಾತ್ ಲಕ್ಷ್ಮೀನಾರಾಯಣ ಸ್ವರೂಪದಿಂದ ಆರಾಧಿಸಿದಾಗ, ಬಂಧುಗಳೆಲ್ಲ ವಿಷ್ಣುಭಕ್ತರೇ ಆಗುತ್ತಾರೆ. ತಾಯ್ನಾಡನ್ನು ಕೂಡ ಗೌರವದಿಂದ ಕಾಣಬೇಕು. ॥೧೪॥

एकवृक्षसमारूढा नाना वर्णा विहंगमाः।
प्रभाते दशसु दिक्षु तत्र का परिवेदना॥

ಒಂದೇ ಮರವನ್ನು ಆಶ್ರಯಿಸಿರುವ ಅನೇಕ ಜಾತಿಯ ಪಕ್ಷಿಗಳು ಬೆಳಗಾದ ಕೂಡಲೇ ಹತ್ತು ದಿಕ್ಕುಗಳಿಗೆ ಹಾರಿಹೋಗುತ್ತವೆ. ಅದಕ್ಕೆ ದುಃಖವೇತಕ್ಕೆ ?

ಪೂರ್ವಕರ್ಮ ಸಂಯೋಗದಿಂದ ಹೆಂಡತಿ- ಮಕ್ಕಳು-ಮಿತ್ರರು ಮುಂತಾಗಿ ಒಂದೆಡೆ ಸೇರುತ್ತೇವೆ. ಕಾಲಕ್ರಮೇಣ ಅವರವರ ಕರ್ಮದಂತೆ ದೂರ ಹೋಗಲೂ ಬಹುದು. ಎರಡೂ ಆಕಸ್ಮಿಕವಾದುದರಿಂದ ಸೇರಿದಾಗ ಸಂತೋಷವನ್ನಾಗಲೀ, ಬೇರೆಯಾದಾಗ ದುಃಖವನ್ನಾಗಲೀ ಅನುಭವಿಸುವ ಅವಶ್ಯಕತೆಯಿಲ್ಲವೆಂಬ ಭಾವವು.॥೧೫॥

बुद्धिर्यस्य बलं तस्य निर्बुद्धेस्तु कुतो बलम्।
वने सिंहो मदोन्मत्तः शशकेन निपातितः॥

ಯಾರು ಬುದ್ಧಿವಂತರೋ ಅವರೇ ಬಲಶಾಲಿಗಳು. ಬುದ್ಧಿಯಿಲ್ಲದವನಿಗೆ ಬಲವಿದ್ದರೂ ಪ್ರಯೋಜನವಿಲ್ಲ. ಅದಕ್ಕೊಂದು ಕಥೆಯ ಉದಾಹರಣೆಯನ್ನು ಕೊಡುತ್ತಾರೆ.

ಸಿಂಹವೊಂದು ಕಾಡಿನಲ್ಲಿ ಪ್ರಾಣಿಗಳನ್ನು ಸುಮ್ಮನೇ, ಕೊಂದು ಹಿಂಸಿಸುತ್ತಿತ್ತು. ಪ್ರಾಣಿಗಳೆಲ್ಲ ಸೇರಿ ದಿನಕ್ಕೊಂದು ಪ್ರಾಣಿಯನ್ನು ಅದರ ಬಳಿಗೆ ಕಳಿಸುವಂತೆ ಸಂಧಿ ಮಾಡಿಕೊಂಡವು. ಒಂದು ದಿನ ಮೊಲದ ಸರದಿ. ಬೇಕೆಂದೇ ತಡವಾಗಿ ಹೋಯಿತು. ಕೋಪಗೊಂಡಿದ್ದ ಸಿಂಹದ ಬಳಿ ಹೋಗಿ, ದಾರಿಯಲ್ಲಿ ಮತ್ತೊಂದು ಸಿಂಹ ತನ್ನನ್ನು ತಡೆದುದಾಗಿಯೂ ಅದರಿಂದ ಬಿಡಿಸಿಕೊಂಡು ಬರಲು ತಡವಾಯಿತೆಂದು ಹೇಳಿತು. ಇನ್ನೊಂದು ಸಿಂಹವನ್ನು ತೋರಿಸುವೆನೆಂದು ಭಾವಿಯ ಬಳಿ ಸಿಂಹವನ್ನು ಕರೆದೊಯ್ದು ಬಗ್ಗಿ ನೋಡಲು ಹೇಳಿತು. ಭಾವಿಯ ನೀರಿನಲ್ಲಿ ತನ್ನ ಪ್ರತಿಬಿಂಬವನ್ನೇ ಇನ್ನೊಂದು ಸಿಂಹವೆಂದು ಭಾವಿಸಿ, ಈ ಸಿಂಹ ಅದನ್ನು ಕೊಲ್ಲಲು ಬಾವಿಗೆ ನೆಗೆದು ನೀರಿನಲ್ಲಿ ಮುಳುಗಿ ಪ್ರಾಣಬಿಟ್ಟಿತು. ಹೀಗೆ ಸಣ್ಣ ಮೊಲ ತನ್ನ ಬುದ್ಧಿಯಿಂದ ಸಿಂಹವನ್ನೇ ಕೊಂದಿತು. ॥೧೬॥



का चिन्ता मम जीवने यदि हरिर्विश्वम्भरो गीयते
नो चेदर्भकजीवनाय जननीस्तन्यं कथं निर्मयेत्।
इत्यालोच्य मुहुर्मुहुर्यदुपते लक्ष्मीपते केवलं
त्वत्पादाम्बुजसेवनेन सततं कालो मया नीयते॥

ವಿಶ್ವವನ್ನೇ ಪಾಲಿಸುವ ಹರಿಯು ಇರುವಾಗ ನನ್ನ ಜೀವನದಲ್ಲಿ ಚಿಂತೆಯೆಲ್ಲಿದೆ? ಹಾಗಿಲ್ಲದಿದ್ದರೆ ಮಗುವಿನ ಪಾಲನೆಗಾಗಿ ತಾಯಿಯ ಎದೆಹಾಲನ್ನು ಹೇಗೆ ನಿರ್ಮಿಸುತ್ತಿದ್ದನು? ಈ ರೀತಿ ಮತ್ತೆ ಮತ್ತೆ ಯೋಚಿಸಿ, ಕೇವಲ ಯದುಪತಿಯಾದ ಲಕ್ಷ್ಮೀಪತಿಯೆ, ನಿನ್ನ ಪಾದಕಮಲಗಳನ್ನು ಸದಾ ಸೇವಿಸುವುದರಲ್ಲಿಯೇ ನನ್ನ ಕಾಲವು

ಕಳೆಯಲ್ಪಡುತ್ತದೆ.

ಶ್ರೀಹರಿಯು ಎಲ್ಲರನ್ನೂ ಪಾಲಿಸಲು ಕಟಿಬದ್ಧನಾಗಿದ್ದಾನೆ. 'ಹುಟ್ಟಿಸಿದ ದೇವರು ಹುಲ್ಲು ಮೇಯಿಸುವುದಿಲ್ಲ' ಎಂಬ ಗಾದೆ ಮಾತಿದೆ. ಮಗು ಹುಟ್ಟುವುದರಲ್ಲಿಯೇ ಅದರ ಪೋಷಣೆಗಾಗಿ ತಾಯಿಯ ಸ್ತನಗಳಲ್ಲಿ ಹಾಲು ತುಂಬುತ್ತದೆ. ಇದನ್ನೆಲ್ಲ ಮಾಡುವವನಾದರೂ ಆ ಜಗತ್ಪಾಲಕನೇ ಅಲ್ಲವೆ? ಅದ್ದರಿಂದ ನಿಶ್ಚಿಂತೆಯಾಗಿ ಅವನನ್ನು ನಂಬಿ ಸೇವಿಸಿದರೆ, ಅವನು ನಮ್ಮ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಾನೆ. ॥೧೭॥

गीर्वाणवाणीषु विशिष्टबुद्धिस्तथापि भाषान्तरलोलुपोऽहम्।
यथा सुराणाममृते स्थितेऽपि स्वर्गांगनानामधरासवे रुचिः॥

ಸಂಸ್ಕೃತ ಭಾಷೆಯು ಮಧುರವಾದುದು. ಅದರಲ್ಲಿ ಓದುವ ಸಾಮರ್ಥ್ಯವಿದ್ದರೂ ನಾನು ಭಾಷಾಂತರಗಳಲ್ಲಿ ಆಸಕ್ತನಾಗಿದ್ದೇನೆ. ದೇವತೆಗಳಿಗೆ ಅಮೃತದ ಸವಿಯೇ ದೊರಕಿದ್ದರೂ ಕೂಡ ಅಪ್ಸರ ಸ್ತ್ರೀಯರ ಅಧರಾಮೃತವನ್ನು ಬಯಸುವಂತೆ ಇದು.

ಯಾವುದೇ ಕೃತಿಯನ್ನು ಮೂಲಭಾಷೆಯಲ್ಲಿ ಓದಿದರೆ ಸವಿ ಹೆಚ್ಚು. ಅದರಲ್ಲಿಯೂ ಅಮೃತದಂತಹ ಸಂಸ್ಕೃತಭಾಷೆ ಅರ್ಥವಾಗುವುದಾದರೆ ಅದರಲ್ಲಿನ ಸವಿ ಉಳಿದ ಭಾಷೆಗಳಲ್ಲಿ ದೊರಕುವುದಿಲ್ಲ. ಭಾಷಾಂತರಗಳನ್ನು ಓದುವುದು, ಅಮೃತವನ್ನು ಸವಿಯುವ ಅವಕಾಶವಿದ್ದರೂ ವೇಶ್ಯೆಯರ ಅಧರಾಮೃತಕ್ಕೆ ಆಸೆ ಪಟ್ಟಂತೆ. ॥೧೮॥

अन्नाद्दशगुणं पिष्टं पिष्टाद्दशगुणं पयः।
पयसोऽष्टगुणं मांसं मांसाद्दशगुणं घृतम्॥

ಅನ್ನಕ್ಕಿಂತ ಹತ್ತುಪಟ್ಟು ಸಾರವು ಹಿಟ್ಟಿನಲ್ಲಿರುವುದು. ಹಿಟ್ಟಿಗಿಂತ ಹಾಲು ಹತ್ತರಷ್ಟು ಸಾರಯುತವಾದುದು. ಹಾಲಿಗಿಂತ ಮಾಂಸದಲ್ಲಿ ಎಂಟು ಪಟ್ಟು ಬಲ ಹೆಚ್ಚು. ಮಾಂಸಕ್ಕಿಂತಲೂ ತುಪ್ಪವು ಹತ್ತರಷ್ಟು ಪೌಷ್ಟಿಕವಾದುದು.

ಇದರಲ್ಲಿ ತುಪ್ಪದ ವಿಶೇಷವನ್ನು ಹೇಳಿದೆ. 'ಆಯುರ್ಘೃತಂ' ಎಂದು ಹಿಂದಿನವರೂ ಹೇಳುತ್ತಿದ್ದರು. ಅನ್ನ, ಹಿಟ್ಟು, ಹಾಲು, ಮಾಂಸ ಮತ್ತು ತುಪ್ಪಗಳು ಕ್ರಮವಾಗಿ ಅಧಿಕವಾದ ಪೌಷ್ಟಿಕಾಂಶವುಳ್ಳ ಆಹಾರಗಳು. ॥೧೯॥

शाकेन रोगा वर्धन्ते पयसा वर्धते तनुः।
घृतेन वर्धते वीर्यं मांसान्मांसं प्रवर्धते॥

ಕೇವಲ ತರಕಾರಿಗಳ ಸೇವನೆಯಿಂದ ರೋಗಗಳು ಹೆಚ್ಚುವುವು. ಹಾಲಿನಿಂದ ದೇಹ ಬೆಳೆಯುವುದು. ತುಪ್ಪದಿಂದ ಶಕ್ತಿ ಹೆಚ್ಚುವುದು. ಮಾಂಸದಿಂದ ಮಾಂಸಖಂಡಗಳು ವರ್ಧಿಸುವುವು.

ಸಂತುಲಿತ ಆಹಾರ ಸೇವನೆಯು ಪ್ರಾಮುಖ್ಯವನ್ನು ಇದರಲ್ಲಿ ಹೇಳಲಾಗಿದೆ. ತರಕಾರಿಗಳನ್ನು ಮಾತ್ರ ತಿಂದರೆ ದೇಹಕ್ಕೆ ಬೇಕಾದ ಎಲ್ಲ ಪೋಷಕಾಂಶಗಳೂ ಸಿಕ್ಕುವುದಿಲ್ಲ. ತರಕಾರಿ, ಹಾಲು, ತುಪ್ಪ, ಮಾಂಸ ಇವು ಒಂದೊಂದು ಗುಣವನ್ನು ಹೊಂದಿವೆ. ಎಲ್ಲವನ್ನೂ ಸಮತೂಕದ ಅಹಾರವಾಗಿ ಸೇವಿಸಿದರೆ ಆರೋಗ್ಯ ವರ್ಧಿಸುತ್ತದೆ. ||೨೦||

## ಅಧ್ಯಾಯದ ಸಾರಾಂಶ

ವಿದ್ಯಾ ಧನವನ್ನು ಶ್ರೇಷ್ಠ ಧನವೆಂದು ಆಚಾರ್ಯರು ತಿಳಿಸಿರುವರು. ವಿದ್ಯೆಯಿಲ್ಲದ ವ್ಯಕ್ತಿ ನಿರ್ಧನನು ಎನ್ನುವರು.

ಮನುಷ್ಯನು ಕೈಗೊಳ್ಳುವ ಕಾರ್ಯಗಳನ್ನು ಉತ್ತಮ ರೀತಿಯಲ್ಲಿ ಯೋಚಿಸಿ, ಪರಿಶೀಲಿಸಿ ಮಾಡುವುದು ಲೇಸು. ಅಂತೆಯೇ ಮುಂದಿನ ಹೆಜ್ಜೆ ಇಡುವ ಮುನ್ನ ಎಲ್ಲಿ ಅದನ್ನು ಸುರಕ್ಷಿತವಾಗಿರಿಸಬೇಕೆಂದು ವಿಚಾರಿಸುವುದು ಉತ್ತಮ. ಕಾರ್ಯಫಲದ ಮೇಲಣ ವಿಚಾರಗಳ ಬಗ್ಗೆ ತಿಳಿದು ಏಕಾಗ್ರತೆಯಿಂದ ಕೆಲಸ ಸಾಗಿಸುವುದು ಶ್ರೇಯಸ್ಕರ ಎನ್ನುವರು.

ವಿದ್ಯಾರ್ಥಿಗಳ ಕರ್ತವ್ಯದ ಬಗ್ಗೆ ಎಚ್ಚರಿಕೆ ನೀಡುತ್ತಾ ವಿದ್ಯಾರ್ಜನೆಗೆ ಹಂಬಲಿಸುವ ವಿದ್ಯಾರ್ಥಿಗಳು ಸುಃಖಾಪೇಕ್ಷೆ ಮಾಡಬಾರದೆನ್ನುವರು.

ಪರಮೇಶ್ವರನ ಕೃಪೆಯಿಂದ ವ್ಯಕ್ತಿ ಧನಿಕನಾಗಬಲ್ಲನು. ಜನ ಸಾಮಾನ್ಯನು ರಾಜನ ಹುದ್ದೆಗೂ ತಲುಪಬಲ್ಲನು. ಅರ್ಥಾತ್ ಸರ್ವೇಶ್ವರನು ಜಗತ್ಪಾಲಕ, ರಕ್ಷಕ, ಮತ್ತು ಜಗತ್ತಿನ ಧಾರಕ.

ಮನುಷ್ಯನು ವಿದ್ಯೆಯ ರೂಪದ ಧನಾರ್ಜನೆ ಮಾಡಬೇಕು. ದಾನವನ್ನು ನೀಡುವಂತಾಗಬೇಕು. ಧರ್ಮಾಭಿಲಾಷಿಯಾಗಬೇಕು. ಇಲ್ಲದ ಪಕ್ಷ, ಅವನು ಪಶು ಸಮಾನನಾಗಿದ್ದು ಜಗತ್ತಿಗೆ ಭಾರ ಎಂದು ಆಚಾರ್ಯರು ಸ್ಪಷ್ಟಪಡಿಸಿರುವರು.

ವ್ಯಕ್ತಿ ತನ್ನಲ್ಲಿ ಗುಪ್ತ ಶಕ್ತಿಗಳ ಬಗ್ಗೆ ಅರಿತಿರಬೇಕು. ಇಲ್ಲವಾದಲ್ಲಿ ಬುದ್ಧಿ ರಹಿತನಾಗಿದ್ದರೆ, ಶಾಸ್ತ್ರಸಮ್ಮತ ಉಕ್ತಿಯಿಂತಲೂ ಅಂತಹವನ ಏಳಿಗೆಯಾಗಲಾರದು.



## ॥ ಅಧ್ಯಾಯ - ೧೧॥

**ಇನ್ನೊಬ್ಬರ ಕೆಲಸಗಳನ್ನು ಕೆಡಿಸುವವನು, ಸ್ವಾರ್ಥಿಯು, ಮೋಸಗಾರನು, ದ್ವೇಷ ಸಾಧಿಸುವವನು, ಕಪಟಿಯೂ ಆದ ಮನುಷ್ಯರು ಬೆಕ್ಕಿನ ಜಾತಿಗೆ ಸೇರಿದವನು.**

दातृत्वं प्रियवक्तृत्वं धीरत्वमुचितज्ञता।
अभ्यासेन न लभ्यन्ते चत्वार: सहजा गुणा:॥

ದಾನ ಮಾಡುವುದು, ಮಧುರವಾಗಿ ಮಾತನಾಡುವುದು, ಧೈರ್ಯ ಮತ್ತು ಉಚಿತವಾದುದನ್ನು ತಿಳಿಯುವುದು ಇವು ನಾಲ್ಕು ಸಹಜವಾದ ಗುಣಗಳು. ಇವುಗಳು ಅಭ್ಯಾಸದಿಂದ ಬರುವುದಿಲ್ಲ.

ದಾನ ಮಾಡುವುದು ಕೆಲವು ವ್ಯಕ್ತಿಗಳ ಸಹಜ ಸ್ವಭಾವ. ಮತ್ತೆ ಕೆಲವರು ಪ್ರಿಯವಾದ ಮಾತುಗಳನ್ನು ಆಡುತ್ತಾರೆ. ಹಾಗೆಯೇ ಉಳಿದೆರಡು ಗುಣಗಳು ಹುಟ್ಟಿನಿಂದಲೇ ಮನುಷ್ಯನಲ್ಲಿ ಬರುತ್ತವೆ. ಅವುಗಳನ್ನು ಅಭ್ಯಾಸಮಾಡಿ ಕಲಿತುಕೊಳ್ಳಲು ಸಾಧ್ಯವಿಲ್ಲ. ಪ್ರಕೃತಿದತ್ತವಾದ ಒಳ್ಳೆಯ ಗುಣಗಳಿವು. ॥೧॥

आत्मवर्गं परित्यज्य परवर्गं समाश्रयेत्।
स्वयमेव लयं याति यथा राजाऽन्यधर्मत:॥

ತನ್ನ ಬಂಧುಗಳನ್ನು ಬಿಟ್ಟು ಬೇರೆಯ ಗುಂಪಿನವರನ್ನು ಆಶ್ರಯಿಸುವವನು, ಅನ್ಯ ಧರ್ಮವನ್ನು ಆಶ್ರಯಿಸುವ ರಾಜನಂತೆ ತಾನೇ ನಾಶವನ್ನು ಹೊಂದುತ್ತಾನೆ.

ರಾಜನು ತನ್ನ ಧರ್ಮವನ್ನು ಚೆನ್ನಾಗಿ ಪರಿಪಾಲನೆ ಮಾಡಿದರೆ ಅಂದರೆ ಕ್ಷತ್ರಿಯ ಧರ್ಮವನ್ನು ಆಚರಿಸಿದರೆ ಉನ್ನತಿಗೆ ಬರುತ್ತಾನೆ. ಅದನ್ನು ಬಿಟ್ಟು ಬೇರೆ ಧರ್ಮವನ್ನು ಆಶ್ರಯಿಸಿದರೆ ನಾಶ ಹೊಂದುತ್ತಾನೆ. ಅಂತೆಯೇ ಮನುಷ್ಯರು ತನ್ನ ಬಂಧುಗಳನ್ನು ಬಿಟ್ಟು ಪರಿಚಯವಿಲ್ಲದ ಇನ್ನೊಂದು ಗುಂಪನ್ನು ಆಶ್ರಯಿಸಿದರೆ, ತನ್ನ ನಾಶವನ್ನು ತಾನೇ ಆಹ್ವಾನಿಸಿದಂತೆ ಆಗುತ್ತದೆ. ।।೨।।

हस्ती स्थूलतनु: स चांकुशवश: किं हस्तिमात्रोकुशो
दीपे प्रज्वलिते प्रणश्यति तम: किं दीपमात्रं तम:।
वज्रेणापि हता: पतन्ति गिरय: किं वज्रमात्रो गिरिम्
तेजो यस्य विराजते स बलवान् स्थूलेषु क: प्रत्यय:॥

ಆನೆಯು ದೊಡ್ಡದಾದ ಗಾತ್ರವನ್ನು ಹೊಂದಿದೆ. ಆದರೂ ಅದು ಸಣ್ಣ ಅಂಕುಶಕ್ಕೆ ವಶವಾಗುತ್ತದೆ. ಅಂಕುಶವೇನು ಆನೆಯಷ್ಟು ದೊಡ್ಡದೆ? ದೀಪವನ್ನು ಹಚ್ಚಿದರೆ ಕತ್ತಲೆಯು ನಾಶವಾಗುತ್ತದೆ. ಕತ್ತಲೆಯೇನು ದೀಪದಷ್ಟೇ ಇರುತ್ತದೆಯೆ? ವಜ್ರಾಯುಧದಿಂದ ಪರ್ವತಗಳೇ ಮುರಿದು ಬೀಳುತ್ತವೆ. ಪರ್ವತಗಳೇನು ವಜ್ರಾಯುಧದಷ್ಟು ಚಿಕ್ಕವೆ? ಯಾರಲ್ಲಿ ತೇಜಸ್ಸು ವಿರಾಜಮಾನವಾಗಿರುತ್ತದೆಯೋ ಅವನೇ ಬಲಶಾಲಿಯು. ಕೇವಲ ಗಾತ್ರದಿಂದ ಏನು ಪ್ರಯೋಜನ?

ವಸ್ತುವಿನ ಗಾತ್ರಕ್ಕಿಂತ ಅದರಲ್ಲಿರುವ ಬಲ ಅಥವಾ ತೇಜಸ್ಸು ಮುಖ್ಯ. ಕೇವಲ ಗಾತ್ರದಲ್ಲಿ ದೊಡ್ಡದಾಗಿದ್ದರೆ ಉಪಯೋಗವಿಲ್ಲ. ಇದನ್ನು ಸಮರ್ಥಿಸಲು ಆಚಾರ್ಯರು ಆನೆ, ದೀಪ ಮತ್ತು ವಜ್ರಾಯುಧಗಳ ದೃಷ್ಟಾಂತವನ್ನು ಕೊಟ್ಟಿರುತ್ತಾರೆ. ।।೩।।

कलौ दशसहस्त्रेषु हरिस्त्यजति मेदिनीम्।
तदर्धं जाह्नवीतोयं तदर्धं ग्रामदेवता॥

ಕಲಿಯುಗದಲ್ಲಿ ಹತ್ತು ಸಾವಿರ ವರ್ಷಗಳು ಕಳೆದ ನಂತರ ಶ್ರೀಹರಿಯು ಭೂಮಿಯನ್ನು ತ್ಯಜಿಸುತ್ತಾನೆ. ಅದರ ಅರ್ಧದಷ್ಟರಲ್ಲಿ ಅಂದರೆ ಐದು ಸಾವಿರ ವರ್ಷಗಳು ಕಳೆದ ನಂತರ ಗಂಗೆಯು ಭೂಮಿಯನ್ನು ತ್ಯಜಿಸುತ್ತಾಳೆ. ಅದರ ಅರ್ಧದಷ್ಟು ಅಂದರೆ ಎರಡೂವರೆ ಸಾವಿರ ವರ್ಷಗಳ ನಂತರ ಗ್ರಾಮದೇವತೆಯು ಭೂಮಿಯನ್ನು ತ್ಯಜಿಸುತ್ತಾಳೆ.

ಕಲಿಯುಗದಲ್ಲಿ ಅಧರ್ಮ ಪ್ರವೃತ್ತಿ ಹೆಚ್ಚಾಗುತ್ತದೆಂದು ಆಚಾರ್ಯರ ಮತವಾಗಿದೆ. ಹಿಂದಿನ ಮೂರು ಯುಗಗಳಲ್ಲಿ ಧರ್ಮವು ಕಾಲು ಭಾಗದಂತೆ ಕಡಿಮೆಯಾಗುತ್ತ ಬಂದು

ಕಲಿಯುಗದಲ್ಲಿ ಕಾಲು ಭಾಗ ಧರ್ಮ, ಮುಕ್ಕಾಲು ಭಾಗ ಅಧರ್ಮವಾಗುತ್ತದೆ. ಆದ್ದರಿಂದ ದೇವಾಲಯಗಳಲ್ಲಿ ಶ್ರೀಹರಿಯ ಅಂಶ ಮರೆಯಾಗುತ್ತದೆ. ಗಂಗೆ ಪಾಪನಾಶಿನಿಯೆನಿಸದೆ ಕಲುಷಿತಳಾಗುತ್ತಾಳೆ. ಗ್ರಾಮದೇವತೆಯರು ಗ್ರಾಮಗಳನ್ನು ಕಾಪಾಡಲು ಅಸಮರ್ಥರಾಗುತ್ತಾರೆ. ಧರ್ಮವು ನಶಿಸುತ್ತದೆ. ।।೪।।

गृहाऽऽसक्तस्य नो विद्या नो दया मांसभोजिनः।
द्रव्यलुब्धस्य नो सत्यं स्त्रैणस्य न पवित्रता॥

ಮನೆಯ ಬಗ್ಗೆ ಹೆಚ್ಚು ಅಸಕ್ತಿಯಿರುವವನಿಗೆ ವಿದ್ಯೆ ಲಭಿಸುವುದಿಲ್ಲ. ಮಾಂಸಾಹಾರಿಗಳ ಹೃದಯದಲ್ಲಿ ದಯೆಯಿರುವುದಿಲ್ಲ. ಹಣದ ಬಗ್ಗೆ ಲೋಭಿಯಾದವನಲ್ಲಿ ಸತ್ಯವಿರುವುದಿಲ್ಲ. ಸ್ತ್ರೀಯರಲ್ಲಿ ಪಾವಿತ್ರ್ಯವಿರುವುದಿಲ್ಲ.

ಮನೆಯ ಸೆಳೆತ ಇರುವವನು ಗುರುಕುಲದಲ್ಲಿದ್ದು ನಿಷ್ಠೆಯಿಂದ ವ್ಯಾಸಂಗ ಮಾಡಲಾರನು. ಆದುದರಿಂದ ಅವನಿಗೆ ವಿದ್ಯೆ ಹತ್ತುವುದಿಲ್ಲ. ಮಾಂಸಾಹಾರಿಗಳು ಪ್ರಾಣಿಗಳನ್ನೇ ತಿನ್ನುವುದರಿಂದ ಅವರಲ್ಲಿ ದಯೆಯನ್ನು ನಿರೀಕ್ಷಿಸಲು ಸಾಧ್ಯವಿಲ್ಲ. ಲೋಭಿಯಾದವನು ಹಣಕ್ಕಾಗಿ ಸುಳ್ಳನ್ನು ಹೇಳುತ್ತಲೇ ಇರುತ್ತಾನೆ. ದುಷ್ಟಳಾದ ಸ್ತ್ರೀ ತನ್ನ ಪಾವಿತ್ರ್ಯವನ್ನು ಉಳಿಸಿಕೊಳ್ಳುವುದಿಲ್ಲ. ।।೫।।

न दुर्जनः साधुदशामुपैति बहुप्रकारैरपि शिक्ष्यमाणः।
आमूलसिक्तः पयसा घृतेन न निम्बवृक्षो मधुरत्वमेति॥

ಬಹಳ ಪ್ರಕಾರವಾಗಿ ಶಿಕ್ಷಣವನ್ನು ಕೊಟ್ಟರೂ ದುಷ್ಟನಾದವನು ಸಾಧುಸ್ವಭಾವವನ್ನು ಹೊಂದುವುದಿಲ್ಲ. ತುದಿಯಿಂದ ಬುಡದವರೆಗೂ ಹಾಲು ತುಪ್ಪದಿಂದ ಅದ್ದಿದರೂ ಬೇವಿನಗಿಡವು ಸಿಹಿಯನ್ನು ಪಡೆಯುವುದಿಲ್ಲ.

ಮನುಷ್ಯನ ಸಹಜ ಸ್ವಭಾವವನ್ನು ಬದಲಾಯಿಸುವುದು ಸಾಧ್ಯವಿಲ್ಲ. ಸ್ವಭಾವತಃ ದುಷ್ಟನಾದವನು ಎಷ್ಟು ಬೋಧೆ ಮಾಡಿದರೂ ತನ್ನ ದುರ್ಬುದ್ಧಿಯನ್ನೂ ಬಿಡುವುದಿಲ್ಲ. ಅದಕ್ಕೆ ಆಚಾರ್ಯರು ಬೇವಿನಮರದ ದೃಷ್ಟಾಂತವನ್ನು ಕೊಡುತ್ತಾರೆ. ಸ್ವಭಾವತಃ ಕಹಿಯಾದ ಅದನ್ನು ಹಾಲು-ತುಪ್ಪದಲ್ಲಿ ಅದ್ದಿದರೂ ಸಿಹಿಯಾಗುವುದಿಲ್ಲ. ।।೬।।

अन्तर्गतमलो दुष्टस्तीर्थस्नानशतैरपि।
न शुध्यति यथा भाण्डं सुराया दाहितं च यत्॥

ಅಂತರಂಗದಲ್ಲಿ ಕಶ್ಮಲವುಳ್ಳ ದುಷ್ಟನು ನೂರಾರು ತೀರ್ಥಗಳಲ್ಲಿ ಸ್ನಾನ ಮಾಡಿದರೂ

ಶುದ್ಧನಾಗುವುದಿಲ್ಲ. ಮದ್ಯದಿಂದ ತುಂಬಿರುವ ಪಾತ್ರೆಯನ್ನು ಬೆಂಕಿಗೆ ಹಾಕಿದರೂ ಶುದ್ಧವಾಗುವುದಿಲ್ಲ.

ಹಿಂದಿನ ಶ್ಲೋಕದ ಅರ್ಥವನ್ನೇ ಈ ಶ್ಲೋಕವೂ ಪ್ರತಿಪಾದಿಸುತ್ತದೆ. ಅಂತರಂಗದ ಶುದ್ಧಿಗೆ ಬಹಿರಂಗ ಶುದ್ಧಿಯಿಂದ ಏನೂ ಪ್ರಯೋಜವಾಗುವುದಿಲ್ಲವೆಂಬುದು ತಾತ್ಪರ್ಯವು.॥೭॥

न वेत्ति यो यस्य गुणप्रकर्षं
स तं सदा निन्दति नाऽत्र चित्रम्।
यथा किराती करिकुम्भजाता
मुक्ता: परित्यज्य बिभर्ति गुञ्जा:॥

ಯಾರು ಒಬ್ಬನ ಗುಣವಿಶೇಷಗಳನ್ನು ಅರಿತಿರುವುದಿಲ್ಲವೋ ಅವನು ಅವನನ್ನು ಸದಾ ನಿಂದಿಸುತ್ತಲೇ ಇರುತ್ತಾನೆ. ಅದರಲ್ಲಿ ಆಶ್ಚರ್ಯವೇನೂ ಇಲ್ಲ. ಬೇಡರ ಹೆಂಗಸು ಆನೆಯ ಕುಂಭಸ್ಥಳದಲ್ಲಿ ಉತ್ಪನ್ನವಾದ ಮುತ್ತಿನ ಮಣಿಗಳನ್ನು ಬಿಟ್ಟು ಗುಲಗಂಜಿಯ ಸರವನ್ನು ಧರಿಸುವಂತೆ ಇದು.

ಯಾರು ಗುಣಜ್ಞರೋ ಅವರು ಇನ್ನೊಬ್ಬರ ಗುಣಗಳನ್ನು ಅರ್ಥಮಾಡಿಕೊಳ್ಳಬಲ್ಲರು. ಹಾಗಿಲ್ಲದೆ ಗುಣಗ್ರಾಹಿಗಳಲ್ಲದವರು ಸುಮ್ಮನೆ ಎಲ್ಲರನ್ನೂ ನಿಂದಿಸುತ್ತಲೇ ಇರುತ್ತಾರೆ. ಇದಕ್ಕೆ ದೃಷ್ಟಾಂತವಾಗಿ ಆಚಾರ್ಯರು ಬೇಡರ ಸ್ತ್ರೀಯರ ಸ್ವಭಾವವನ್ನು ಹೇಳಿರುತ್ತಾರೆ. ಅವರಿಗೆ ಮುತ್ತಿನ ಮಣಿಗಳ ಬೆಲೆ ತಿಳಿಯದು. ಆದ್ದರಿಂದ ಅದನ್ನು ತಿರಸ್ಕರಿಸಿ, ಗುಲಗಂಜಿಯ ಮಾಲೆಗಳನ್ನು ಧರಿಸುತ್ತಾರೆ. ॥೮॥

ये तु संवत्सरं पूर्णं नित्यं मौनेन भुञ्जते।
युगकोटिसहस्रं तु स्वर्गलोके महीयते॥

ಯಾರು ಒಂದು ವರ್ಷ ಪ್ರತಿದಿನವೂ ಮೌನವಾಗಿ ಭೋಜನ ಮಾಡುತ್ತಾರೆಯೋ ಅವರು ಒಂದು ಸಹಸ್ರ ಕೋಟಿಯುಗಗಳವರೆಗೆ ಸ್ವರ್ಗಲೋಕದಲ್ಲಿ ವಿರಾಜಿಸುತ್ತಾರೆ.

ಧರ್ಮಶಾಸ್ತ್ರದ ಪ್ರಕಾರ ಭೋಜನ ಮಾಡುವಾಗ ಅನವಶ್ಯಕವಾದ ವಾರ್ತಾಲಾಪಗಳನ್ನು ಪರಿಹರಿಸಬೇಕು. ಮೌನವಾಗಿ, ಮನಸ್ಸಿಟ್ಟು ಊಟಮಾಡುವುದು ಆರೋಗ್ಯ ದೃಷ್ಟಿಯಿಂದಲೂ ಒಳ್ಳೆಯದು. ಅಂತಹ ಅಭ್ಯಾಸವನ್ನು ಬೆಳೆಸಿಕೊಳ್ಳಲೆಂಬ ದೃಷ್ಟಿಯಿಂದ ಅದಕ್ಕೆ ಅದ್ಭುತವಾದ ಫಲವನ್ನು ಹೇಳಲಾಗಿದೆ. ॥೯॥

**कामं क्रोधं तथा लोभं स्वादं शृंगारकौतुके।**
**अतिनिद्राऽतिसेवे च विद्यार्थी ह्यष्ट वर्जयेत्॥**

ಕಾಮ, ಕ್ರೋಧ, ಲೋಭ, ರುಚಿ, ಅಲಂಕಾರದಲ್ಲಿ ಆಸಕ್ತಿ, ಕುತೂಹಲ, ಅತಿ ನಿದ್ರೆ ಮತ್ತು ಅತಿಯಾದ ಸೇವೆ ಈ ಎಂಟನ್ನು ವಿದ್ಯಾರ್ಥಿಗಳು ಪರಿತ್ಯಜಿಸಬೇಕು. ವಿದ್ಯಾರ್ಥಿಯಾದವನು ತನ್ನ ಮನಸ್ಸನ್ನು ಸಂಪೂರ್ಣವಾಗಿ ವಿದ್ಯೆಯ ಮೇಲೆ ಕೇಂದ್ರೀಕರಿಸಬೇಕು. ಉಳಿದ ವಿಷಯಗಳಲ್ಲಿ ಆಸಕ್ತಿಯಿರಬಾರದು. ಅಂತಹ ಎಂಟು ಪ್ರಮುಖ ವಿಷಯಗಳನ್ನು ಇಲ್ಲಿ ಪಟ್ಟಿಮಾಡಿ, ಇವುಗಳಿಂದ ದೂರವಿರುವಂತೆ ವಿದ್ಯಾರ್ಥಿಗಳನ್ನು ಆಚಾರ್ಯರು ಎಚ್ಚರಿಸಿದ್ದಾರೆ. ॥೧೦॥

**अकृष्टफलमूलेन वनवासरतः सदा।**
**कुरुतेऽहरहः श्राद्धमृषिर्विप्रः स उच्यते॥**

ಭೂಮಿಯನ್ನು ಉಳುಮೆ ಮಾಡದೆ, ತಾನಾಗಿಯೇ ಸಿಗುವ ಹಣ್ಣು, ಗೆಡ್ಡೆ, ಗೆಣಸುಗಳನ್ನು ಬಳಸಿ, ಯಾವಾಗಲೂ ಕಾಡಿನಲ್ಲಿ ವಾಸಿಸುವುದರಲ್ಲಿಯೇ ಆಸಕ್ತಿ ವಹಿಸುತ್ತ, ಪ್ರತಿದಿನವೂ ಶ್ರಾದ್ಧಕರ್ಮವನ್ನು ನಡೆಸುವ ಬ್ರಾಹ್ಮಣನು ಋಷಿಯೆಂದು ಕರೆಯಲ್ಪಡುವನು.

ಜಮೀನನ್ನು ಉತ್ತು ಬಿತ್ತಿ ಮಾಡುವುದೂ ಹಿಂಸೆಯೆಂದು ಕೆಲವರು ಭಾವಿಸುವರು. ಅವರು ತಾನಾಗಿಯೇ ಬೆಳೆಯುವ ಹಣ್ಣು, ಗೆಡ್ಡೆ, ಗೆಣಸುಗಳಿಂದಲೇ ಜೀವನ ನಡೆಸುವರು. ತಮಗಾಗಿ ಮನೆಯನ್ನು ನಿರ್ಮಿಸದೆ ಕಾಡಿನಲ್ಲಿ ವಾಸಮಾಡುವರು. ಪ್ರಕೃತಿದತ್ತವಾದ ವಸ್ತುಗಳಿಂದಲೇ ಅತಿಥಿ ಸತ್ಕಾರ, ಶ್ರಾದ್ಧ ಮುಂತಾದ ಧರ್ಮಕಾಯಕಗಳನ್ನು ಪ್ರತಿದಿನವೂ ನಡೆಸುವರು. ಅವರೇ ನಿಜವಾದ ಋಷಿಗಳು.॥೧೧॥

**एकाहारेण सन्तुष्टः षट्कर्मनिरतः सदा।**
**ऋतुकालाभिगामी च स विप्रो द्विज उच्यते॥**

ಒಂದು ಹೊತ್ತಿನ ಊಟದಿಂದಲೇ ತೃಪ್ತನಾಗಿರುವ, ಬ್ರಾಹ್ಮಣ ವಿಹಿತವಾದ ಆರು ಕರ್ಮಗಳಲ್ಲಿ ನಿರತನಾಗಿರುವ, ಋತುಕಾಲದಲ್ಲಿ ಮಾತ್ರ ಸಂತಾನಾರ್ಥವಾಗಿ ಪತ್ನಿ ಸಮಾಗಮ ಮಾಡುವ ದ್ವಿಜನು ಬ್ರಾಹ್ಮಣನೆಂದು ಕರೆಯಲ್ಪಡುತ್ತಾನೆ.

ಒಪ್ಪತ್ತು ಊಟ ಮಾಡುವವನು ಯೋಗಿ, ಎರಡು ಹೊತ್ತು ಉಣ್ಣುವವನು ಭೋಗಿಯು. ಬ್ರಾಹ್ಮಣನ ಆರು ಕರ್ಮಗಳೆಂದರೆ, ಅಧ್ಯಯನ-ಅಧ್ಯಾಪನ,

ಯಜನ-ಯಾಜನ, ದಾನ- ಪ್ರತಿಗ್ರಹ. ಇವುಗಳನ್ನು ಕ್ರಮವರಿತು ನಡೆಸಬೇಕು. 'ಪ್ರಜಾಯೈ ಗೃಹಮೇಧಿನಾಂ' ಎಂಬಂತೆ ಸಂತಾನಾರ್ಥವಾಗಿಯೇ ಸ್ತ್ರೀ ಸಮಾಗಮ. ಇಂತಹವನೇ ದ್ವಿಜನು (ಬ್ರಾಹ್ಮಣನು).॥೧೨॥

लौकिके कर्मणि रत: पशूनां परिपालक:।
वाणिज्यकृषिकर्ता य: स विप्रो वैश्य उच्यते॥

ಲೌಕಿಕವಾದ ಕೆಲಸಗಳಲ್ಲಿಯೇ ಆಸಕ್ತನಾಗಿದ್ದು, ಪಶುಗಳನ್ನು ಸಾಕುತ್ತ, ವ್ಯಾಪಾರ, ವ್ಯವಸಾಯಗಳನ್ನು ಮಾಡುವ ದ್ವಿಜನು ವೈಶ್ಯನೆಂದು ಕರೆಯಲ್ಪಡುತ್ತಾನೆ.

ವೈಶ್ಯನಾದವನಿಗೆ ಪಾರಮಾರ್ಥಿಕಕ್ಕಿಂತಲೂ ಲೌಕಿಕ ವ್ಯವಹಾರವು ಪ್ರಧಾನವು. ಅವನು ಧನವನ್ನು ಕೊಡುವ ಉದ್ಯೋಗಗಳನ್ನು ಮಾಡುತ್ತಾನೆ. ಈ ಲೋಕದ ವ್ಯವಹಾರಗಳೇ ಅವನ ಆಸಕ್ತಿಯ ವಿಷಯಗಳು. ॥೧೩॥

लाक्षादितैलनीलानां कुसुम्भमधुसर्पिषाम्।
विक्रेता मद्यमांसानां स विप्र: शूद्र उच्यते॥

ಅರಗು ಮುಂತಾದವು, ಎಣ್ಣೆ, ನೀಲ ಮುಂತಾದ ಬಣ್ಣಗಳು, ಕುಂಕುಮ, ಕೇಸರಿ ಮುಂತಾದವು, ಜೇನು, ತುಪ್ಪ, ಮದ್ಯ, ಮಾಂಸ ಇವುಗಳ ಮಾರಾಟ ಮಾಡುವವನು ಬ್ರಾಹಣನಾದರೂ ಶೂದ್ರನೆನಿಸುತ್ತಾನೆ. ॥೧೪॥

परकार्यविहन्ता च दाम्भिक: स्वार्थसाधक:।
छली द्वेषी मृदु: क्रूरो विप्रो मार्जार उच्यते॥

ಇನ್ನೊಬ್ಬರ ಕೆಲಸವನ್ನು ಕೆಡಿಸುವವನು, ದಂಭಾಚಾರಿಯು, ಸ್ವಾರ್ಥಿಯು, ಮೋಸಗಾರನು, ದ್ವೇಷಸಾಧಿಸುವವನು ಅತ್ಯಂತ ಮೃದುಸ್ವಭಾವ ಅಥವಾ ಕ್ರೂರಸ್ವಭಾವವುಳ್ಳವನು, ಅಂತಹ ಬ್ರಾಹ್ಮಣನು ಬೆಕ್ಕಿನ ಜಾತಿಗೆ ಸೇರಿದವನು.

ತನ್ನ ಸ್ವಾರ್ಥಸಾಧನೆಗಾಗಿ ಇನ್ನೊಬ್ಬರಿಗೆ ತೊಂದರೆಯನ್ನುಂಟುಮಾಡುವ, ಮೋಸಗಾರನಾಗಿ ಮೃದುಸ್ವಭಾವದವನಂತೆ ಕಾಣುವ, ದುಷ್ಟಸ್ವಭಾವವು ಬೆಕ್ಕಿನಲ್ಲಿ ಇರುವುದೆಂದು ಕವಿಗಳ ಭಾವನೆ. ಅದ್ದರಿಂದ ಇಲ್ಲಿ ಕಪಟಿಯನ್ನು ಬೆಕ್ಕಿಗೆ ಹೋಲಿಸಲಾಗಿದೆ.॥೧೫॥

वापी कूप तडागानामाराम सुर वेश्मनाम्
उच्छेदने निराऽऽशंक: स विप्रो म्लेच्छ उच्यते॥

ಜಲಾಶಯಗಳು, ಭಾವಿಗಳು, ಕೆರೆಗಳು, ಉಪವನಗಳು, ದೇವಮಂದಿರಗಳು ಇವುಗಳನ್ನು ಯೋಚನೆಯಿಲ್ಲದೆ, ಭಯವಿಲ್ಲದೆ ಹಾಳು ಮಾಡುವ ವಿಪ್ರನು ಮ್ಲೇಚ್ಛನೆನಿಸುತ್ತಾನೆ.

ಜನರಿಗೆ ಉಪಯುಕ್ತವಾದ ಕೆಲಸವನ್ನು ಮಾಡುವವನು, ಶುದ್ಧವಾದ ಆಚಾರವುಳ್ಳವನೇ ನಿಜವಾದ ಬ್ರಾಹ್ಮಣ. ಅದಿಲ್ಲದೆ ಜನರಿಗೆ ತೊಂದರೆಯಾಗುವ ಕೆಲಸಗಳನ್ನು ಮಾಡುವವನು ಜಾತಿಯಿಂದ ಬ್ರಾಹ್ಮಣನಾದರೂ, ಯಾರೂ ಅವನನ್ನು ಬ್ರಾಹ್ಮಣನೆಂದು ಭಾವಿಸುವುದಿಲ್ಲ.ಜಾತಿಗಿಂತ ಗುಣ ಮುಖ್ಯ. ॥೧೬॥

देवद्रव्यं गुरुद्रव्यं परदाराऽभिमर्शनम्।
निर्वाह: सर्वभूतेषु विप्रश्चाण्डाल उच्यते॥

ದೇವರಿಗೆ ಸಂಬಂಧಪಟ್ಟ ವಸ್ತುಗಳು, ಗುರುಗಳ ವಸ್ತುಗಳು ಇವುಗಳನ್ನು ತೆಗೆದುಕೊಳ್ಳುವವನು, ಪರಸ್ತ್ರೀಯರನ್ನು ಬಲಾತ್ಕಾರ ಮಾಡುವವನು,ಹೀಗೆ ಎಲ್ಲ ಜೀವಿಗಳಿಗೆ ತೊಂದರೆ ಕೊಡುವವನು ಚಾಂಡಾಲನೆನಿಸುತ್ತಾನೆ.

ಚಾಂಡಾಲನ ಸ್ವಭಾವವು ಕಾರ್ಯಕಾರ್ಯವಿವೇಚನೆಯಿಲ್ಲದೆ, ಎಲ್ಲರ ವಸ್ತುಗಳ ಮೇಲೆ ಅಧಿಕಾರ ನಡೆಸುವುದು. ಅಂತಹ ಸ್ವಭಾವದ ಬ್ರಾಹ್ಮಣನನ್ನು ಚಾಂಡಾಲನೆಂದೇ ಭಾವಿಸಬೇಕು.॥೧೭॥

देयं भोज्यधनं सदा सुकृतिभिर्नो सञ्चितव्यं कदा
श्रीकर्णस्य बलेश्च विक्रमपतेरद्यापि कीर्ति: स्थिता
अस्माकं मधु दानभोगरहितं नष्टं चिरात्सञ्चितं
निर्वाणादिति पाणिपादयुगले घर्षन्त्यहो मक्षिका:॥

ಪುಣ್ಯವಂತರಿಂದ ಭೋಗಕ್ಕಾಗಿ ಹಣವು ಸದಾ ಉಪಯೋಗಿಸಲ್ಪಡಬೇಕು. ಇಲ್ಲವೇ ದಾನಮಾಡಬೇಕು. ಸುಮ್ಮನೆ ಯಾವಾಗಲೂ ಕೂಡಿಡಬಾರದು. ಶ್ರೀ ಕರ್ಣ, ಬಲಿ ವಿಕ್ರಮರಾಜ ಇವರುಗಳ ಕೀರ್ತಿಯು ಇಂದಿಗೂ ಸ್ಥಿರವಾಗಿದೆ. ನಮ್ಮ ಜೇನು ತುಪ್ಪವಾದರೋ ದಾನವನ್ನು ಮಾಡದೆ, ಭೋಗಿಸದೆ ಬಹಳ ಕಾಲದವರೆಗೆ ಕೂಡಿಸಿ ಇಡಲ್ಪಟ್ಟಿತು. ಆದ್ದರಿಂದಲೇ ಅದು ನಷ್ಟವಾಯಿತು. ಹೀಗೆ ಹೇಳುತ್ತ ಜೇನು ನೊಣಗಳು ವೈರಾಗ್ಯದಿಂದ ಕೈಕಾಲುಗಳನ್ನು ಬಡಿಯುತ್ತಿವೆ.

ಜೇನು ನೊಣಗಳು ಹನಿ ಹನಿ ಮಧುರಸವನ್ನು ತಂದು, ತಾವೂ ಕುಡಿಯದೆ, ಬೇರೆಯವರಿಗೂ ಕೊಡದೆ ಬಹುಕಾಲ ಕೂಡಿಡುತ್ತವೆ. ನಂತರ ಅವುಗಳಿಗೆ ಜೇನು

ಸಿಗದಂತೆ ಮನುಷ್ಯ ಕೊಂದು ಕಿತ್ತುಕೊಂಡು ಹೋಗುತ್ತಾನೆ. ಸಾಯುವಾಗ ಕೈಕಾಲು ಬಡಿಯುತ್ತ ಆ ನೊಣಗಳು ತಮ್ಮ ತಪ್ಪಿಗಾಗಿ ಪರಿತಪಿಸುತ್ತಿವೆಯಂದು ಆಚಾರ್ಯರು ಹೇಳುತ್ತಿದ್ದಾರೆ.

ಮನುಷ್ಯರಿಗೆ ಇದು ಎಚ್ಚರಿಕೆಯ ಮಾತು. ದಾನ. ಭೋಗ, ನಾಶ ಇವು ಮೂರೇ ಹಣಕ್ಕೆ ಇರುವ ಗತಿಗಳು. ಯಾರು ದಾನ ಮಾಡುತ್ತಾರೆಯೋ ಅವರ ಕೀರ್ತಿ ಶಾಶ್ವತವಾಗಿರುತ್ತದೆ. ಯಾರು ಭೋಗಿಸುತ್ತಾರೋ ಅವರು ಹಣದ ತಾತ್ಕಾಲಿಕ ಪ್ರಯೋಜನವನ್ನಾದರೂ ಪಡೆಯುತ್ತಾರೆ. ಎರಡನ್ನು ಮಾಡದಿದ್ದರೆ ನಾಶವೇ ಮೂರನೆಯ ಗತಿಯು.॥೧೮॥

## ಅಧ್ಯಾಯದ ಸಾರಾಂಶ

ಮನುಷ್ಯರಿಗೆ ಹಲವು ಸ್ವಭಾವಗಳು ಸ್ವಾಭಾವಿಕವಾಗಿರುತ್ತದೆ. ಅಭ್ಯಾಸಬಲದಿಂದ ಅವುಗಳನ್ನು ಕಲಿಯಾಗದು. ದಾನ ಮಾಡುವುದರಲ್ಲಿ, ಮಧುರಭಾಷಿಸುವುದರಲ್ಲಿ, ನಯ–ನಾಜೂಕಿನಿಂದ ಇರುವಿಕೆ, ಸಾಹಸ ಸ್ವಭಾವಗಳು ಮನುಷ್ಯರಿಗೆ ಸ್ವಾಭಾವಿಕ.

ಅಭ್ಯಾಸ ಬಲದಿಂದ ಕೆಲವು ಸ್ವಭಾವಗಳನ್ನು ರೂಡಿಸಬಹುದಾಗಿದೆ ಎಂದರೆ ಪಡೆಯಬಹುದಾಗಿದೆ ಮನುಷ್ಯರು ತಮ್ಮ ಸ್ವಭಾವವನ್ನು ಹಾಗೂ ಕರ್ಮವನ್ನು ತ್ಯಜಿಸಿ ಪರಧರ್ಮ ಹಾಗೂ ಸೇವೆ ಅನುಸರಿಸಿದಲ್ಲಿ ಅದು ಅವನತಿಗೆ ಎಡೆ ಮಾಡಿಕೊಡುವುದು. ಬೃಹತ್ ಆಕಾರ ಶರೀರ ಪಡೆದ ವ್ಯಕ್ತಿಗಳು ಭೀಮಕಾಯ ಶಕ್ತಿ ಪಡೆದಿರಲಾರರು. ಅಂಥಹವರನ್ನು ಒಂದು ಚಾವಟಿಯಿಂದ ಹತೋಟಿಗೆ ತರಬಹುದಾಗಿದೆ. ಹಣತೆಯ ಅಲ್ಪ ಪ್ರಕಾಶ ಅಂಧಕಾರವನ್ನು ಬೇರ್ಪಡಿಸುವುದು. ಪರ್ವತ ಸ್ತೋಮ, ಶಿಲೆಗಳನ್ನು ಸುತ್ತಿಗೆಯಿಂದ ಬಡಿಯುವುದರಿಂದ ಚೂರು ಮಾಡಬಹುದಾಗಿದೆ. ದೀರ್ಘ ಕಾಯ ನೋಡಿ ಅತಿ ಬಲವಂತನೆಂಬ ಬಿರುದು ನೀಡದಿರಿ ಎಂದು ಆಚಾರ್ಯರು ತಿಳಿಸಿರುವರು.



## ॥ ಅಧ್ಯಾಯ - ೧೨ ॥

**ಬುದ್ಧಿವಂತರು ಧರ್ಮ-ಕರ್ಮಾನುಷ್ಠಾನ ಹೊರತಾಗಿ ಭೋಜನ ಪಡೆಯುವ ವಿಷಯದಲ್ಲಿ ಚಿಂತಿಸಬಾರದು. ಮನುಷ್ಯನು ಜನಿಸಿ ಧರೆಗೆ ಬಂದ ಕ್ಷಣವೇ ಅನ್ನಾಹಾರ ಪ್ರಾಪ್ತಿ ಬಗ್ಗೆ ವ್ಯವಸ್ಥೆ ಆಗಿರುತ್ತದೆ.**

सानन्दं सदनं सुताश्च सुधियः कान्ता प्रियालापिनी
इच्छापूर्तिधनं स्वयोषितिरतिः स्वाऽऽज्ञापराः सेवकाः
आतिथ्यं शिवपूजनं प्रतिदिनं मिष्टान्नपानं गृहे
साधोः संगमुपासते च सततं धन्यो गृहस्थाऽऽश्रमः॥

ಮನೆಯು ಆನಂದಪೂರ್ಣವಾಗಿದೆ. ಮಕ್ಕಳು ಬುದ್ಧಿವಂತರು. ಮಡದಿಯು ಪ್ರಿಯಭಾಷಿಣಿಯು. ಇಚ್ಛೆಯು ಪೂರ್ಣವಾಗುವಷ್ಟು ಹಣವಿದೆ. ತನ್ನ ಪತ್ನಿಯಲ್ಲಿ ಅನುರಾಗವಿದೆ. ಸೇವಕರು ಆಜ್ಞೆಯಂತೆ ನಡೆಯುತ್ತಾರೆ. ಪ್ರತಿದಿನವೂ ಮನೆಯಲ್ಲಿ ಅತಿಥಿಗಳಿಗೆ ಆತಿಥ್ಯ, ಶಿವನ ಪೂಜೆ ಮತ್ತು ಮೃಷ್ಟಾನ್ನ ಭೋಜನ ನಡೆಯುತ್ತದೆ. ಯಾವಾಗಲೂ ಸತ್ಪುರಷರ ಸಹವಾಸ ಲಭಿಸುತ್ತದೆ. ಇಂತಹ ಗೃಹಸ್ಥಾಶ್ರಮವು ಧನ್ಯವಾದುದು.

ಗೃಹಸ್ಥಾಶ್ರಮದಲ್ಲಿ ಅನೇಕ ಸೌಲಭ್ಯಗಳಿವೆ. ಈ ಎಲ್ಲ ಅನುಕೂಲತೆಗಳು ಲಭಿಸಿದರೆ ಮನುಷ್ಯರು ಪುಣ್ಯವಂತರು.॥೧॥

आर्तेषु विप्रेषु दयान्वितश्च यत् श्रद्धया स्वल्पमुपैति दानम्।
अनन्तपारं समुपैति राजन् यद्दीयते तन्न लभेद् द्विजेभ्यः॥

ಎಲೈ ರಾಜನೇ, ದುಃಖಾರ್ತರಾಗಿರುವ ಬ್ರಾಹ್ಮಣರಲ್ಲಿ ದಯೆಯುಳ್ಳವನಾಗಿ, ಶ್ರದ್ಧೆಯಿಂದ ಸ್ವಲ್ಪವೇ ದಾನವನ್ನು ಮಾಡಿದರೂ, ಅದು ಅನಂತವಾಗಿ ಪರಿಣಮಿಸುತ್ತದೆ. ಅಂತಹ ಅವಕಾಶ ಬ್ರಾಹ್ಮಣರಿಗೆ ಇರುವುದಿಲ್ಲ.

ದುಃಖಿಗಳೂ ಆರ್ತರೂ, ಬ್ರಾಹ್ಮಣರೂ ಆದವರಿಗೆ ಸ್ವಲ್ಪವೇ ದಾನ ಮಾಡಿದರೂ ಅದು ಅವರಿಗೆ ಅನಂತ ಸುಖವನ್ನು ಕೊಡುವುದರಿಂದ ಅದೇ ಸರಿಯಾದ ದಾನವು. ॥೨॥

दाक्षिण्यं स्वजने दया परजने शाठ्यं सदा दुर्जने
प्रीतिः साधुजने स्मयः खलजने विद्वज्जने चार्जवम्।
शौर्यं शत्रुजने क्षमा गुरुजने नारीजने धृष्टता
इत्थं ये पुरुषाः कलासु कुशलास्तेष्वेवलोकस्थितिः॥

ಬಂಧುಗಳಲ್ಲಿ ದಾಕ್ಷಿಣ್ಯ ಸ್ವಭಾವವನ್ನು, ಸೇವಕರಲ್ಲಿ ದಯೆಯನ್ನು, ದುರ್ಜನರಲ್ಲಿ ಕಠಿನ ಸ್ವಭಾವವನ್ನು, ಸಾಧುಗಳಲ್ಲಿ ಪ್ರೀತಿಯನ್ನು, ದುಷ್ಟರಲ್ಲಿ ಗರ್ವವನ್ನೂ, ವಿದ್ವಾಂಸರಲ್ಲಿ ಋಜುಸ್ವಭಾವವನ್ನು, ಶತ್ರುಗಳಲ್ಲಿ ಶೌರ್ಯವನ್ನು, ಗುರುಬಂಧುಗಳಲ್ಲಿ ಕ್ಷಮೆಯನ್ನು, ಹೆಂಗಸರಲ್ಲಿ ಕಾಠಿನ್ಯವನ್ನು ತೋರಿಸಬೇಕು. ಈ ರೀತಿಯಾಗಿ ಬೇರೆ ಬೇರೆ ಕಲಾರೂಪವಾದ ನಡತೆಯಲ್ಲಿ ಕುಶಲರಾದವರಿಂದಲೇ ಲೋಕವು ಸರಿಯಾಗಿರುವುದು.

ಲೋಕ ವ್ಯವಹಾರವನ್ನು ಅರಿತವನು ಬೇರೆ ಬೇರೆ ರೀತಿಯ ಜನರ ಜೊತೆ, ಅವರವರ ಸ್ಥಾನಕ್ಕೆ ಅನುಗುಣವಾದಂತೆ ವರ್ತಿಸಬೇಕಾಗುತ್ತದೆ. ಹೀಗೆ ವ್ಯವಹಾರ ಕುಶಲತೆಯನ್ನು ಅರಿತವರಿಂದಲೇ ಲೋಕವ್ಯವಹಾರವು ಸರಿಯಾಗಿ ನಡೆಯುತ್ತದೆ. ॥೩॥

हस्तौ दानविवर्जितौ श्रुतिपुटौ सारस्वतद्रोहिणौ
नेत्रे साधुविलोकनेन रहिते पादौ न तीर्थं गतौ।
अन्यायार्जितवित्तपूर्णमुदरं गर्वेण तुंगं शिरो
रे रे जम्बुक मुञ्च मुञ्च सहसा निन्द्यं सुनिन्द्यं वपुः॥

ದಾನ ಮಾಡದ ಕೈಗಳು, ಸರಸ್ವತಿ ಸಂಬಂಧವಾದ ವಿದ್ಯೆಗಳಿಗೆ ದ್ರೋಹವೆಸಗುವ ಕಿವಿಗಳು, ಸಾಧುಗಳನ್ನು ನೋಡದ ಕಣ್ಣುಗಳು, ತೀರ್ಥಯಾತ್ರೆಯನ್ನು ಮಾಡದ ಕಾಲುಗಳು, ಅನ್ಯಾಯದಿಂದ ಸಂಪಾದಿಸಿದ ಹಣದಿಂದ ಹೊಟ್ಟೆ ತುಂಬಿಸಿಕೊಳ್ಳುವುದು, ಅಹಂಕಾರದಿಂದ ತಲೆಯೆತ್ತಿ ತಿರುಗುವುದು, ಇಂತಹವರನ್ನು ಇಲ್ಲಿ ನರಿಗೆ ಹೋಲಿಸಿದೆ.

ಅಂತಹವರು ಕೂಡಲೇ ಶರೀರವನ್ನು ಬಿಟ್ಟುಬಿಡಬೇಕು. ಅವರ ಶರೀರವು ನಿಜವಾಗಲೂ ನಿಂದ್ಯವಾದುದು.

ಮನುಷ್ಯನಾಗಿ ಜನಿಸಿದ ಮೇಲೆ ದಾನಧರ್ಮಗಳು, ವಿದ್ಯಾಭ್ಯಾಸ, ಸಾಧುಸಮಾಗಮ, ತೀರ್ಥಯಾತ್ರೆ ಮುಂತಾದ ಸತ್ಕರ್ಮಗಳನ್ನು ಮಾಡಬೇಕು. ಹಾಗೆಯೇ ದುಷ್ಕರ್ಮಗಳನ್ನು ತ್ಯಜಿಸಬೇಕು. ಇಲ್ಲದಿದ್ದರೆ ಅವರು ನರಿಯಂತಹ ಪ್ರಾಣಿಸಮಾನರು. ಅವರು ಬದುಕಿರುವುದು ವ್ಯರ್ಥ. ॥೪॥

पत्रं नैव यदा करीरविटपे दोषो वसन्तस्य किं
नोलूकोऽप्यवलोकते यदि दिवा सूर्यस्य किं दूषणम्।
वर्षा नैव पतन्ति चातकमुखे मेघस्य किं दूषणं
यत्पूर्वं विधिना ललाटलिखितं तन्मार्जितुं कः क्षमः॥

ಕಳ್ಳಿಯ ಗಿಡದಲ್ಲಿ ಎಲೆಗಳು ಇಲ್ಲದಿದ್ದರೆ ವಸಂತ ಋತುವಿನದೇನು ತಪ್ಪು? ಗೂಬೆಯು ಹಗಲಿನಲ್ಲಿ ನೋಡಲಾರದಿದ್ದರೆ ಸೂರ್ಯನಿಗೆ ಏಕೆ ದೋಷವೆಣಿಸಬೇಕು? ಚಾತಕ ಪಕ್ಷಿಯ ಕೊಕ್ಕಿನೊಳಕ್ಕೆ ನೀರಿನ ಹನಿ ಬೀಳದಿದ್ದರೆ ಮೇಘವೇನು ಮಾಡೀತು? ಬ್ರಹ್ಮನಿಂದ ಹಣೆಯಲ್ಲಿ ಏನು ಬರೆದಿದೆಯೋ ಅದನ್ನು ಅಳಿಸಲು ಯಾರು ಸಮರ್ಥರು?

ವಸಂತಕಾಲದಲ್ಲಿ ಎಲ್ಲ ಗಿಡಗಳೂ ಚಿಗುರುತ್ತವೆ. ಅಂತಹ ಸಮಯದಲ್ಲಿ ಚಿಗುರುಬಾರದ ಕಳ್ಳಿಗಿಡದ ಹಣೆಯ ಬರಹಕ್ಕೆ ವಸಂತ ಹೊಣೆಯಲ್ಲ. ಹಾಗೆಯೇ ಗೂಬೆಗೆ ಹಗಲಿನಲ್ಲಿ ಕಣ್ಣು ಕಾಣಿಸುವುದಿಲ್ಲ. ಚಾತಕ ಪಕ್ಷಿ ನೆಲದ ಮೇಲಿನ ನೀರನ್ನು ಕುಡಿಯುವುದಿಲ್ಲ. ಮಳೆಯ ನೀರಿಗೆ ಬಾಯಿ ಬಿಟ್ಟುಕೊಂಡಿರುತ್ತದೆ. ಎಲ್ಲೋ ಒಂದೆರಡು ಹನಿ ಅದರ ಬಾಯಿಗೆ ಬೀಳಬಹುದು. ಯಾರಿಗೆ ಎಷ್ಟು ಸಿಗುತ್ತದೋ ಅದೆಲ್ಲವು ವಿಧಿಲಿಖಿತ. ಅದನ್ನು ಬದಲಾಯಿಸಲು ಸಾಧ್ಯವಿಲ್ಲ. ॥೫॥

सत्संगाद्भवति हि साधुता खलानां
साधूनां न हि खलसंगमात्खलत्वम्।
आमोदं कुसुम-भवं मृदेव धत्ते
मृद्गन्धं न हि कुसुमानि धारयन्ति॥

ಸತ್ಪುರುಷರ ಸಹವಾಸದಿಂದ ದುಷ್ಟರು ಒಳ್ಳೆಯವರಾಗಬಹುದು. ಆದರೆ ದುರ್ಜನರ ಸಂಗದಿಂದ ಸಜ್ಜನರು ದುರ್ಜನರಾಗುವುದಿಲ್ಲ. ಹೂವಿನಿಂದ ಬರುವ

ಸುವಾಸನೆಯಿಂದ ಅದು ಬಿದ್ದ ನೆಲವೂ ಸುವಾಸಿತವಾಗಬಹುದು. ಹೂವಿಗೇನೂ ಮಣ್ಣಿನ ವಾಸನೆ ಬರುವುದಿಲ್ಲ.

ಸಜ್ಜನರು ತಮ್ಮ ಒಳ್ಳೆಯ ನಡತೆಯಿಂದ ದುಷ್ಟರನ್ನು ಸಜ್ಜನರಾಗಿಸಬಲ್ಲರೇ ಹೊರತು ತಮ್ಮ ಸತ್‌ಸ್ವಭಾವವನ್ನು ಬಿಡುವುದಿಲ್ಲ. ಅದಕ್ಕೆ ಆಚಾರ್ಯರು ಹೂವಿನ ಉದಾಹರಣೆಯನ್ನು ಕೊಟ್ಟಿರುತ್ತಾರೆ. ॥೬॥

साधूनां दर्शनं पुण्यं तीर्थभूता हि साधवः।
कालेन फलते तीर्थं सद्यः साधुसमागमः॥

ಸತ್ಪುರುಷರ ದರ್ಶನಭಾಗ್ಯವೇ ಪುಣಪ್ರದವು. ಸಾಧುಗಳೇ ತೀರ್ಥಕ್ಷೇತ್ರಗಳಿಗೆ ಸಮಾನರು. ತೀರ್ಥಯಾತ್ರೆಗಳ ಪುಣ್ಯವು ಕಾಲಾನಂತರದಲ್ಲಿ ಫಲಿಸುತ್ತದೆ. ಸಾಧುಗಳ ಸಮಾಗಮವು ಕೂಡಲೇ ಫಲಿಸುತ್ತದೆ.

ತೀರ್ಥಕ್ಷೇತ್ರಗಳಿಗಿಂತಲೂ ಸತ್ಪುರುಷರ ಸಮಾಗಮದ ವಿಶೇಷತೆಯು ಈ ಶ್ಲೋಕದಲ್ಲಿ ಉಕ್ತವಾಗಿರುತ್ತದೆ. ॥೭॥

विप्राऽस्मिन्नगरे महान् कथय कस्तालद्रुमाणां गणः
को दाता रजको ददाति वसनं प्रातर्गृहीत्वा निशि।
को दक्षः परदारवित्तहरणे सर्वेऽपि दक्षो जनः
कस्माज्जीवसि हे सखे विषकृमिन्यायेन जीवाम्यहम्॥

ಪ್ರ. ಎಲೈ ಬ್ರಾಹ್ಮಣನೇ, ಈ ನಗರದಲ್ಲಿ ದೊಡ್ಡದಾಗಿರುವುದು (ಮಹತ್ವಪೂರ್ಣ) ಯಾವುದು? ಉತ್ತರ: ತಾಳೆಯ ಮರಗಳ ಗುಂಪು.

ಪ್ರ. ಯಾರು ದಾನಿಗಳು? ಉತ್ತರ : ಅಗಸರವನು ಬೆಳಿಗ್ಗೆ ಬಟ್ಟೆಗಳನ್ನು ತೆಗೆದುಕೊಂಡು ರಾತ್ರಿ ಹಿಂದಿರುಗಿಸಿ ಕೊಡುತ್ತಾನೆ.

ಪ್ರ. ಯಾರು ಸಮರ್ಥರಾದವರು ? ಉತ್ತರ : ಇನ್ನೊಬ್ಬರ ಹೆಂಡತಿ, ಹಣ ಅಪಹರಿಸುವುದರಲ್ಲಿ ಎಲ್ಲರೂ ಸಮರ್ಥರು.

ಪ್ರ. ಎಲೈ ಗೆಳೆಯನೇ ಹೇಗೆ ಜೀವಿಸುತ್ತಿರುವೆ? ಉತ್ತರ : ವಿಷಕ್ರಿಮಿಯಂತೆ ಜೀವಿಸುತ್ತಿರುವೆನು.

ದುಷ್ಟರಿಂದ ತುಂಬಿರುವ ನಗರವೊಂದರಲ್ಲಿ ಸಜ್ಜನನೊಬ್ಬನು ಹೇಗೆ ಜೀವಿಸುತ್ತಿರಬಹುದೆಂಬುದನ್ನು ಇಲ್ಲಿ ಪ್ರಶ್ನೋತ್ತರಗಳ ಮೂಲಕ ಸುಂದರವಾಗಿ

ರೂಪಿಸಿರುತ್ತಾರೆ. ನಗರದಲ್ಲಿ ಉನ್ನತವಾದ ಧ್ಯೇಯಗಳಿರುವವರಾಗಲೀ, ದಾನಿಗಳಾಗಲೀ, ದಕ್ಷರಾಗಲೀ ಇಲ್ಲ. ಇಂತಹ ವಿಷತುಂಬಿದಂತಹ ಜಾಗದಲ್ಲಿ ವಿಷದಲ್ಲಿಯೇ ಬೆಳೆಯುವ ಕ್ರಿಮಿಯಂತೆ ಜೀವನ ಸಾಗಿಸಬೇಕಾಗುತ್ತದೆ. ॥೮॥

न विप्रपादोदककर्दमानि
न वेदशास्त्रध्वनिगर्जितानि।
स्वाहा-स्वधाकार-विवर्जितानि
श्मशानतुल्यानि गृहाणि तानि॥

ಬ್ರಾಹ್ಮಣರ ಪಾದೋದಕದಿಂದ ನೆಲವು ಕೆಸರಾಗುವುದಿಲ್ಲ. ವೇದಗಳ ವಿವಿಧ ಶಾಖೆಗಳ ಗಟ್ಟಿಯಾದ ಧ್ವನಿಯು ಕೇಳಿಬರುವುದಿಲ್ಲ. ಸ್ವಾಹಾ-ಸ್ವಧಾ ಮುಂತಾದ ಯಜ್ಞ ಸಂಬಂಧವಾದ ಶಬ್ದಗಳಿಲ್ಲ ಅಂತಹ ಮನೆಗಳು ಶ್ಮಶಾನಕ್ಕೆ ಸಮವು.

ಗೃಹಸ್ಥರು ಅತಿಥಿಗಳಾದ ಬ್ರಾಹ್ಮಣರನ್ನು ಕಾಲುತೊಳೆದು ಗೌರವಿಸಿ, ಅನ್ನಪಾನಗಳನ್ನು ನೀಡಬೇಕು. ಮನೆಯಲ್ಲಿ ವೇದಧ್ವನಿ ಮೊಳಗುತ್ತಿರಬೇಕು. ಯಾಗ ಯಜ್ಞಗಳೂ ದೇವ-ಪಿತೃಕಾರ್ಯಗಳೂ ಸಾಂಗವಾಗಿ ನಡೆಯಬೇಕು. ಇಲ್ಲದಿದ್ದರೆ ಮನೆಯು ಶ್ಮಶಾನದಂತೆ ಅಮಂಗಳಪ್ರಾಯವಾಗುವುದು. ॥೯॥

सत्यं माता पिता ज्ञानं धर्मो भ्राता दया स्वसा।
शान्तिः पत्नी क्षमा पुत्रः षडेते मम बान्धवाः॥

ಸತ್ಯವೇ ತಾಯಿಯು. ಜ್ಞಾನವೇ ತಂದೆಯು. ಧರ್ಮವು ಸಹೋದರನು ದಯೆಯು ಸಹೋದರಿಯು. ಶಾಂತಿಯೇ ಪತ್ನಿಯು, ಕ್ಷಮೆಯೇ ಪುತ್ರನು. ಇವರು ಆರು ಜನರೇ ನನ್ನ ಬಾಂಧವರು.

ಸದಾಚಾರಶೀಲನಿಗೆ ಸತ್ಯ, ಜ್ಞಾನ ಮುಂತಾದವುಗಳೇ ನಿಜವಾದ ಬಂಧುಗಳು. ಲೌಕಿಕ ಬಂಧುಗಳಲ್ಲವೆಂದು ಶ್ಲೋಕದ ಸಾರವು.॥೧೦॥

अनित्यानि शरीराणि विभवो नैव शाश्वतः।
नित्यं सन्निहितो मृत्युः कर्तव्यो धर्मसंग्रहः॥

ಶರೀರಗಳು ಶಾಶ್ವತವಲ್ಲ. ಐಶ್ವರ್ಯವೂ ನಿತ್ಯವಲ್ಲ. ಮೃತ್ಯುವು ಪ್ರತಿದಿನ ಹತ್ತಿರವಾಗುತ್ತಿರುತ್ತದೆ. ಆದ್ದರಿಂದ ಧರ್ಮವನ್ನು ಸಂಗ್ರಹಿಸಬೇಕು.

ದೇಹವು ಗಟ್ಟಿಯಾಗಿದ್ದು, ಸಾಕಷ್ಟು ಸಂಪಾದಿಸುವ ಶಕ್ತಿಯಿದ್ದಾಗ, ದಾನ

ಧರ್ಮಗಳನ್ನು ಮಾಡಬೇಕು. ನಮ್ಮ ಆಯುಸ್ಸು ಪ್ರತಿದಿನ ಕಡಿಮೆಯಾಗುತ್ತಿರುತ್ತದೆ. ಕಳೆದು ಹೋದ ದಿನಗಳು ಮತ್ತೆ ಬರುವುದಿಲ್ಲ. ಮೃತ್ಯುವು ಆಕ್ರಮಿಸುವ ಮುನ್ನ ಆದಷ್ಟು ಧರ್ಮವನ್ನು ಸಂಗ್ರಹಿಸಬೇಕು. ಅದೊಂದೇ ನಮ್ಮ ಜೊತೆ ಬರುವುದು. ॥೧೧॥

आमन्त्रणोत्सवा विप्रा गावो नवतृणोत्सवाः।
पत्युत्साहयुता नार्यः अहं कृष्णरसोत्सवः॥

ಬ್ರಾಹ್ಮಣರು ಭೋಜನಕ್ಕೆ ಆಮಂತ್ರಣ ದೊರೆತರೆ ಸಂತೋಷ ಪಡುತ್ತಾರೆ. ಹಸುಗಳು ಹೊಸ ಹುಲ್ಲನ್ನು ಕಂಡರೆ ಸಂತಸಪಡುತ್ತವೆ. ಹೆಂಗಸರು ಪತಿಯ ಉತ್ಸಾಹದಲ್ಲಿ ಆಸಕ್ತರಾಗಿರುತ್ತಾರೆ. ನನಗೆ ಕೃಷ್ಣನ ನಾಮವೆಂಬ ರಸದಲ್ಲಿಯೇ ಸಂತೋಷವು.

ಯಾರಿಗೆ ಯಾವುದರಲ್ಲಿ ಆಸಕ್ತಿಯಿರುತ್ತದೆಯೋ ಅದು ಸಿಕ್ಕಿದರೆ ಸಂತೋಷವಾಗುತ್ತದೆ. ಕೃಷ್ಣಭಕ್ತರಿಗೆ ಕೃಷ್ಣನಾಮಸರಣೆಯೇ ಸರ್ವಸ್ವವು. ॥೧೨॥

मातृवत् परदारांश्च परद्रव्याणि लोष्ठवत्।
आत्मवत् सर्वभूतानि यः पश्यति स पश्यति॥

ಪರಸ್ತ್ರೀಯರನ್ನು ತಾಯಿಯಂತೆ, ಇನ್ನೊಬ್ಬರ ವಸ್ತುಗಳನ್ನು ಮಣ್ಣಿನ ಹೆಂಟೆಯಂತೆ, ಎಲ್ಲ ಪ್ರಾಣಿಗಳನ್ನೂ ತನ್ನಂತೆಯೇ ಯಾರು ಕಾಣುತ್ತಾರೆಯೋ ಅವನೇ ನಿಜವಾಗಿ ನೋಡುವವನು.

ಪ್ರಪಂಚದ ಸ್ತ್ರೀಯರೆಲ್ಲರನ್ನೂ ಮಾತೃಸಮಾನವಾಗಿ ಗೌರವಿಸಬೇಕು. ಇನ್ನೊಬ್ಬರ ವಸ್ತುಗಳು ಎಷ್ಟೇ ಬೆಲೆ ಬಾಳುವುದಾಗಲೀ, ಅವುಗಳಿಗೆ ಆಸೆಪಡದೆ ಮಣ್ಣಿ ಹೆಂಟೆಯಂತೆ ಕಾಣಬೇಕು. ಎಲ್ಲ ಜೀವರಾಶಿಗಳನ್ನು ತನ್ನಂತೆಯೇ ಎಂದು ಭಾವಿಸಿ, ಅವುಗಳಿಗೆ ಹಿಂಸೆಮಾಡದೆ ಜೀವನ ನಡೆಸುವವನು ನಿಜವಾದ ಮಾನವೀಯಗುಣಗಳುಳ್ಳವನು. ಉಳಿದವರು ನಿಜವಾದ ಅರ್ಥದಲ್ಲಿ ಪ್ರಪಂಚವನ್ನು ನೋಡುತ್ತಿರುವುದಿಲ್ಲ. ॥೧೩॥

धर्मे तत्परता मुखे मधुरता दाने समुत्साहता
मित्रेऽवञ्चकता गुरौ विनयता चित्तेऽति गम्भीरता।
आचारे शुचिता गुणे रसिकता शास्त्रेषु विज्ञानता
रूपे सुन्दरता शिवे भजनता सत्स्वेव संदृश्यते॥

ಧರ್ಮದಲ್ಲಿ ಆಸಕ್ತಿ, ಮಾತಿನಲ್ಲಿ ಮಾಧುರ್ಯ, ದಾನ ಮಾಡುವುದರಲ್ಲಿ ಉತ್ಸಾಹ, ಮಿತ್ರರಿಗೆ ವಂಚನೆ ಮಾಡದಿರುವುದು, ಗುರುಗಳಲ್ಲಿ ವಿನಯ, ಮನಸ್ಸಿನಲ್ಲಿ ಗಾಂಭೀರ್ಯ, ಆಚಾರದಲ್ಲಿ ಶುದ್ಧತೆ, ಗುಣಗಳಲ್ಲಿ ಪ್ರೀತಿ, ಶಾಸ್ತ್ರಗಳಲ್ಲಿ ತಿಳುವಳಿಕೆ, ರೂಪದಲ್ಲಿ

ಸುಂದರವಾಗಿರುವುದು, ಶಿವನನ್ನು ಭಜಿಸುವುದು ಇವುಗಳು ಸತ್ಪುರುಷರಲ್ಲಿ ಮಾತ್ರ ಕಂಡುಬರುತ್ತವೆ.

ಸಜ್ಜನರಾದವರು ಮಾತ್ರ ಮೇಲೆ ಹೇಳಿದ ಎಲ್ಲ ಗುಣಗಳನ್ನೂ ಹೊಂದಿ ಲೋಕವಂದ್ಯರಾಗಿರುತ್ತಾರೆ. ||೧೪||

काष्ठं कल्पतरुः सुमेरुरचलश्चिन्तामणिः प्रस्तरः
सूर्यस्तीव्रकरः शशी क्षयकरः क्षारो हि वारान्निधिः।
कामो नष्टतनुर्बलिर्दितिसुतो नित्यं पशुः कामगौ-
र्नैतांस्ते तुलयामि भो रघुपते कस्योपमा दीयते॥

ಕಲ್ಪತರುವು ಕೇವಲ ಕಟ್ಟಿಗೆಯು. ಸುಮೇರು ಪರ್ವತವು ಚಲಿಸಲಾರದು, ಚಿಂತಾಮಣಿಯು ಕಲ್ಲು. ಸೂರ್ಯನು ತೀವ್ರವಾದ ಕಿರಣಗಳುಳ್ಳವರು, ಚಂದ್ರನು ಕ್ಷಯಿಸುತ್ತಲೇ ಇರುತ್ತಾನೆ. ಸಮುದ್ರವು ಉಪ್ಪಿನಿಂದ ಕೂಡಿದೆ. ಮನ್ಮಥನಿಗೆ ದೇಹವೇ ಇಲ್ಲ, ಬಲಿಯು ದಿತಿಯ ಮಗನಾದ ದೈತ್ಯನು. ಕಾಮಧೇನುವು ಕೇವಲ ಹಸುವು ಎಲೈ ರಘುಪತಿಯೇ ಇವರಾರಿಗೂ ನಿನ್ನನ್ನು ಹೋಲಿಸಲಾರೆ. ಇನ್ನು ಯಾವ ಹೋಲಿಕೆಯನ್ನು ನಿನಗೆ ಕೊಡಲಿ?

ಶ್ರೀರಾಮನಲ್ಲಿ ಕಲ್ಪತರು, ಚಿನ್ನದ ಬೆಟ್ಟವಾದ ಮೇರು ಪರ್ವತ, ಸೂರ್ಯ, ಚಂದ್ರ, ಸಮುದ್ರ, ಮನ್ಮಥ, ಬಲಿ ಕಾಮಧೇನು ಇವುಗಳೆಲ್ಲದರ ಉತ್ತಮಗುಣಗಳೆಲ್ಲ ಇವೆ. ಇವುಗಳಲ್ಲಿರುವ ದೋಷಗಳಾವುವೂ ಇಲ್ಲ. ಆದ್ದರಿಂದ ಶ್ರೀರಾಮನು ಇವುಗಳೆಲ್ಲಕ್ಕಿಂತ ಮಿಗಿಲು. ಎಲ್ಲ ಉತ್ತಮ ವಸ್ತುಗಳ ಏಕತ್ರ ಸಮಾಗಮವೆಂಬುದು ಭಕ್ತನ ಅಭಿಪ್ರಾಯ. ||೧೫||

विनयं राजपुत्रेभ्यः पण्डितेभ्यः सुभाषितम्।
अनृतं द्यूतकारेभ्यः स्त्रीभ्यः शिक्षेत् कैतवम्॥

ರಾಜಪುತ್ರರಿಂದ ವಿನಯ, ಪಂಡಿತರಿಂದ ಒಳ್ಳೆಯ ಮಾತು, ಜೂಜುಕೋರರಿಂದ ಸುಳ್ಳುಹೇಳುವುದು ಮತ್ತು ಸ್ತ್ರೀಯರಿಂದ ಮೋಸಮಾಡುವುದನ್ನು ಕಲಿಯಬಹುದು.

ಯಾರಲ್ಲಿ ಯಾವುದು ವಿಪುಲವಾಗಿರುತ್ತದೆಯೋ ಅವರಿಂದ ಅಂತಹ ವಿಷಯವನ್ನು ಕಲಿಯಬಹುದು. ||೧೬||

अनालोक्य व्ययं कर्ता ह्यनाथः कलहप्रियः।

आतुरः सर्वक्षेत्रेषु नरः शीघ्रं विनश्यति॥

ಸರಿಯಾಗಿ ವಿಚಾರ ಮಾಡದೆ ಖರ್ಚುಮಾಡುವವನು, ಒಡೆಯರಿಲ್ಲದವನು, ಜಗಳಗಂಟಿಯು, ಆತುರದ ಸ್ವಭಾವದವನು, ಇಂತಹ ಮನುಷ್ಯನು ಎಲ್ಲ ಕ್ಷೇತ್ರಗಳಲ್ಲಿಯೂ ಬೇಗನೆ ನಾಶಹೊಂದುತ್ತಾನೆ.

ಹಣವನ್ನು ಖರ್ಚುಮಾಡುವಾಗ ಅವಶ್ಯಕತೆಯ ಬಗ್ಗೆ ವಿಚಾರಮಾಡಬೇಕು. ಒಡೆಯರಿಂದ ಉತ್ತಮ ನಡತೆಯನ್ನು ಕಲಿಯಬೇಕು. ಸುಮ್ಮನೆ ಜಗಳಕ್ಕೆ ಹೋಗಬಾರದು. ಕೆಲಸವನ್ನು ಆತುರವಿಲ್ಲದೆ ಯೋಚಿಸಿ ಮಾಡಬೇಕು. ಇಲ್ಲದಿದ್ದರೆ ವಿನಾಶಕ್ಕೆ ಕಾರಣವಾಗುತ್ತದೆ. ॥೧೭॥

नाहारं चिन्तयेत् प्राज्ञो धर्ममेकं हि चिन्तयेत्।
आहारो हि मनुष्याणां जन्मना सह जायते॥

ಬುದ್ಧಿವಂತನಾದವನು ಆಹಾರದ ಬಗ್ಗೆ ಚಿಂತಿಸಬಾರದು. ಧರ್ಮಚಿಂತನೆಯನ್ನು ಮಾಡಬೇಕು. ಆಹಾರವಾದರೋ ಮನುಷ್ಯನಿಗೆ ಹುಟ್ಟಿನಿಂದಲೇ ಬಂದಿರುತ್ತದೆ.

ಹುಟ್ಟಿಸಿದ ದೇವರು ಹುಲ್ಲು ಮೇಯಿಸುವುದಿಲ್ಲ. ಪ್ರತಿಯೊಬ್ಬರಿಗೂ ಅವರ ಆಹಾರ ನಿಶ್ಚಿತವಾಗಿರುತ್ತದೆ. ಊಟಕ್ಕಾಗಿ ಬದುಕಬಾರದು. ಬದುಕುವುದಕ್ಕಾಗಿ ಊಟಮಾಡಬೇಕು. ಅದರ ಬಗ್ಗೆ ಹೆಚ್ಚಿನ ಕಾಳಜಿ ಅನವಶ್ಯಕವು. ಮನುಷ್ಯನಾದವನು ತನ್ನ ಸಮಯವನ್ನು ಧರ್ಮಚಿಂತನೆಯಲ್ಲಿ ಕಳೆದು ಸಾರ್ಥಕಪಡಿಸಿಕೊಳ್ಳಬೇಕು. ॥೧೮॥

जलबिन्दुनिपातेन क्रमशः पूर्यते घटः।
स हेतुः सर्वविद्यानां धर्मस्य च धनस्य च॥

ನೀರು ಒಂದೊಂದೇ ಹನಿಯಾಗಿ ಬೀಳುತ್ತಿದ್ದರೆ ನಿಧಾನವಾಗಿ ಕೊಡವು ತುಂಬುವುದು. ಹಾಗೆಯೇ ಎಲ್ಲ ವಿದ್ಯೆಗಳನ್ನೂ ಕ್ರಮವಾಗಿ, ಸ್ವಲ್ಪಸ್ವಲ್ಪವಾಗಿ ಕಲಿಯಬೇಕು. ಧರ್ಮವನ್ನು ಹಾಗೆಯೇ ನಿರಂತರವಾಗಿ ಮತ್ತು ಕ್ರಮವಾಗಿ ಸಂಪಾದಿಸಬೇಕು. ಹಣವನ್ನೂ ಕೂಡ ಹಾಗೆಯೇ ಸಣ್ಣ ವಸ್ತುವನ್ನೂ ನಿರ್ಲಕ್ಷಿಸದೆ ಸಂಗ್ರಹಿಸಬೇಕು. ॥೧೯॥

वयसः परिणामेऽपि यः खलः खल एव सः।
सुपक्वमपि माधुर्यं नोपयातीन्द्रवारुणम्॥

ದುಷ್ಟನು ವಯಸ್ಸಾದರೂ ತನ್ನ ದುಷ್ಟತನವನ್ನೇನೂ ಬಿಡುವುದಿಲ್ಲ. ಇಂದ್ರವಾರುಣವೆಂಬ (ಹಾವುಮೆಕ್ಕೆಗಿಡ) ಗಿಡದ ಹಣ್ಣು ಚೆನ್ನಾಗಿ ಪಕ್ವವಾದರೂ

ಕಹಿಯಾಗಿಯೇ ಇರುತ್ತದೆ.

ವ್ಯಕ್ತಿಯು ವಯಸ್ಸಾದಂತೆ ಅನುಭವವನ್ನು ಪಡೆಯುತ್ತಾನೆ. ಅವನ ಸ್ವಭಾವದಲ್ಲಿಯೂ ಈ ಅನುಭವವು ಬದಲಾವಣೆಯನ್ನು ತರಬಹುದು. ಆದರೆ ಸ್ವಭಾವತಃ ದುರ್ಜನನಾದ ವ್ಯಕ್ತಿಯು ಅನುಭವದಿಂದ ಹೊಸ ಪಾಠವನ್ನೇನೂ ಕಲಿಯುವುದಿಲ್ಲ. ಅವನು ತನ್ನ ದುಷ್ಟತನವನ್ನೇ ಮುಂದುವರಿಸುತ್ತಾನೆ. ಅದಕ್ಕೆ ದೃಷ್ಟಾಂತವಾಗಿ ಹಾವುಮೆಕ್ಕೆ ಹಣ್ಣನ್ನು ಕೊಟ್ಟಿದೆ. ಉಳಿದ ಹಣ್ಣುಗಳು ಕಾಯಿಯಾಗಿದ್ದಾಗ ಒಗಚಾಗಿದ್ದರೂ ಪಕ್ವವಾದಂತೆ ಮಧುರವಾಗುತ್ತವೆ. ಆದರೆ ಇಂದ್ರವಾರುಣಿ ಮಾತ್ರ ಕಹಿಯಾಗಿಯೇ ಇರುತ್ತದೆ.॥೨೦॥

## ಅಧ್ಯಾಯದ ಸಾರಾಂಶ

ಚತುರ ಸಂತಾನ ಪ್ರಾಪ್ತಿ, ಮದುರ ಭಾಷಿಣಿ ಅರ್ಧಾಂಗಿಯ ಸಹಕಾರ, ಸತ್ಕಾರ್ಯಕ್ಕೆ ಅರ್ಜಿತ ಹಣದ ವ್ಯಯ, ಸಂದರ್ಭಕ್ಕೆ ಮಿತ್ರರ ಬೆಂಬಲ, ವಿಧೇಯಕರಾದ ಸೇವಕರು, ಅನವರತ ಪ್ರಭುವಿನ ಆರಾಧನೆ, ಗೌರವ-ಸನ್ಮಾನ ಸಹಿತ ಅತಿಥಿ ಸತ್ಕಾರ, ಪರಿವಾರದ ಜನರಿಗೆ ಸತ್ಸಂಗಗಳಲ್ಲಿ ಪಾಲ್ಗೊಳ್ಳುವ ಅವಕಾಶ, ನಿತ್ಯ ಭೋಜನಕ್ಕೆ ಉತ್ತಮ, ಶ್ರೇಷ್ಠ ಪರಿಕರಗಳ ಸಿಗುವಿಕೆ ವಸ್ತುತಃ ಗೃಹಸ್ಥರ ಕುಟುಂಬವು ಉತ್ತಮ ಕುಟುಂಬದ ದಿನಚರಿಯಾಗಬಲ್ಲದೆಂದು ಆಚಾರ್ಯರು ತಿಳಿಸಿರುವರು. ದಾನ ಮಾಡುವಿಕೆಯ ವಿಶಿಷ್ಠತೆ ಬಗ್ಗೆ ತಿಳಿಸುತ್ತಾ ಯೋಗ್ಯ ವಿದ್ವಾಂಸ ಬ್ರಾಹ್ಮಣ ಜನರಿಗೆ ಸಮಯಕ್ಕನುಗುಣ ದಾನ ನೀಡಿದರೆ ಹಣ ವ್ಯಯವಾಗದೆ ಬಹುಪಾಲು ಪುನಃ ಪ್ರಾಪ್ತಿಯಾಗುವ ಸಂಭಾವನೆ ಇರುವುದೆಂದು ತಿಳಿಸಿರುವರು. ಜೀವನ ಪರ್ಯಂತ ದಾನ ನೀಡದಿರುವ, ಶಾಸ್ತ್ರಗಳ ಶ್ರೇಷ್ಠ



## ॥ ಅಧ್ಯಾಯ - ೧೩ ॥

**ಸಹಸ್ರ ಹಸುಗಳ ನಡುವೆ ಕರುವು ತನ್ನ ತಾಯಿ ಬಳಿ ನೇರ ಧಾವಿಸುವಂತೆ ಮನುಷ್ಯನು ಮಾಡಿದ ಕರ್ಮವು ಆತನನ್ನು ಹಿಂಬಾಲಿಸುತ್ತದೆ.**

मुहूर्तमपि जीवेच्च नरः शुक्लेन कर्मणा।
न कल्पमपि कष्टेन लोकद्वयविरोधिना॥

ಇಹ ಮತ್ತು ಪರಲೋಕಗಳೆರಡಕ್ಕೂ ವಿರೋಧಿಯಾದ ಕರ್ಮವನ್ನು ಮಾಡುತ್ತ ಕಷ್ಟದಿಂದ ಕಲ್ಪಕಾಲದವರೆಗೆ ಬದುಕಿರುವ ಬದಲು, ಶುದ್ಧವಾದ ಕರ್ಮಗಳನ್ನು ಮಾಡುತ್ತ ಮುಹೂರ್ತಕಾಲ ಬದುಕಿರುವುದು ಲೇಸು.

ಮನುಷ್ಯರು ತಾವು ಬದುಕಿರುವಷ್ಟು ಕಾಲವೂ ಈ ಲೋಕದ ಜನರಿಗೆ ಉಪಕಾರ, ಪರಲೋಕಕ್ಕಾಗಿ ಧರ್ಮವನ್ನು ಕೊಡುವ ಕೆಲಸಗಳನ್ನು ಮಾಡಬೇಕು. ಇಲ್ಲದಿದ್ದರೆ ಎಷ್ಟು ಕಾಲ ಬದುಕಿದರೂ ಅವನ ಜೀವನ ವ್ಯರ್ಥವು. ॥೧॥

गते शोको न कर्तव्यो भविष्यं नैव चिन्तयेत्।
वर्तमानेन कालेन प्रवर्तन्ते विचक्षणाः॥

ಕಳೆದುಹೋದ ಸಂಗತಿಗಳಿಗಾಗಿ ದುಃಖ ಪಡಬಾರದು. ಮುಂದೆ ಬರಬಹುದಾದ ವಿಷಯಗಳ ಬಗ್ಗೆಯೂ ಚಿಂತಿಸಬಾರದು. ಬುದ್ಧಿವಂತರ ವರ್ತಮಾನ ಕಾಲದಲ್ಲಿ ಉಪಯೋಗವಾಗುವ ಕೆಲಸಗಳಲ್ಲಿ ಪ್ರವೃತ್ತರಾಗುತ್ತಾರೆ. ಭೂತಕಾಲದ ಘಟನೆಗಳ ಬಗ್ಗೆ

ಮೆಲುಕಿಸುತ್ತ ಕುಳಿತರೆ ಅದರಿಂದ ಪ್ರಯೋಜನವೇನೂ ಆಗುವುದಿಲ್ಲ. ಕಳೆದುಹೋದ ಕಾಲ ಮತ್ತೆ ಬರುವುದಿಲ್ಲ. ಹಾಗೆಯೇ ಮುಂದೆ ಏನಾಗುವುದೆಂದು ನಮಗೆ ತಿಳಿಯದು. ಅದರ ಬಗ್ಗೆ ಚಿಂತಿಸುವುದೂ ವ್ಯರ್ಥ. ಬುದ್ಧಿವಂತರಾದವರು ವರ್ತಮಾನದಲ್ಲಿ ಕಾಲಹರಣ ಮಾಡದೆ ಉಪಯೋಗಿಸಿಕೊಳ್ಳಬೇಕು. ।।೨।।

स्वभावेन हि तुष्यन्ति देवा: सत्पुरुषा: पिता।
ज्ञातय: स्नानपानाभ्यां वाक्यदानेन पण्डिता:।।

ದೇವತೆಗಳು, ಸತ್ಪುರುಷರು, ತಂದೆ ಇವರು ವ್ಯಕ್ತಿಯ ಒಳ್ಳೆಯ ಸ್ವಭಾವದಿಂದ ಸಂತುಷ್ಟರಾಗುತ್ತಾರೆ. ಬಂಧುಗಳು ಮನೆಗೆ ಬಂದಾಗ ಸ್ನಾನ ಭೋಜನಾದಿಗಳಿಗೆ ಒಳ್ಳೆಯ ವ್ಯವಸ್ಥೆ ಮಾಡಿದರೆ ಸಂತೋಷಪಡುತ್ತಾರೆ. ಪಂಡಿತರು ಹಿತವಾದ ಸಂಭಾಷಣೆಯಿಂದ ತೃಪ್ತರಾಗುತ್ತಾರೆ.

ಒಬ್ಬನು ಸಾಧುಸ್ವಭಾವದವನಾದರೆ ದೇವತೆಗಳು ಅವನಿಗೆ ಬೇಕಾದುದನ್ನು ನೀಡುವರು. ಸತ್ಪುರುಷರು ಅವನನ್ನು ಪ್ರಶಂಸಿಸುವರು. ತಂದೆಯು ಅಂತಹ ಮಗನ ವಿಷಯವಾಗಿ ಹೆಮ್ಮೆ ಪಡುವನು. ಬಂಧುಗಳು ಅಂತಹವರ ಮನೆಗೆ ಬಂದರೆ ಅವರಿಗೆ ಬೇಕಾದ ಅನುಕೂಲತೆಗಳು ಸಿಕ್ಕುತ್ತವೆಯಾದ್ದರಿಂದ ಅವರೂ ಸತ್ಪುರಷನಾದ ವ್ಯಕ್ತಿಯನ್ನು ಇಷ್ಟಪಡುತ್ತಾರೆ. ಪಂಡಿತರಿಗೆ ತಮಗೆ ಸಮನಾಗಿ ಚರ್ಚೆ ಮಾಡಬಲ್ಲ ಮತ್ತೊಬ್ಬ ವಿದ್ವಾಂಸನು ಸಿಕ್ಕಿದರೆ ಜ್ಞಾನಲಾಭವಾಗುತ್ತದೆ. ।।೩।।

अहो बत विचित्राणि चरितानि महाऽऽत्मनाम्।
लक्ष्मीं तृणाय मन्यन्ते तद्भारेण नमन्ति च।।

ಮಹಾತ್ಮರ ಈ ರೀತಿಯ ನಡತೆಯು ವಿಚಿತ್ರವಾದುದು. ಅವರು ಐಶ್ವರ್ಯವನ್ನು ತೃಣಕ್ಕೆ ಸಮಾನವಾಗಿ ಕಾಣುತ್ತಾರೆ. ಅಂತಹ ಐಶ್ವರ್ಯವು ಬಂದರೆ ವಿನೀತರಾಗಿ ಬಾಗುತ್ತಾರೆ.

ಮಹಾತ್ಮರು ಐಶ್ವರ್ಯಕ್ಕೆ ಹೆಚ್ಚಿನ ಬೆಲೆಯನ್ನೇನೂ ಕೊಡುವುದಿಲ್ಲ. ಹುಲ್ಲಿನಂತೆ ಅದನ್ನು ಹಗುರವಾಗಿ ಭಾವಿಸುತ್ತಾರೆ. ತೃಣವು ಬೆಲೆಯಿಲ್ಲದ ವಸ್ತು ಹಾಗೆಯೇ ಐಶ್ವರ್ಯವು ಅವರಿಗೆ ಮಹತ್ತರವಾದುದಲ್ಲ. ಆದರೆ ಅಂತಹ ತೃಣದಂತೆ ಹಗುರವಾದ ಐಶ್ವರ್ಯದ ಭಾರದಿಂದ ಅವರು ಬಾಗಿಹೋಗುತ್ತಾರೆ ಎಂದು ವಿರೋಧಾಲಂಕಾರವನ್ನು ಇಲ್ಲಿ ಕೊಟ್ಟಿದೆ. ಎಷ್ಟೇ ಸಂಪತ್ತು ಬಂದರೂ ಅವರು ಅಹಂಕಾರದಿಂದ ತಲೆಯೆತ್ತಿ ತಿರುಗದೆ ನಮ್ರರಾಗಿರುತ್ತಾರೆಂದು ವಿರೋಧ ಪರಿಹಾರವು ।।೪।।.

यस्य स्नेहो भयं तस्य स्नेहो दुःखस्य भाजनम्।
स्नेहमूलानि दुःखानि तानि त्यक्त्वा वसेत्सुखम्॥

ಯಾರಿಗೆ ಸ್ನೇಹವು ಇರುತ್ತದೆಯೋ ಅವರಿಗೆ ಸ್ನೇಹ ಮುರಿದುಹೋದೀತೆಂದು ಭಯವೂ ಇರುತ್ತದೆ. ಸ್ನೇಹವೇ ದುಃಖಕ್ಕೆ ಕಾರಣ. ಎಲ್ಲ ದುಃಖಗಳಿಗೂ ಸ್ನೇಹವೇ ಮೂಲ. ಅದನ್ನು ಬಿಟ್ಟರೆ ಸುಖದಿಂದ ಇರಬಹುದು.

ಸ್ನೇಹವೆಂಬುದೂ ಒಂದು ರೀತಿಯ ಬಂಧನವು. ಸ್ನೇಹಿತರಿಗೆ ದುಃಖದ ಸಂದರ್ಭಗಳು ಬಂದರೆ ದುಃಖವಾಗುತ್ತದೆ. ಸ್ನೇಹವು ಒಡೆದರೆ ದುಃಖವಾಗುತ್ತದೆ. ಸ್ನೇಹಿತನು ಮೋಸಮಾಡಿದರೆ ದುಃಖವಾಗುತ್ತದೆ. ಹೀಗೆ ಎಲ್ಲ ದುಃಖಗಳಿಗಾಗಿ ಸ್ನೇಹವೇ ಮೂಲಕಾರಣವು. 'ಅತಿ ಸ್ನೇಹಃ ಪಾಪಶಂಕೀ' ಎಂದು ಕಾಳಿದಾಸ ಹೇಳುತ್ತಾನೆ. ಬಹಳ ಸ್ನೇಹವಿರುವವರಿಗೆ ಏನು ಕೆಡುಕಾಗುತ್ತದೋ ಎಂದು ಭಯವಿದ್ದೇ ಇರುತ್ತದೆ. ಅಂತಹ ಸ್ನೇಹವನ್ನು ಬಿಟ್ಟು ಎಲ್ಲರನ್ನೂ ಸಮವಾಗಿ ಕಾಣುವುದೇ ಸುಖವು.॥೫॥

अनागतविधाता च प्रत्युत्पन्नमतिस्तथा।
द्वावेतौ सुखमेधेते यद्भविष्यो विनश्यति॥

ಬರಲಿರುವ ವಿಪತ್ತನ್ನು ಮೊದಲೇ ಊಹಿಸುವವನು, ವಿಪತ್ತು ಬಂದಾಗ ಕೂಡಲೇ ಪರಿಹಾರವನ್ನು ಕಂಡುಕೊಳ್ಳುವವನು ಇವರಿಬ್ಬರೂ ಸುಖವನ್ನು ಪೊಂದುವರು. ಮುಂದಾಗುವುದನ್ನು ಯೋಚಿಸದೆ, ವಿಪತ್ತಿಗೆ ಸಿಲುಕಿಕೊಳ್ಳುವವನು ನಾಶಹೊಂದುತ್ತಾನೆ.

ಇದು ಪಂಚತಂತ್ರದ ಒಂದು ಕಥೆಯ ಶ್ಲೋಕ. ಒಂದು ಕೊಳ್ಳದಲ್ಲಿ ೩ ಮೀನುಗಳಿದ್ದವು. ಒಮ್ಮೆ ಬೆಸ್ತರು ಬಂದು ಎಲ್ಲವನ್ನೂ ಪರಿಶೀಲಿಸಿ ನಾಳೆ ಬಲೆ ಹಾಕುವುದೆಂದುಕೊಂಡು ಹೋದರು. ಮುಂದೆ ಬರುವ ವಿಪತ್ತನ್ನು ಊಹಿಸಿ ಒಂದು ಮೊದಲೇ ಬೇರೆ ಕಡೆ ಹೋಯಿತು. ಇನ್ನೊಂದು ಅವರು ಬಲೆ ಸಿದ್ಧಮಾಡುತ್ತಿರುವಾಗ ಉಪಾಯವಾಗಿ ತಪ್ಪಿಸಿಕೊಂಡಿತು. ಏನನ್ನೂ ಮಾಡದೆ ಸುಮ್ಮನೆ ಕಾಲಕಳೆದ ಮೂರನೇ ಮೀನು ಬಲೆಗೆ ಸಿಕ್ಕಿಕೊಂಡಿತು.॥೬॥

राज्ञि धर्मिणि धर्मिष्ठाः पापे पापाः समे समाः।
राजानमनुवर्तन्ते यथा राजा तथा प्रजाः॥

ರಾಜನು ಧರ್ಮಾತ್ಮನಾಗಿದ್ದರೆ ಪ್ರಜೆಗಳೂ ಧರ್ಮವನ್ನು ಅನುಸರಿಸುವರು. ಅವನು ಪಾಪಕರ್ಮಗಳಲ್ಲಿ ಆಸಕ್ತನಾಗಿದ್ದರೆ ಪ್ರಜೆಗಳೂ ಹಾಗೆಯೇ ಇರುವರು. ಅವನು ಪಾಪ-ಪುಣ್ಯಗಳಲ್ಲಿ ಸಮಾನನಾಗಿದ್ದರೆ ಇವರೂ ಅಂತೆಯೇ ನಡೆದು ಕೊಳ್ಳುವರು. ಹೀಗೆ

ಪ್ರಜೆಗಳು ರಾಜನನ್ನು ಅನುಸರಿಸುತ್ತಾರೆ. ರಾಜನು ಹೇಗೆ ಇರುವನೋ ಪ್ರಜೆಗಳೂ ಹಾಗೆಯೇ ಇರುತ್ತಾರೆ.

'ರಾಜಾ ಕಾಲಸ್ಯ ಕಾರಣಂ' ಎಂಬಂತೆ ರಾಜ್ಯದಲ್ಲಿ ಧರ್ಮ-ಅಧರ್ಮ ಎರಡರ ವೃದ್ಧಿಗೂ ರಾಜನೇ ಕಾರಣನು. ।।೭।।

जीवन्तं मृतवन्मन्ये देहिनं धर्मवर्जितम्।
मृतो धर्मेण संयुक्तो दीर्घजीवी न संशयः॥

ಧರ್ಮದಿಂದ ವರ್ಜಿತನಾದ ಮನುಷ್ಯನು ಬದುಕಿದ್ದರೂ ಸತ್ತಂತೆ ಎಂದು ಭಾವಿಸುತ್ತೇನೆ. ಧರ್ಮದಿಂದ ಕೂಡಿರುವ ಮನುಷ್ಯನು ಸತ್ತರೂ ದೀರ್ಘಕಾಲ ಬದುಕಿರುವನು.

ಅಧರ್ಮಿಯಾದ ಮನುಷ್ಯನನ್ನು ಅಪಕೀರ್ತಿಯು ಆಕ್ರಮಿಸುತ್ತವೆ. ಅವನು ಬದುಕಿದ್ದರೂ ಯಾರೂ ಅವನನ್ನು ಗೌರವಿಸುವುದಿಲ್ಲ. ಆದ್ದರಿಂದ ಅವನು ಇದ್ದರೂ ಸತ್ತಂತೆಯೇ ಲೆಕ್ಕವು. ಆದರೆ ಧರ್ಮಾತ್ಮನಾದ ಮನುಷ್ಯನನ್ನು ಅವನು ಸತ್ತನಂತರವೂ ಬಹಳ ಕಾಲದವರೆಗೆ ಜನ ಹಾಡಿ ಹೊಗಳುತ್ತಿರುತ್ತಾರೆ. ಅವನ ಕೀರ್ತಿಯು ಇರುವವರೆಗೂ ಅವನು ಬದುಕಿರುವಂತೆಯೇ ಆಗಿರುತ್ತದೆ. ।।೮।।

धर्मार्थकाममोक्षाणां यस्यैकोऽपि न विद्यते।
अजागलस्तनस्येव तस्य जन्म निरर्थकम्॥

ಯಾರಿಗೆ ಧರ್ಮ, ಅರ್ಥ, ಕಾಮ ಅಥವಾ ಮೋಕ್ಷಗಳಲ್ಲಿ ಯಾವುದೂ ಸಾಧಿಸಿರುವುದಿಲ್ಲವೋ ಅಂತಹವನ ಜನ್ಮವು ಆಡಿನ ಕೊರಳ ಮೊಲೆಯಂತೆ ನಿರರ್ಥಕವು.

ಮನುಷ್ಯನು ತನ್ನ ಕಾರ್ಯಗಳು ಮತ್ತು ನಡತೆಯಿಂದ ಚತುರ್ವಿಧ ಪುರಷಾರ್ಥಗಳನ್ನು ಪಡೆದುಕೊಳ್ಳಬೇಕು. ಆಗ ಆವನ ಜನ್ಮವು ಸಾರ್ಥಕವು ಇಲ್ಲದಿದ್ದರೆ ಆಡಿನ ಕೊರಳ ಮೊಲೆಯಂತೆ ಆವನ ಜೀವನವು. ಕೊರಳಲ್ಲಿ ಮೊಲೆಯ ಆಕಾರದ ಅಂಗವಿದ್ದರೂ ಅದು ಹಾಲಿನಿಂದೇನು ತುಂಬುವುದಿಲ್ಲ. ಕೇವಲ ಆಕಾರದಿಂದ ಮೊಲೆಯು. ಹಾಗೆಯೇ ಇವನು ಆಕಾರದಿಂದ ಮನುಷ್ಯರು. ।।೯।।

दह्यमानाः सुतीव्रेण नीचाः परयशोऽग्निना।
अशक्तास्तत्पदं गन्तुं ततो निन्दां प्रकुर्वते॥

ನೀಚರು ಇನ್ನೊಬ್ಬರ ಕೀರ್ತಿಯೆಂಬ ಬಹಳ ತೀವ್ರವಾದ ಅಗ್ನಿಯಿಂದ

ದಹಿಸಲ್ಪಟ್ಟವರಾಗಿ, ಅವರು ಗಳಿಸಿರುವಂತಹ ಸ್ಥಾನವನ್ನು ಪಡೆಯಲು ಸಮರ್ಥರಾಗದೆ ಸುಮ್ಮನೆ ಸತ್ಪುರುಷರನ್ನು ನಿಂದಿಸುತ್ತಾರೆ.

ಕೆಲವರಿಗೆ ಬೇರೆಯವರು ಒಳ್ಳೆಯ ಕೆಲಸಮಾಡಿ ಕೀರ್ತಿಯನ್ನು ಗಳಿಸಿದರೂ ಸಹಿಸಲು ಆಗುವುದಿಲ್ಲ. ಅವರಿಗೆ ಅಂತಹ ಕೀರ್ತಿಯನ್ನು ಪಡೆಯಲು ಶಕ್ತಿಯಿಲ್ಲ. ಆದ್ದರಿಂದ ಅವರು ಸುಮ್ಮನೆ ಸತ್ಪುರುಷರನ್ನು ತೆಗಳುತ್ತ ಅವರ ಕೀರ್ತಿಯನ್ನು ಕಡಿಮೆ ಮಾಡಲು ಪ್ರಯತ್ನಿಸುತ್ತಾರೆ. ॥೧೦॥

बन्धाय विषयाऽऽसक्तं मुक्त्यै निर्विषयं मनः।
मन एवं मनुष्याणां कारणं बन्धमोक्षयोः॥
देहाभिमाने गलिते विज्ञाते परमात्मनि।
यत्र यत्र मनो याति तत्र तत्र समाधयः॥

ವಿಷಯಗಳಲ್ಲಿ ಆಸಕ್ತನಾಗುವುದೇ ಬಂಧಕ್ಕೆ ಕಾರಣವು. ಮನಸ್ಸು ವಿಷಯಗಳಿಂದ ವಿಮುಖವಾಗುವುದೇ ಮುಕ್ತಿಯು. ಮನುಷ್ಯನ ಬಂಧಕ್ಕೂ ಮೋಕ್ಷಕ್ಕೂ ಮನಸ್ಸೇ ಕಾರಣವು.

ಮನಸ್ಸು ವಿಷಯಸುಖವನ್ನು ಬಯಸದೆ ನಿರ್ಮಲವಾಗಿದ್ದರೆ ಅದೇ ಮುಕ್ತಿಯು ಬಂಧ-ಮುಕ್ತಿಗಳೆಂಬುದು ನಮ್ಮ ಮನಸ್ಸಿನಲ್ಲಿದೆಯೇ ಹೊರತು, ಹೊರಗೆಲ್ಲೋ ಇರುವುದೂ, ಬರುವುದೂ ಅಲ್ಲ. ಆ ಮನದ ಮೇಲಿನ ನಿಯಂತ್ರಣವೇ ಮುಕ್ತಿ ಸಾಧನವು.

ಶರೀರದ ಅಭಿಮಾನವು ನಷ್ಟವಾಗಲಾಗಿ, ಪರಮಾತ್ಮನನ್ನು ಅರ್ಥಮಾಡಿಕೊಂಡರೆ, ಎಲ್ಲಿಎಲ್ಲಿ ಮನಸ್ಸು ಹೋಗುವುದೋ ಅಲ್ಲೆಲ್ಲ ಸಮಾಧಿಸ್ಥಿತಿಯನ್ನು ಪಡೆಯುವುದು.

ಈ ಶರೀರ ನಾನು, ಇದಕ್ಕೆ ಸಂಬಂಧಿಸಿರುವುದೆಲ್ಲ ನನ್ನದು ಎಂಬ ಅಬಿಮಾನವೇ ಬಂಧಕಾರಣವು. ಅದನ್ನು ತೊರೆದು, ಆತ್ಮಜ್ಞಾನವನ್ನು ಸಂಪಾದಿಸಬೇಕು. ಆಗ ಮನಸ್ಸು ಎಲ್ಲಿದ್ದರೂ ಯಾವಾಗಲೂ ಸಮಾಧಿಸ್ಥಿತಿಯಲ್ಲಿ ಇರುತ್ತದೆ. ॥೧೧॥

ईप्सितं मनसः सर्वं कस्य सम्पद्यते सुखम्।
दैवाऽऽयत्तं यतः सर्वं तस्मात्सन्तोषमाश्रयेत्॥

ಮನಸ್ಸಿಗೆ ಬೇಕಾದುದೆಲ್ಲವೂ ದೊರಕಿಬಿಟ್ಟರೆ ಯಾರು ತಾನೇ ಸುಖವಾಗಿ ಇರುವುದಿಲ್ಲ? ಆದರೆ ಎಲ್ಲವೂ ಅದೃಷ್ಟದ ಅಧೀನವು. ಆದ್ದರಿಂದಲೇ ಸಂತೋಷವನ್ನು ಆಶ್ರಯಿಸಬೇಕು.

ನಾವು ಮನಸ್ಸಿನಿಂದ ಏನೇನನ್ನೋ ಬಯಸುತ್ತಲೇ ಇರುತ್ತೇವೆ. ಅವೆಲ್ಲವೂ ದೊರೆತರೆ ಎಲ್ಲರೂ ಸಂತೋಷವಾಗಿಯೇ ಇರುತ್ತಾರೆ. ಯಾರೂ ದುಃಖವನ್ನು ಬಯಸುವುದೂ ಇಲ್ಲ, ಪಡೆಯುವುದೂ ಇಲ್ಲ. ಆದರೆ ಈ ಲೋಕದಲ್ಲಿ ಹಾಗೇನೂ ನಡೆಯುತ್ತಿಲ್ಲ. ನಾವು ಅಪೇಕ್ಷಿಸಿದುದೆಲ್ಲವನ್ನು ಖಂಡಿತ ಪಡೆಯಲಾರೆವು. ಪ್ರತಿಯೊಬ್ಬರಿಗೂ ಬರುವ ಸುಖ-ದುಃಖಗಳು ದೈವಾಧೀನವಾದವುಗಳು. ನಮ್ಮ ಅಧೀನದಲ್ಲಿ ಇಲ್ಲದ ವಿಷಯಗಳಿಗೆ ಚಿಂತಿಸುವುದರ ಬದಲು, ದೊರಕಿದಷ್ಟಕ್ಕೆ ಸಂತೋಷದಿಂದಿರುವುದು ಒಳಿತು.॥೧೨॥

यथा धेनुसहस्रेषु वत्सो गच्छति मातरम्।
तथा यच्च कृतं कर्म कर्तारमनुगच्छति॥

ಸಾವಿರ ಹಸುಗಳಿದ್ದರೂ ಕರುವು ಹೇಗೆ ತನ್ನ ತಾಯಿಯನ್ನೇ ಹುಡುಕಿ ಕೊಂಡು ಹೋಗುತ್ತದೆಯೋ ಹಾಗೆಯೇ ಮಾಡಿರುವ ಕರ್ಮಗಳು ಕರ್ತೃವನ್ನೇ ಅನುಸರಿಸಿಕೊಂಡು ಹೋಗುತ್ತವೆ.

ಮಾಡಿದ ಕರ್ಮಗಳು ಶುಭವಾಗಲಿ, ಅಶುಭವಾಗಲಿ ಅದರ ಫಲವನ್ನು ಮಾಡಿದವನೇ ಅನುಭವಿಸಬೇಕು. ಈ ಜನ್ಮದ ಸುಖ-ದುಃಖಗಳು ಹಿಂದಿನ ಜನ್ಮಗಳಲ್ಲಿ ನಾವು ಮಾಡಿರುವ ಕರ್ಮಗಳ ಫಲ. ಅದಕ್ಕೆ ಕರುವಿನ ಉದಾಹರಣೆ ಕೊಟ್ಟಿದೆ.॥೧೩॥

अनवस्थितकार्यस्य न जने न वने सुखम्।
जने दहति संसर्गो वने संगविवर्जनम्॥

ಸರಿಯಾದ ಕೆಲಸವನ್ನು ಮಾಡದಿರುವವನಿಗೆ ಜನರ ಜೊತೆಯಲ್ಲಿಯಾಗಲೀ, ಕಾಡಿನಲ್ಲಿಯಾಗಲೀ ಸುಖವು ಸಿಕ್ಕುವುದಿಲ್ಲ. ಜನರ ಜೊತೆಯಲ್ಲಿದ್ದರೆ ಚುಚ್ಚು ಮಾತುಗಳನ್ನು ಕೇಳಬೇಕಾಗುತ್ತದೆ. ಕಾಡಿನಲ್ಲಿಯಾದರೆ ಯಾರ ಸ್ನೇಹವೂ ಇಲ್ಲದೆ ಒಂಟಿಯಾದ ಜೀವನ ಮಾಡಬೇಕಾಗುತ್ತದೆ.

ನಾಲ್ಕು ಜನರು ಮೆಚ್ಚುವಂತಹ ಕೆಲಸಗಳನ್ನೇ ಮಾಡಬೇಕು. ಜನರ ನಿಂದೆಗೆ ಪಾತ್ರವಾಗುವಂತಹ ಕೆಲಸಗಳನ್ನು ಮಾಡಿದರೆ ಅಂತಹವನು ಎಲ್ಲಿದ್ದರೂ ಸುಖವಾಗಿ ಇರಲಾರನು.॥೧೪॥

यथा खात्वा खनित्रेण भूतले वारि विन्दति।
तथा गुरुगतां विद्यां शुश्रूषुरधिगच्छति॥

ನೆಲವನ್ನು ಆಳವಾಗಿ ಅಗೆದಾಗ ನೀರು ಸಿಗುವಂತೆ, ಶಿಷ್ಯನು ಗುರುಗಳ

ಶುಶ್ರೂಷೆಯನ್ನು ಮಾಡಿ ಅವರಿಂದ ವಿದ್ಯೆಯನ್ನು ಪಡೆಯುತ್ತಾನೆ.

ಭೂಮಿಯನ್ನು ಹೆಚ್ಚು ಆಳವಾಗಿ ತೋಡಿದಷ್ಟು ಹೆಚ್ಚು ನೀರು ಸಿಗುತ್ತದೆ. ಅಂತೆಯೇ ಶಿಷ್ಯನು ಹೆಚ್ಚು ಶ್ರದ್ಧೆಯಿಂದ ಸೇವೆ ಮಾಡಿದರೆ ಗುರುವಿನಲ್ಲಿರುವ ವಿದ್ಯೆಯನ್ನು ಪಡೆಯಬಹುದು. ||೧೫||

कर्मायत्तं फलं पुंसां बुद्धिः कर्मानुसारिणी।
तथापि सुधियश्चाऽऽर्याः सुविचार्यैव कुर्वते॥

ಮನುಷ್ಯರಿಗೆ ಫಲವು ಕರ್ಮಕ್ಕೆ ಅಧೀನವಾದುದು. ಬುದ್ಧಿಯು ಕರ್ಮವನ್ನೇ ಅನುಸರಿಸುತ್ತದೆ. ಆದರೂ ಬುದ್ಧಿವಂತರಾದ ಪೂಜ್ಯರು ಚೆನ್ನಾಗಿ ಆಲೋಚನೆ ಮಾಡಿಯೇ ಕೆಲಸಗಳನ್ನು ಮಾಡುತ್ತಾರೆ.

ಮನುಷ್ಯನು ಎಷ್ಟೇ ಪ್ರಯತ್ನ ಪಟ್ಟು ಕೆಲಸಮಾಡಿದರೂ ಕೆಲವು ಸಲ ತಕ್ಕ ಫಲ ದೊರೆಯದಿರಬಹುದು. ಫಲವು ದೈವಾಧೀನವು. ಬುದ್ಧಿಯೂ ಅದರಂತೆ ಅನುಸರಿಸುತ್ತದೆ. ಹಾಗೆಂದ ಮಾತ್ರಕ್ಕೆ ನಮ್ಮ ಪ್ರಯತ್ನವನ್ನು ಸರಿಯಾಗಿ ಮಾಡಬಾರದೆಂದೇನೂ ಅಲ್ಲ. ಬುದ್ಧಿವಂತರಾದವರು ಫಲದ ಬಗ್ಗೆ ಯೋಚಿಸದೆ ಕೆಲಸವನ್ನು ಮಾತ್ರ ಚೆನ್ನಾಗಿ ಆಲೋಚಿಸಿಯೇ ಮಾಡುತ್ತಾರೆ. ||೧೬||

एकाक्षरप्रदातारं यो गुरुं नाभिवन्दति।
श्वानयोनिशतं भुक्त्वा चाण्डालेष्वभिजायते॥

ಒಂದು ಅಕ್ಷರವನ್ನು ಕಲಿಸಿದವನೂ ಕೂಡ ಗುರುವೇ. ಏಕಾಕ್ಷರವೆಂದರೆ ಓಂಕಾರವೂ ಆಗಬಹುದು. ಆ ರೀತಿಯ ಪರಬ್ರಹ್ಮವಿದ್ಯೆಯನ್ನು ಬೋಧಿಸಿದ ಗುರುವನ್ನು ಯಾರು ವಂದಿಸುವುದಿಲ್ಲವೋ ಅಂತಹವರು ನೂರು ಸಲ ನಾಯಿಯ ಜನ್ಮದಲ್ಲಿ ಹುಟ್ಟಿ, ನಂತರ ಚಾಂಡಾಲನಾಗಿ ಜನಿಸುತ್ತಾರೆ. ಕಲಿಸಿದಾತಂ ವರ್ಣಮಾತ್ರ ಗುರುವು ಎಂಬಂತೆ ಗುರುವು ಸದಾ ಪೂಜ್ಯನು. ಶಿಷ್ಯನು ಅವನನ್ನು ಗೌರವದಿಂದ ಕಾಣಬೇಕು ಇಲ್ಲದಿದ್ದರೆ ನೀಚ ಜನ್ಮಗಳನ್ನು ಹೊಂದಬೇಕಾಗುವುದು. ||೧೭||

युगान्ते प्रचलते मेरुः कल्पान्ते सप्त सागराः।
साधवः प्रतिपन्नार्थान् न चलन्ति कदाचन॥

ಯುಗದ ಕೊನೆಯಲ್ಲಿ ಮೇರುಪರ್ವತವೂ ಚಲಿಸಬಹುದು. ಕಲ್ಪಾಂತದಲ್ಲಿ ಸಪ್ತಸಾಗರಗಳು ಮೇರೆ ಮೀರಬಹುದು. ಸತ್ಪುರುಷರು ಮಾತ್ರ ತಾವು ಹಿಡಿದಿರುವ

ಕೆಲಸದಿಂದ ವಿಚಲಿತರಾಗುವುದಿಲ್ಲ.

ಪರ್ವತಗಳು ಅಲುಗಾಡುವುದಿಲ್ಲ. ಸಮುದ್ರನು ಮೇರೆಯನ್ನು ಮೀರುವುದಿಲ್ಲ ಮುಂತಾದವು ಪ್ರಕೃತಿ ನಿಯಮಗಳು. ಅದರಲ್ಲಾದರೂ ಬದಲಾವಣೆಯಾಗಬಹುದು. ಸತ್ಪುರುಷರು ಮಾತ್ರ ಒಪ್ಪಿಕೊಂಡ ಕೆಲಸದಲ್ಲಿ ಹಿಂಜರಿಯುವುದಿಲ್ಲ.॥೧೮॥

## ಅಧ್ಯಾಯದ ಸಾರಾಂಶ

ಮನುಷ್ಯ ಜನ್ಮ ಪದೇ ಪದೇ ಸಿಗದು. ಜಗತ್ತು ಕೂಡ ಅನಿತ್ಯ. ಮನುಷ್ಯ ಜನ್ಮ ಅಲ್ಪ ಸಮಯಕ್ಕೆ ಮೀಸಲಾದರೂ ಅವನು ಅಂಥಹ ಸಮಯದಲ್ಲಿ ಪುಣ್ಯ ಕಾರ್ಯಗಳನ್ನು ಮಾಡಲು ಯತ್ನಿಸಬೇಕು. ಯುಗಕ್ಕಿಂತಲೂ ಅಧಿಕ ಅವಸರ ಸಿಕ್ಕಿದ್ದರೂ ದುಷ್ಕರ್ಮಗಳಲ್ಲಿ ತೊಡಗಬಾರದು.

ಕಳೆದುಕೊಂಡ ಹಾಗೂ ಭವಿಷ್ಯದಲ್ಲಾಗುವ ಘಟನೆಗಳ ಬಗ್ಗೆ ಯೋಚಿಸಿ ವಿಶ್ಲೇಷಿಸುವ ಬದಲು ವರ್ತಮಾನ ಸಮಯದ ಘಟನೆಗಳ ಬಗ್ಗೆ ಪರಿಶೀಲಿಸಬೇಕೆಂದು ಆಚಾರ್ಯರು ತಿಳಿಸಿರುವರು.

ಮನುಷ್ಯನಿಗೆ ಯಶಸ್ಸು ತನ್ನ ಸ್ವಭಾವಕ್ಕೆ ಅನುಸಾರ ಸಿಗುವುದು. ತನ್ನ ಸ್ವಭಾವದಿಂದ ಸಜ್ಜನರು ಹಾಗೂ ತಂದೆ ತಾಯಿಯನ್ನು ಸಂತೈಸಬಹುದು. ಮಹಾತ್ಮರು ಹಣವನ್ನು ಎಳ್ಳಿನ ಕಾಳಿಗಿಂತಲೂ ತುಚ್ಛ ಭಾವನೆಯಿಂದ ಕಾಣುವರು. ತಮಗೆ ಅಪೇಕ್ಷೆಗಿಂತ ಅತ್ಯಧಿಕ ಹಣ ದೊರೆತರೂ ಅದರ ಮೇಲೆ ಅಭಿಮಾನ ಇಡರು. ವೃಕ್ಷದ ಕೊಂಬೆ-ರೆಂಬೆಗಳು ಹಣ್ಣುಗಳಿಂದ ತುಂಬಿದಾಗ ಬಗ್ಗುವ ಹಾಗೆ ನಮ್ರ ಸ್ವಭಾವದಿಂದ ಬಾಗುವರು. ಬಂಧು-ಬಾಂಧವರ ಕರ್ತವ್ಯ ಪೂರೈಸುವಾಗ ಆತ್ಮೀಯರಾಗಬಾರದು. ಕಾರಣ ವಿಯೋಗದ ಸಮಯದಲ್ಲಿ ಕಷ್ಟ-ಕಾರ್ಪಣ್ಯಗಳ ಅನುಭವ ಆಗುವುದು ಖಚಿತ.

ವ್ಯಕ್ತಿಗಳು ಸರ್ವದಾ ವಿಪತ್ತು ಒದಗುವ ಮುನ್ನ ಅವುಗಳಿಂದ ವಿಮುಖರಾಗಲು ಉಪಾಯ ನಡೆಸುತ್ತಾರೆ. ಬದುಕನ್ನು ಹಾಯಾಗಿ ಅನುಭವಿಸುತ್ತಿರುವರು. ಅದೃಷ್ಟವಶಾತ್ [illegible] ಮೇಲೆ ಭರವಸೆ ಇಡುತ್ತಾ ಕಷ್ಟ



## ||ಅಧ್ಯಾಯ - ೧೪||

**ಒಂದೇ ಪದಾರ್ಥವು ನೋಡುವವರನ್ನು ಅನುಸರಿಸಿ ಬೇರೆ ಬೇರೆ ಬಗೆಯಾಗಿ ಕಾಣುತ್ತದೆ. ಸುಂದರಿಯು ಯೋಗಿಗೆ ಶವದಂತೆಯೂ, ಕಾಮಿಗೆ ಅಪ್ಸರೆಯಂತೆಯೂ, ನಾಯಿಗೆ ಮಾಂಸದಂತೆಯೂ ಕಾಣುತ್ತಾಳೆ.**



पृथिव्यां त्रीणि रत्नानि जलमन्नं सुभाषितम्।
मूढैः पाषाणखण्डेषु रत्नसंज्ञा विधीयते॥

ಭೂಮಿಯಲ್ಲಿ ಮೂರು ರತ್ನಗಳು ಇರುವುವು. ಅವುಗಳೆಂದರೆ ನೀರು, ಅನ್ನ ಮತ್ತು ಸುಭಾಷಿತಗಳು. ಮೂರ್ಖರು ಕಲ್ಲಿನ ಚೂರನ್ನು ರತ್ನವೆಂದು ಭಾವಿಸುವರು.

ರತ್ನವೆಂದು ಸಾಧಾರಣರು ಭಾವಿಸುವುದು ಕಲ್ಲಿನ ಚೂರಿನಂತೆ ಬೆಲೆಯಿಲ್ಲದ ವಸ್ತುವು. ಅದಿಲ್ಲದೆಯೂ ಬದುಕಬಹುದು. ನೀರು, ಅನ್ನ ಮತ್ತು ಒಳ್ಳೆಯ ಮಾತುಗಳು ಜೀವನಕ್ಕೆ ಅತಿಮುಖ್ಯವಾದವುಗಳು. ಆದ್ದರಿಂದ ಅವೇ ಅನರ್ಘ್ಯರತ್ನಗಳು.॥೧॥

आत्माऽपराधवृक्षस्य फलान्येतानि देहिनाम्।
दारिद्र्यरोगदुःखानि बन्धनव्यसनानि च॥

ಬಡತನ, ರೋಗ, ದುಃಖಗಳು, ಬಂಧನ, ಚಟಗಳು ಇವುಗಳೆಲ್ಲ ಮನುಷ್ಯರಿಗೆ ತಮ್ಮದೇ ಅಪರಾಧವೆಂಬ ಮರದ ಹಣ್ಣುಗಳು.

ತಮ್ಮ ದುಷ್ಕರ್ಮದ ಕಾರಣದಿಂದಾಗಿಯೇ ಮನುಷ್ಯರು ಬಡತನವೇ ಮುಂತಾದ

ದುಃಖಗಳನ್ನು ಅನುಭವಿಸುತ್ತಾರೆ. ಒಳ್ಳೆಯ ಕರ್ಮಗಳನ್ನು ಮಾಡಿದರೆ ಅದಕ್ಕೆ ತಕ್ಕ ಫಲವೇ ಸಿಕ್ಕುತ್ತದೆ. ॥೨॥

**पुनर्वित्तं पुनर्मित्रं पुनर्भार्या पुनर्मही।**
**एतत्सर्वं पुनर्लभ्यं न शरीरं पुनः पुनः॥**

ಹಣ, ಗೆಳೆಯರು, ಹೆಂಡತಿ, ಭೂಮಿ ಇವೆಲ್ಲವೂ ಮತ್ತೆ ಮತ್ತೆ ಲಭ್ಯವಾಗತಕ್ಕವುಗಳು. ಆದರೆ ಶರೀರವು ಮಾತ್ರ ಪುನಃ ದೊರೆಯಲಾರದು.

ಹಣವು ಕಳೆದು ಹೋದರೆ ಮತ್ತೆ ಸಂಪಾದಿಸಬಹುದು. ಹಾಗೆಯೇ ಗೆಳೆಯರು ಹೊಸದಾಗಿ ಸಿಕ್ಕುತ್ತಿರುತ್ತಾರೆ. ಒಬ್ಬ ಹೆಂಡತಿ ಸತ್ತರೆ ಮತ್ತೊಬ್ಬಳನ್ನು ತರಬಹುದು. ಆದರೆ ಮನುಷ್ಯರ ಈ ಶರೀರ ಮಾತ್ರ ಒಮ್ಮೆ ನಾಶವಾದರೆ ಮತ್ತೆ ಬರಲಾರದು. ಆದ್ದರಿಂದ ಶರೀರ ಗಟ್ಟಿಯಾಗಿರುವಾಗ ಪುಣ್ಯ ಸಂಪಾದನೆ ಮಾಡಬೇಕು. ॥೩॥

**बहूनां चैव सत्त्वानां समवायो रिपुञ्जयः।**
**वर्षाधाराधरो मेघस्तृणैरपि निवार्यते॥**

ಅನೇಕ ಜನರು ಒಟ್ಟುಗೂಡಿದರೆ ಶತ್ರುಗಳನ್ನು ಜಯಿಸಬಲ್ಲರು. ಬಹಳವಾಗಿ ಮಳೆ ಸುರಿಸುವ ಮೋಡಗಳ ನೀರಿನ ಧಾರೆಯನ್ನು ಕೂಡ ಒಟ್ಟಾಗಿ ಬೆಳೆದಿರುವ ಹುಲ್ಲು ತಡೆದುಕೊಳ್ಳಬಲ್ಲದು.

ಒಗಟ್ಟಿನಲ್ಲಿ ಬಲವಿದೆಯೆಂಬ ತತ್ವವನ್ನು ಆಚಾರ್ಯರು ಈ ಶ್ಲೋಕದಲ್ಲಿ ವಿಶದಪಡಿಸಿರುತ್ತಾರೆ. ದೊಡ್ಡ ಮಳೆಗೆ ಎತ್ತರವಾದ ಒಂಟಿಮರಗಳು ಬಿದ್ದುಹೋಗಬಹುದು. ಆದರೆ ಒಟ್ಟಿಗೆ ಬೆಳೆದ ಹುಲ್ಲು ಅದನ್ನು ತಡೆದುಕೊಳ್ಳುತ್ತದೆ. ॥೪॥

**जले तैलं खले गुह्यं पात्रे दानं मनागपि।**
**प्राज्ञे शास्त्रं स्वयं याति विस्तारं वस्तुशक्तितः॥**

ನೀರಿನ ಮೇಲೆ ಬಿದ್ದ ಎಣ್ಣೆ, ದುಷ್ಟನಿಗೆ ಗೊತ್ತಾದ ಗುಟ್ಟಿನ ವಿಷಯ, ಸತ್ಪಾತ್ರದಲ್ಲಿ ಮಾಡಿದ ದಾನ, ಬುದ್ಧಿವಂತನು ಮಾಡಿದ ಶಾಸ್ತ್ರಾಭ್ಯಾಸ ಇವೆಲ್ಲವೂ ಸ್ವಶಕ್ತಿಯಿಂದಲೇ ವಿಸ್ತಾರವನ್ನು ಹೊಂದುತ್ತವೆ.

ನೀರಿನ ಮೇಲೆ ಎಣ್ಣೆಯ ಹನಿಯನ್ನು ಹಾಕಿದರೆ ಸ್ವಾಭಾವಿಕವಾಗಿಯೇ ವಿಸ್ತಾರವಾಗುತ್ತದೆ. ದುಷ್ಟನಲ್ಲಿ ಗುಟ್ಟನ್ನು ಹೇಳಿದರೆ ಸ್ವಲ್ಪ ಕಾಲದಲ್ಲಿಯೇ ಎಲ್ಲ ಕಡೆ ಹರಡುತ್ತದೆ. ಸತ್ಪಾತ್ರರಲ್ಲಿ ಸ್ವಲ್ಪ ದಾನವನ್ನು ಮಾಡಿದರೂ ಅವರು ದಾನಿಯನ್ನು

ವಿಶೇಷವಾಗಿ ಹೊಗಳುವುದರಿಂದ ಅವನ ದಾನಬುದ್ಧಿ ಪ್ರಕಟವಾಗುತ್ತದೆ. ಹಾಗೆಯೇ ಬುದ್ಧಿವಂತನು ಶಾಸ್ತ್ರವನ್ನು ಸ್ವಲ್ಪ ಅಭ್ಯಾಸಮಾಡಿದರೂ ಅಂತರಾರ್ಥವನ್ನು ಅರಿತು ವಿಸ್ತೃತವಾದ ಜ್ಞಾನವನ್ನು ಪಡೆಯುತ್ತಾರೆ.॥೫॥

धर्माऽऽख्याने श्मशाने च रोगिणां या मतिर्भवेत्।
सा सर्वदैव तिष्ठेच्चेत् को न मुच्येत बन्धनात्॥

ಧರ್ಮಸಂಬಂಧವಾದ ಪ್ರವಚನಗಳನ್ನು ಕೇಳುವಾಗ, ಶ್ಮಶಾನದಲ್ಲಿ ಬಂಧುಗಳನ್ನು ಅಗ್ನಿಗೆ ಸಮರ್ಪಿಸುವಾಗ, ರೋಗದಿಂದ ನರಳುತ್ತಿರುವಾಗ ಜನರಲ್ಲಿ ವೈರಾಗ್ಯ ಭಾವನೆಯು ಮೂಡುತ್ತದೆ. ಇದೆಲ್ಲವೂ ಅಶಾಶ್ವತವಾದವುಗಳು. ಈ ವೈರಾಗ್ಯವೇನಾದರೂ ಶಾಶ್ವತವಾಗಿ ಉಳಿದಿರುತ್ತಿದ್ದರೆ ಎಲ್ಲರೂ ಬಂಧನದಿಂದ ಮುಕ್ತರಾಗುತ್ತಿದ್ದರು.

ಪ್ರತಿ ಮನುಷ್ಯನೂ ಕೆಲವು ಸಂದರ್ಭಗಳಲ್ಲಿ ಶರೀರದ ನಶ್ವರತೆಯನ್ನು ಗುರ್ತಿಸಿ ವೈರಾಗ್ಯ ಭಾವನೆಯನ್ನು ತಾಳುತ್ತಾನೆ. ಆದರೆ ಸ್ವಲ್ಪ ಕಾಲದಲ್ಲಿಯೇ ಅದನ್ನು ಮರೆತು, ಮತ್ತೆ ಇವೆಲ್ಲವು ಶಾಶ್ವತವೋ ಎಂಬಂತೆ ಕರ್ಮಗಳಲ್ಲಿ ಪ್ರವೃತ್ತನಾಗುತ್ತಾನೆ. ಕ್ಷಣಿಕವಾದ ವೈರಾಗ್ಯವೇ ಶಾಶ್ವತವಾಗಿ ಇರುವುದಾದರೆ ಬಂಧನದಿಂದ ಎಲ್ಲರೂ ಮುಕ್ತರಾಗ ಬಲ್ಲರು.॥೬॥

उत्पन्नपश्चात्तापस्य बुद्धिर्भवति यादृशी।
तादृशी यदि पूर्वं स्यात् कस्य न स्यान्महोदयः॥

ಒಂದು ತಪ್ಪು ಕೆಲಸವನ್ನು ಮಾಡಿದರೆ ನಂತರ ಮಾಡಿದ ತಪ್ಪನ್ನು ತಿಳಿದು ಪಶ್ಚಾತ್ತಾಪ ಪಡುವವರು ಇದ್ದಾರೆ. ಹೀಗೆ ಕೆಲಸದ ನಂತರ ತಪ್ಪನ್ನು ತಿಳಿದುಕೊಳ್ಳುವ ಬದಲು, ತಪ್ಪು ಕೆಲಸದ ಮೊದಲೇ ಅಂತಹ ಬುದ್ಧಿಯು ಬಂದರೆ ಯಾರಿಗೆ ತಾನೇ ಬಹಳ ಅಭ್ಯುದಯವಾಗುವುದಿಲ್ಲ?

ಕೆಲವರು ಕೆಲಸವನ್ನು ಮಾಡುವ ಮೊದಲು ಅದರ ಸರಿ-ತಪ್ಪುಗಳನ್ನು ಯೋಚಿಸುವುದಿಲ್ಲ. ನಂತರ ಪಶ್ಚಾತ್ತಾಪ ಪಡುತ್ತಾರೆ. ಆದರೆ ಆಗಿಹೋದ ತಪ್ಪಿಗೆ ಕೇವಲ ಪರಿತಾಪದಿಂದ ಪ್ರಯೋಜನವೇನೂ ಆಗುವುದಿಲ್ಲ. ಅದರ ಬದಲು ಮೊದಲೇ ಯೋಚಿಸಿ ಕೆಲಸ ಮಾಡಿದರೆ ಬಹಳ ಒಳ್ಳೆಯದಾಗುವುದು.॥೭॥

दाने तपसि शौर्ये वा विज्ञाने विनये नये।
विस्मयो न हि कर्तव्यो बहुरत्ना वसुन्धरा॥

ದಾನ ಮಾಡುವುದರಲ್ಲಿ, ತಪಸ್ಸಿನಲ್ಲಿ, ಶೌರ್ಯದಲ್ಲಿ, ವಿಶೇಷವಾದ ಜ್ಞಾನದಲ್ಲಿ, ವಿನಯಶೀಲತೆಯಲ್ಲಿ, ನೀತಿಶಾಸ್ತ್ರ ಪಾಂಡಿತ್ಯದಲ್ಲಿ ಆಶ್ಚರ್ಯಪಡುವಂತಹುದು ಏನೂ ಇಲ್ಲ. ಭೂಮಿಯು ಅಂತಹ ಅನೇಕ ರತ್ನಪ್ರಾಯರಾದ ವ್ಯಕ್ತಿಗಳಿಂದ ತುಂಬಿರುತ್ತಾಳೆ.

ಭೂಮಿಯಲ್ಲಿ ದಾನಿಗಳು, ತಪಸ್ವಿಗಳು ಮುಂತಾದವರು ಸಾಕಷ್ಟು ಜನರು ಇದ್ದಾರೆ. ಅಲ್ಪದಾನಾದಿಗಳನ್ನು ಮಾಡಿ ಅದರ ಬಗ್ಗೆ ಹೆಮ್ಮೆ ಪಡುವ ಅವಶ್ಯಕತೆಯಿಲ್ಲ. ಭೂಮಿಯಲ್ಲಿ ಶ್ರೇಷ್ಠರಾದ ವ್ಯಕ್ತಿಗಳು ಇದ್ದೇ ಇರುತ್ತಾರೆ. ।।೮।.

दूरस्थोऽपि न दूरस्थो यो यस्य मनसि स्थितः।
यो यस्य हृदये नास्ति समीपस्थोऽपि दूरतः।।

ಯಾರು ಮನಸ್ಸಿನಲ್ಲಿಯೇ ಇರುತ್ತಾರೆಯೋ ಅವರು ದೂರದಲ್ಲಿದ್ದರೂ ಹತ್ತಿರದಲ್ಲಿ ಇದ್ದಂತೆ. ಯಾರು ಹೃದಯದಲ್ಲಿ ಇರುವುದಿಲ್ಲವೋ ಅವರು ಹತ್ತಿರವಿದ್ದರೂ ದೂರವಿದ್ದಂತೆ.

ಯಾರ ಬಗ್ಗೆ ನಮಗೆ ಪ್ರೀತಿ, ಅಭಿಮಾನಗಳು ಇರುತ್ತವೆಯೋ ಅವರನ್ನು ಮನಸ್ಸಿನಲ್ಲಿ ಸದಾ ನೆನಸುತ್ತೇನೆ. ಆದ್ದರಿಂದ ಅವರು ದೂರದಲ್ಲಿ ಇದ್ದರೂ ನಮಗೆ ಹತ್ತಿರದವರಾಗುತ್ತಾರೆ. ಯಾರ ಬಗ್ಗೆ ನಮಗೆ ಒಲವು ಇರುವುದಿಲ್ಲವೋ ಅವರು ಹತ್ತಿರವಿದ್ದರೂ ಗಮನಿಸುವುದಿಲ್ಲ. ಅವರು ದೂರವಿದ್ದಂತೆಯೇ ಆಗುತ್ತದೆ. ।।೯।।

यस्य चाप्रियमिच्छेत तस्य ब्रूयात् सदा प्रियम्।
व्याधो मृगवधं कर्तुं गीतं गायति सुस्वरम्।।

ಯಾರಿಗಾದರೂ ಅಪ್ರಿಯವಾದುದನ್ನು ಮಾಡಬೇಕೆಂಬ ಇಚ್ಛೆಯಿದ್ದರೆ ಸದಾ ಅವನಿಗೆ ಪ್ರಿಯವಾದುದನ್ನೆ ಹೇಳುತ್ತಿರಬೇಕು. ಬೇಡನು ಜಿಂಕೆಯನ್ನು ವಧಿಸುವ ಮೊದಲು ಅದಕ್ಕೆ ಪ್ರಿಯವಾದ ಸ್ವರವನ್ನು ಹಾಡುತ್ತಾನೆ.

'ಹಿತಂ ಮನೋಹಾರಿ ಚ ದುರ್ಲಭಂ ವಚಃ' ಎಂಬಂತೆ ಹಿತವಾದ ಮಾತು ಪ್ರಿಯವಾಗಿರುವುದಿಲ್ಲ. ಹಾಗೆಯೇ ಪ್ರಿಯವಾದ ಮಾತು ಹಿತವಾಗಿರಬೇಕಾಗಿಲ್ಲ. ಒಬ್ಬನನ್ನು ಮರುಳು ಮಾಡಬೇಕಾದರೆ ಅವನಿಗೆ ಪ್ರಿಯವಾಗುವಂತಹ ಮಾತುಗಳಿಂದ ಅವನನ್ನು ಹೊಗಳುತ್ತಿರಬೇಕು. ಆಗ ಅವನು ಪ್ರಿಯವಕ್ತಾರನನ್ನು ಹಿತಕಾರಿಯೆಂದು ಭಾವಿಸುವನು. ಆಗ ಅವನಿಗೆ ಸುಲಭವಾಗಿ ಮೋಸಮಾಡಿ ಅಪ್ರಿಯವಾದ ಕಾರ್ಯವನ್ನು ಮಾಡಬಹುದು. ಅಂದರೆ ಸುಮ್ಮನೆ ಹೊಗಳುವವರನ್ನು ನಂಬಬಾರದೆಂಬ ಬುದ್ಧಿವಾದವೂ ಇದರಲ್ಲಿ ಅಡಗಿದೆ. ಜಿಂಕೆಯು ಬೇಡನ ಸುಸ್ವರಕ್ಕೆ ಮರುಳಾಗಿ ಹೋಗಿ

ಅವನ ಬಲೆಯಲ್ಲಿ ಬೀಳುತ್ತದೆ. ॥೧೦॥

अत्यासन्ना विनाशाय दूरस्था न फलप्रदा:।
सेवितव्यं मध्यभागेन राजा वह्निर्गुरु: स्त्रिय:॥

ರಾಜರು, ಬೆಂಕಿ, ಗುರುಗಳು ಮತ್ತು ಸ್ತ್ರೀಯರಲ್ಲಿ ಅತ್ಯಂತ ಹತ್ತಿರವಾಗಿ ಸಲುಗೆಯನ್ನು ಬೆಳೆಸಿದರೆ ವಿನಾಶವು ಖಚಿತವು. ಅತಿ ದೂರವಾಗಿದ್ದರೆ ಪ್ರಯೋಜನವಾಗುವುದಿಲ್ಲ, ಆದ್ದರಿಂದ ಎರಡಕ್ಕೂ ಮಧ್ಯದಲ್ಲಿದ್ದು ಸೇವಿಸಬೇಕು.

ರಾಜರಲ್ಲಿ ಅತಿ ಸಲುಗೆ ಬೆಳೆಸಿದರೆ ಅಪಾಯ ಹೆಚ್ಚು. ಅವರಿಂದ ಬಹಳ ದೂರವಿದ್ದರೆ ರಾಜಾನುಗ್ರಹವನ್ನು ಪಡೆಯಲಾಗುವುದಿಲ್ಲ. ಬೆಂಕಿಯೂ ಹಾಗೆಯೇ ಬಹಳ ಹತ್ತಿರ ಕುಳಿತರೆ ಸುಡುತ್ತದೆ. ದೂರ ಹೋದರೆ ಶಾಖವೇ ಸಿಗುವುದಿಲ್ಲ. ಗುರುಗಳಲ್ಲಿಯೂ ವಿಧೇಯತೆ, ನಮ್ರತೆಯಿರಬೇಕೇ ಹೊರತು ಅತಿ ಸಲುಗೆ ಸಲ್ಲದು. ಸ್ತ್ರೀಯರ ವಿಷಯದಲ್ಲೂ ಅಷ್ಟೇ. ಇವರೆಲ್ಲರಿಂದ ಪ್ರಯೋಜನ ಪಡೆಯಬೇಕಾದರೆ ಎಚ್ಚರಿಕೆಯಿಂದ ವರ್ತಿಸಬೇಕು. ॥೧೧॥

अग्निराप: स्त्रियो मूर्खा: सर्पा राजकुलानि च।
नित्यं यत्नेन सेव्यानि सद्य: प्राणहराणि षट्॥

ಬೆಂಕಿ, ನೀರು, ಸ್ತ್ರೀಯರು, ಮೂರ್ಖರು, ಸರ್ಪಗಳು, ರಾಜವಂಶದವರು ಇವರುಗಳನ್ನು ಯಾವಾಗಲೂ ಪ್ರಯತ್ನ ಪೂರ್ವಕವಾಗಿ ಸೇವಿಸಬೇಕು. ಇಲ್ಲದಿದ್ದರೆ ಈ ಆರೂ ಕೂಡಲೇ ಪ್ರಾಣಹರಣ ಮಾಡುವಂತಹವುಗಳು.

ಬೆಂಕಿಯು ಸರಿಯಾಗಿ ಉಪಯೋಗಿಸಿದಾಗ ಬಹಳ ಪ್ರಯೋಜನಕಾರಿಯು. ಎಚ್ಚರ ತಪ್ಪಿದರೆ ಕೂಡಲೇ ಪ್ರಾಣಹರಣ ಮಾಡುವುದು. ನೀರು ಕೂಡ ಅಂತೆಯೇ ನೀರಿನಲ್ಲಿ ಈಜುವವನು ಎಚ್ಚರವಾಗಿರಬೇಕು. ಸ್ತ್ರೀಯರು ಮತ್ತು ಮೂರ್ಖರ ವಿಷಯದಲ್ಲಿಯೂ ಹೀಗೆಯೇ ಎಚ್ಚರವಾಗಿರಬೇಕು. ಅವರಲ್ಲಿ ರಹಸ್ಯವಿಷಯಗಳನ್ನು ಹೇಳಬಾರದು. ಸರ್ಪ ಮತ್ತು ರಾಜವಂಶದವರೂ ಕೂಡ ಅಪಾಯಕಾರಿಗಳು. ಇವರೆಲ್ಲರ ಸಂಪರ್ಕದಲ್ಲಿರುವಾಗ ಬಹಳ ಎಚ್ಚರವಾಗಿರಬೇಕು. ॥೧೨॥

स जीवति गुणा यस्य यस्य धर्म: स जीवति।
गुणधर्मविहीनस्य जीवितं निष्प्रयोजनम्॥

ಯಾರು ಗುಣವಂತನೋ ಅವನು ಜೀವಿಸಿರುತ್ತಾನೆ. ಯಾರಲ್ಲಿ ಧರ್ಮವಿದೆಯೋ

ಅವನೂ ಜೀವಿಸುತ್ತಾನೆ. ಗುಣ ಮತ್ತು ಧರ್ಮಗಳು ಇಲ್ಲದವನ ಜೀವನವು ನಿಷ್ಪ್ರಯೋಜಕವು.

ಜಗತ್ತಿನಲ್ಲಿ ಅನೇಕ ಬಗೆಯ ಜನರಿದ್ದಾರೆ. ಅವರೆಲ್ಲರೂ ಉಸಿರಾಟದಿಂದ ಜೀವಿಸಿರುತ್ತಾರೆ. ಆದರೆ ಅವರ ಜೀವನದಿಂದ ಏನೂ ಪ್ರಯೋಜನವಿಲ್ಲವು. ಯಾರು ಗುಣವಂತನೋ, ಯಾರು ಧರ್ಮಾತ್ಮನೋ ಅವನ ಬದುಕು ಸಾರ್ಥಕವು.॥೧೩॥

यदीच्छसि वशीकर्तुं जगदेकेन कर्मणा।
परापवादसस्येभ्यो गां चरन्तीं निवारय॥

ಇಡೀ ಜಗತ್ತನ್ನು ಒಂದೇ ಒಂದು ಕೆಲಸದಿಂದ ವಶಮಾಡಿಕೊಳ್ಳಲು ಇಷ್ಟಪಡುವೆಯಾದರೆ ಪರರ ಅಪವಾದವೆಂಬ ಸಸ್ಯಗಳನ್ನು ಮೇಯುತ್ತಿರುವ ಹಸುವನ್ನು ನಿವಾರಿಸು.

ಇನ್ನೊಬ್ಬರಿಗೆ ಅಪವಾದ ಹೊರಿಸುವುದು ಅತ್ಯಂತ ಹೇಯವಾದ ಕೆಲಸ. ಅಂತಹವನನ್ನು ಯಾರೂ ಇಷ್ಟಪಡುವುದಿಲ್ಲ. ಅಂತಹ ಪರಾಪವಾದದ ಮೇಲೆ ಬದುಕಿರುವ ಘಾತುಕರನ್ನು ನಿವಾರಿಸುವುದು ಶ್ರೇಷ್ಠವಾದ ಕೆಲಸ. ಹಾಗೆ ಮಾಡಿದರೆ ಜಗತ್ತಿನಲ್ಲಿ ಉತ್ತಮ ವ್ಯಕ್ತಿಯೆನಿಸಿಕೊಳ್ಳಬಹುದು. 'ಗಾಂ' ಎಂಬ ಪದಕ್ಕೆ ಭೂಮಿಯೆಂಬ ಅರ್ಥವೂ ಇದೆ. ಪರದೂಷಕರಿಂದ ಭೂಮಿಯನ್ನು ದೂರಗೊಳಿಸು ಎಂದೂ ಅರ್ಥಮಾಡಬಹುದು.॥೧೪॥

प्रस्तावसदृशं वाक्यं प्रभावसदृशं प्रियम्।
आत्मशक्तिसमं कोपं यो जानाति स पण्डितः॥

ಸಂದರ್ಭಕ್ಕೆ ಸರಿಯಾದ ಮಾತುಗಳನ್ನು ಬಳಸುವುದು, ಪ್ರಭಾವವನ್ನು ಉಂಟುಮಾಡುವುದಕ್ಕೆ ತಕ್ಕಂತೆ ಪ್ರಿಯವಾಗಿ ನಡೆದುಕೊಳ್ಳುವುದು, ತನ್ನ ಶಕ್ತಿಗೆ ಅನುಗುಣವಾಗಿ ಕೋಪಿಸಿಕೊಳ್ಳುವುದು, ಇವುಗಳನ್ನು ಯಾರು ತಿಳಿದುಕೊಳ್ಳುತ್ತಾರೋ ಅವನು ಪಂಡಿತನು.

ಸಂದರ್ಭವನ್ನು ನೋಡಿಕೊಂಡು ಸೂಕ್ತವಾಗಿ ಮಾತನಾಡಬೇಕು. ತನ್ನ ಪ್ರಭಾವಕ್ಕೆ ಕುಂದಾಗದಂತೆ ಪ್ರಿಯವಾಗಿ ವರ್ತಿಸಬೇಕು. ಕೋಪವು ವ್ಯರ್ಥವಾಗದಂತೆ ತನ್ನ ಶಕ್ತಿಯನ್ನು ಬಳಸಿಕೊಳ್ಳಬೇಕು. ಇದು ಪಂಡಿತನ ಲಕ್ಷಣವು. ॥೧೫॥

एक एवं पदार्थस्तु त्रिधा भवति वीक्षितः।

कुणप: कामिनी मांसं योगिभि: कामिभि: श्वभि:॥

ಒಂದೇ ಪದಾರ್ಥವಾದರೂ ನೋಡುವವರ ನೋಟವನ್ನು ಅನುಸರಿಸಿ ಮೂರು ಬಗೆಯಾಗುತ್ತವೆ. ಯೋಗಿಗಳು ಸುಂದರಳಾದ ಸ್ತ್ರೀಯನ್ನು ನೋಡಿದರೂ ಶವಸಮಾನವಾಗಿ ಆ ದೇಹದಲ್ಲಿ ವೈರಾಗ್ಯವನ್ನು ತಾಳುವರು. ಕಾಮಾತುರರಾದವರಿಗೆ ಅದೇ ಸ್ತ್ರೀ ಸುಂದರಳಾಗಿ ಕಾಣುತ್ತಾಳೆ. ನಾಯಿಯೊಂದಕ್ಕೆ ದೇಹವೆಂದರೆ ಮಾಂಸದ ಮುದ್ದೆ. ಹೀಗೆ ಅವರವರ ಭಾವನೆಗೆ ಅನುಸಾರವಾಗಿ ವಸ್ತುವಿನ ಲಕ್ಷಣಗಳು ಬೇರೆ ಬೇರೆ ಆಗುವುವು.॥೧೬॥

सुसिद्धमौषधं धर्मं गृहच्छिद्रं च मैथुनम्।
कुभुक्तं कुश्रुतं चैव मतिमान्न प्रकाशयेत्॥

ಚೆನ್ನಾಗಿ ಸಿದ್ಧಪಡಿಸಿರುವ ಔಷಧ, ಧರ್ಮ, ಮನೆಯ ಜಗಳ, ಸಂಭೋಗ, ಕೆಟ್ಟದಾದ ಊಟ, ಕೆಟ್ಟಮಾತುಗಳನ್ನು ಕೇಳಿರುವುದು ಇವುಗಳನ್ನು ಬುದ್ಧಿವಂತನಾದವನು ಪ್ರಕಾಶಪಡಿಸಬಾರದು.

ಔಷಧವನ್ನು ಸಿದ್ಧಪಡಿಸುವ ವಿಧಾನವನ್ನು ಹೇಳಿಕೊಡಬಾರದು. ಅದನ್ನು ಉಪಯೋಗಿಸುವದಷ್ಟನ್ನೇ ಹೇಳಬೇಕು. ತಾನು ಮಾಡಿದ ಧರ್ಮವನ್ನು ಹೇಳಿಕೊಳ್ಳಬಾರದು. ಹಾಗೆಯೇ ಸಂಸಾರದ ಗುಟ್ಟಿನ ವಿಷಯಗಳನ್ನು ಹೊರಗೆಡಹಬಾರದು. ಯಾರ ಮನೆಯಲ್ಲಿಯೂ ಊಟವು ಕೆಟ್ಟದಾಗಿದ್ದರೂ ಬಹಿರಂಗವಾಗಿ ನಿಂದಿಸಬಾರದು. ಕೇಳಿದ ಕೆಟ್ಟ ವಿಷಯಗಳನ್ನು ಅಲ್ಲಿಯೇ ಮರೆತು ಬಿಡಬೇಕು. ಇವೆಲ್ಲವೂ ಬುದ್ಧಿವಂತರ ಲಕ್ಷಣಗಳು.॥೧೭॥

तावन्मौनेन नीयन्ते कोकिलैश्चैव वासरा:।
यावत्सर्वजनानन्ददायिनी वाक्प्रवर्तते॥

ಎಲ್ಲಿಯವರೆಗೆ ಸರ್ವರಿಗೂ ಆನಂದವನ್ನು ಕೊಡುವಂತಹ ಸ್ವರವು ಅಭಿವೃದ್ಧಿಯಾಗಿರುವುದಿಲ್ಲವೋ ಅಲ್ಲಿಯವರೆಗೆ ಕೋಗಿಲೆಯೂ ಮೌನವಾಗಿ ದಿನಗಳನ್ನು ಕಳೆಯುತ್ತದೆ.

ಕೋಗಿಲೆ ಯಾವಾಗಲೂ ಕೂಗುವುದಿಲ್ಲ. ತನ್ನ ಧ್ವನಿಯಿಂದ ಜಗತ್ತಿನ ಜನರಿಗೆ ಆನಂದವಾಗುತ್ತದೆಂಬ ನಂಬಿಕೆಯೂ ಬಂದಾಗಲೇ ಬಾಯಿ ತೆರೆಯುತ್ತದೆ. ಬುದ್ಧಿವಂತನಾದವನು ಕೂಡ ತನ್ನ ಮಾತಿನಿಂದ ಕೇಳುವವರಿಗೆ ಸಂತೋಷವಾಗುತ್ತದೆಂದು ತಿಳಿದಾಗಲೇ ಮಾತನಾಡಬೇಕು. ಅಲ್ಲಿಯವರೆಗೆ ಮೌನವಾಗಿರಬೇಕು.॥೧೮॥

धर्मं धनं च धान्यं च गुरोर्वचनमौषधम्।
सुगृहीतं च कर्तव्यमन्यथा तु न जीवति॥

ಧರ್ಮ, ಧನ, ದಾನ್ಯ, ಗುರುಗಳ ವಚನ, ಔಷಧ ಇವುಗಳನ್ನು ಸರಿಯಾಗಿ ಸ್ವೀಕರಿಸಬೇಕು. ಇಲ್ಲದಿದ್ದರೆ ಪ್ರಯೋಜನವಾಗುವುದಿಲ್ಲ.

ಧರ್ಮಕಾರ್ಯಗಳನ್ನು ವಿಧಿವತ್ತಾಗಿ ಮಾಡಬೇಕು. ಧನವನ್ನು ಸರಿಯಾದ ರೀತಿಯಲ್ಲಿ ಸಂಪಾದಿಸಬೇಕು. ಧಾನ್ಯವನ್ನು ಸರಿಯಾಗಿ ಸಂಗ್ರಹಿಸಬೇಕು. ಗುರುಗಳ ಮಾತಿನ ಅರ್ಥವನ್ನು ಸರಿಯಾಗಿ ಗ್ರಹಿಸಬೇಕು. ಔಷಧವನ್ನು ಕ್ರಮವಾಗಿ ಸೇವಿಸಬೇಕು. ಇಲ್ಲದಿದ್ದರೆ ಅವು ಪ್ರಯೋಜನಕ್ಕೆ ಬರುವುದಿಲ್ಲ. ॥೧೯॥

त्यज दुर्जनसंसर्गं भज साधुसमागमम्।
कुरु पुण्यमहोरात्रं स्मर नित्यमनित्यताम्॥

ಓ ಮನುಷ್ಯನೇ, ದುಷ್ಟರ ಸಂಗ ತೊರೆದು ಉದಾತ್ತರ ತೆಕ್ಕೆಗೆ ಸೇರಿಕೊ. ಪ್ರತಿ ಹಗಲೂ ರಾತ್ರಿ ಒಳ್ಳೆಯ ಕೆಲಸಗಳನ್ನೇ ಮಾಡುತ್ತ ದೇವರನ್ನು ನೆನೆಯುತ್ತಿರು. ಏಕೆಂದರೆ, ಒಂದು ದಿನ ಈ ಲೋಕ ನಾಶಗೊಳ್ಳುವುದು.

ಕೆಟ್ಟವರೊಡನೆ ವ್ಯವಹರಿಸುತ್ತಿದ್ದರೆ ಸಹವಾಸ ದೋಷದಿಂದಾಗಿ ಅವರ ದುಷ್ಟ ಚಿಂತನೆಗಳ ಪ್ರಭಾವಕ್ಕೆ ನಾವೂ ಸಿಲುಕಬಹುದು. ಅದೇ ಲೋಕಕಲ್ಯಾಣದ ಚಿಂತನೆಗಳನ್ನು ಮಾಡುವ ಸಜ್ಜನರೊಡನೆ ಕೂಡಿ ಬಾಳಿದರೆ ನಮ್ಮ ಮನವು ಸ್ಫಟಿಕದಷ್ಟು ಶುಭ್ರವಾಗುವುದು. ನಮ್ಮ ಮನವು ನೆಮ್ಮದಿಯಿಂದ ಸಂತೋಷದಿಂದ ಕೂಡಿರಬೇಕೆಂದು ನಾವು ಆಶಿಸುವುದೇ ಆದರೆ ಅದಕ್ಕಿರುವ ಮಾರ್ಗವೆಂದರೆ ಸದಾ ಒಳ್ಳೆಯ ಕೆಲಸಗಳನ್ನೇ ಮಾಡುವುದು, ಸದಾ ಇತರರ ಕುರಿತು ಒಳ್ಳೆಯದನ್ನೇ ಚಿಂತಿಸುವುದು. ಇದರ ಜೊತೆ ಜೊತೆಗೆ ನಮಗೆ ಈ ಆನಂದ ದೊರೆಯಲು ಕಾರಣಕರ್ತನಾದ ಭಗವಂತನನ್ನು ನಾವು ಸದಾ ಸ್ಮರಿಸಬೇಕಾದದ್ದು ನಮ್ಮ ಕರ್ತವ್ಯವೇ ಆಗಿದೆ. ಪ್ರತಿಯೊಂದು ಲೌಕಿಕ ವಸ್ತುವಿಗೆ ಕೊನೆಯಿರುವಂತೆ ಅಥವಾ ಅದು ಬೇರೆ ರೂಪ ಪಡೆಯುವಂತೆ ನಾವಿರುವ ಈ ಲೋಕವೂ ನಾಶಗೊಳ್ಳುತ್ತದೆ. ಇದು ಖಂಡಿತ. ಅಷ್ಟರಲ್ಲಿ ಒಳ್ಳೆಯ ಕೆಲಸ ಮಾಡಿ ಉದಾತ್ತ ಚಿಂತನೆಯತ್ತ ಮನಸ್ಸನ್ನು ಕೊಂಡೊಯ್ಯಿರಿ ಎಂದು ಈ ಶ್ಲೋಕ ಹೇಳುತ್ತದೆ. ॥೨೦॥

## ಅಧ್ಯಾಯದ ಸಾರಾಂಶ

ಉಪಯುಕ್ತ ಮಾಹಿತಿಯಿಂದ ಉತ್ಕೃಷ್ಟ ಬದುಕಿಗೆ ನೆರವಾಗುವ ಸಂದೇಶ ನೀಡಲು ಆಚಾರ್ಯರು ಇಚ್ಛೆಪಟ್ಟಿರುವರು.



## || ಅಧ್ಯಾಯ - ೧೫||

**ಅನ್ಯಾಯದಿಂದ ಆರ್ಜಿಸಿದ ಹಣ ಹತ್ತು ವರ್ಷದವರೆಗೆ ಅಂದರೆ ಸ್ವಲ್ಪಕಾಲ ಇದ್ದು ಹನ್ನೊಂದನೆಯ ವರ್ಷವಾದಂತೆ ಬಂಡವಾಳವು ಬಡ್ಡಿ ಸಹಿತ ನಾಶವಾಗುವುದೆಂದು ಆಚಾರ್ಯರು ಅಭಿಪ್ರಾಯ ಪಟ್ಟಿರುವರು.**



यस्य चित्तं द्रवीभूतं कृपया सर्वजन्तुषु।
तस्य ज्ञानेन मोक्षेण किं जटाभस्मलेपनैः॥

ಯಾರ ಮನಸ್ಸು ಎಲ್ಲ ಪ್ರಾಣಿಗಳ ವಿಷಯದಲ್ಲಿ ಕೃಪೆಯಿಂದ ಕರಗಿ ಹೋಗುತ್ತದೋ ಅವನಿಗೆ ಜ್ಞಾನ, ಮೋಕ್ಷ, ಜಟೆ, ವಿಭೂತಿಧಾರಣೆ ಮುಂತಾದವುಗಳಾದರೂ ಏಕೆ ಬೇಕು?

ಪ್ರಾಣಿದಯೆಯೆಂಬುದು ಎಲ್ಲ ಧರ್ಮಗಳಿಗಿಂತ ಮಿಗಿಲಾದುದು. ಒಬ್ಬ ವ್ಯಕ್ತಿಯು ದಯಾವಂತನಾದರೆ ಅದಕ್ಕಿಂತ ಹೆಚ್ಚಿನ ಸಾಧನೆಯ ಅವಶ್ಯಕತೆ ಇಲ್ಲ. ಅವನಿಗೆ ಜ್ಞಾನಕ್ಕಾಗಿ ಗ್ರಂಥಗಳನ್ನು ಓದುವ ಅವಶ್ಯಕತೆಯಾಗಲೀ, ಮೋಕ್ಷಕ್ಕಾಗಿ ಸಂನ್ಯಾಸ ಸ್ವೀಕಾರ ಮಾಡಿ ಜಟೆ, ವಿಭೂತಿ ಧರಿಸಿ ತಪ ಮಾಡುವುದಾಗಲೀ ಬೇಕಿಲ್ಲ. ||೧||

एकमेवाक्षरं यस्तु गुरुः शिष्यं प्रबोधयेत्।
पृथिव्यां नास्ति तद्द्रव्यं यद्दत्वा चाऽनृणी भवेत्॥

ಗುರುವಾದವನು ಶಿಷ್ಯನಿಗೆ ಒಂದು ಅಕ್ಷರವನ್ನು ಕಲಿಸಿದರೂ ಅದರ ಋಣವನ್ನು ತೀರಿಸಲು ಭೂಮಿಯ ಮೇಲಿರುವ ಯಾವ ದ್ರವ್ಯದಿಂದಲೂ ಆಗುವುದಿಲ್ಲ.

ಭಾರತೀಯ ಸಂಸ್ಕೃತಿಯಲ್ಲಿ ಗುರುವಿಗೆ ಬಹಳ ಮಹತ್ವವಿದೆ. ಒಂದು ಅಕ್ಷರವನ್ನು ಕಲಿಸಿದರೂ ಅವನನ್ನು ಗುರುವೆಂದು ಗೌರವಿಸಬೇಕು. ಗುರುವಿನ ಋಣವು ಅಗಾಧವಾದುದು. ಪ್ರಪಂಚದಲ್ಲಿರುವ ವಸ್ತುಗಳನ್ನೆಲ್ಲ ಕೊಟ್ಟರೂ ಅದು ತೀರಲಾರದು. ಒಂದು ಅಕ್ಷರ ವೆಂದರೆ ಓಂಕಾರವೆಂದೂ, ಇಲ್ಲಿ ಗುರುವೆಂದರೆ ಅಧ್ಯಾತ್ಮಿಕ ಗುರುವೆಂದೂ ಕೆಲವರು ಹೇಳುತ್ತಾರೆ. ಯಾವ ರೀತಿಯಾದರೂ ಗುರುವು ಪೂಜ್ಯತಮನು.।।೨।।

खलानां कण्टकानां च द्विविधैव प्रतिक्रिया।
उपानन्मुखभंगो वा दूरतो वा विसर्जनम्॥

ದುಷ್ಟರು ಮತ್ತು ಮುಳ್ಳುಗಳು ಇವೆರಡಕ್ಕೂ ಎರಡೇ ರೀತಿಯ ಪ್ರತಿಕ್ರಿಯೆಗಳು ಇರುವುವು. ಮೊದಲನೆಯದು ಚರ್ಮದ ಚಪ್ಪಲಿಯಿಂದ ಮುಖಭಂಗ ಮಾಡುವುದು. ಎರಡನೆಯದು ದೂರದಿಂದಲೇ ವಿಸರ್ಜಿಸುವುದು.

ದುಷ್ಟರು ಮತ್ತು ಮುಳ್ಳು ಎರಡೂ ಒಂದೇ ಸಮನಾದ ಅಪಾಯಕಾರಿಗಳು. ಅವುಗಳಿಂದ ತಪ್ಪಿಸಿಕೊಳ್ಳಲು ಎರಡು ಉಪಾಯಗಳನ್ನು ಆಚಾರ್ಯರು ಹೇಳಿರುತ್ತಾರೆ. ಒಂದು ಚಪ್ಪಲಿಯಿಂದ ಮುಖಭಂಗ. ದುಷ್ಟನ ವಿಷಯದಲ್ಲಿ ಅವನನ್ನು ಚಪ್ಪಲಿಯಿಂದ ಹೊಡೆದು ನಮ್ಮ ತಂಟೆಗೆ ಬರದಂತೆ ಮಾಡುವುದು. ಮುಳ್ಳಿನ ವಿಷಯದಲ್ಲಿ ಚಪ್ಪಲಿಯನ್ನು ಹಾಕಿಕೊಂಡು ಮುಳ್ಳನ್ನು ತುಳಿದರೆ ಅದರ ಮುಂಭಾಗ ಮುರಿದುಹೋಗುತ್ತದೆ. ಎರಡನೆಯ ಉಪಾಯವೆಂದರೆ ದುಷ್ಟರಿಂದ ಮತ್ತು ಮುಳ್ಳಿರುವ ಪ್ರದೇಶದಿಂದ ದೂರವಿರುವುದು.।।೩।।

कुचैलिनं दन्तमलोपसृष्टं
बह्वाशिनं निष्ठुरभाषिणं च।
सूर्योदये चास्तमिते शयानं
विमुञ्चति श्रीर्यदि चक्रपाणिः॥

ಮಲಿನವಾದ ವಸ್ತುಗಳನ್ನು ಧರಿಸುವವನನ್ನು, ಹಲ್ಲುಗಳನ್ನು ಉಜ್ಜದವನನ್ನು ಬಹಳವಾಗಿ ತಿನ್ನುವವನನ್ನು, ಕಠಿನವಾಗಿ ಮಾತನಾಡುವವನನ್ನು, ಸೂರ್ಯೋದಯ ಮತ್ತು ಸೂರ್ಯಾಸ್ತಗಳ ಸಮಯದಲ್ಲಿ ಮಲಗುವವನನ್ನು ವಿಷ್ಣುಸ್ವರೂಪನೇ ಆದರೂ ಲಕ್ಷ್ಮಿಯು ತ್ಯಜಿಸುತ್ತಾಳೆ.

ಮನುಷ್ಯನು ಶುದ್ಧವಾದ ವಸ್ತುಗಳನ್ನು ಧರಿಸಬೇಕು. ಹಲ್ಲುಗಳನ್ನು ಶುಭ್ರವಾಗಿ ತಿಕ್ಕಬೇಕು. ಮಿತವಾಗಿ ಊಟಮಾಡಬೇಕು. ಮೃದುವಾಗಿ ಮಾತನಾಡಬೇಕು. ಸೂರ್ಯನ

ಉದಯಾಸ್ತ ಸಮಯಗಳಲ್ಲಿ ನಿದ್ರಿಸಬಾರದು. ಇವು ಧಾರ್ಮಿಕ ಮತ್ತು ಆರೋಗ್ಯ ಮೂಲಕವಾದ ನಿಯಮಗಳು. ಈ ನಿಯಮಗಳನ್ನು ಮೀರಿದವನು ಸಾಕ್ಷಾತ್ ವಿಷ್ಣುವೇ ಆದರೂ ಅವನನ್ನು ಲಕ್ಷ್ಮಿಯು ತಿರಸ್ಕರಿಸುವಳು. ಅಂದರೆ ಅವನು ಎಷ್ಟೇ ಉಳಿದ ಗುಣಗಳಿಂದ ಪರಿಪೂರ್ಣನಾಗಿದ್ದರೂ, ಲಕ್ಷ್ಮಿಯು ಸ್ಥಿರತೆಗೆ ಮೇಲಿನ ಗುಣಗಳು ಬಹಳ ಮುಖ್ಯವಾದವುಗಳು.॥೪॥

त्यजन्ति मित्राणि धनैर्विहीनं
दाराश्च भृत्याश्च सुहृज्जनाश्च।
तं चार्थवन्तं पुनराश्रयन्ते
अर्थो हि लोके पुरुषस्य बन्धुः॥

ಹಣವಿಲ್ಲದವನನ್ನು ಮಿತ್ರರು, ಹೆಂಡತಿ, ಸೇವಕರು, ಹಿತೈಷಿಗಳು ಎಲ್ಲರೂ ತ್ಯಜಿಸುತ್ತಾರೆ. ಅವರೆಲ್ಲರೂ ಧನವಂತನಾದರೆ ಮತ್ತೆ ಬಂದು ಸೇರುತ್ತಾರೆ. ಧನವೇ ಎಲ್ಲರಿಗೂ ನಿಜವಾದ ಬಂಧುವು.

ಹಣವು ಎಲ್ಲರಿಗೂ ಆಕರ್ಷಕವಾದ ವಸ್ತುವು. ಹಣವಿಲ್ಲದವನಿಂದ ಯಾವ ಪ್ರಯೋಜನ ಇಲ್ಲವಾಗಿ, ಎಲ್ಲರೂ ಅವನನ್ನು ಬಿಟ್ಟು ಹೋಗುವರು. ಬಾಂಧವ್ಯಕ್ಕೆಲ್ಲ ಹಣವೇ ಮುಖ್ಯ ಕಾರಣವು.॥೫॥

अन्यायोपार्जितं द्रव्यं दश वर्षाणि तिष्ठति।
प्राप्ते चैकादशे वर्षे समूलं तद् विनश्यति॥

ಅನ್ಯಾಯದಿಂದ ಸಂಪಾದಿಸಿದ ಹಣವು ಹತ್ತು ವರ್ಷಗಳು,ಅಂದರೆ ಸ್ವಲ್ಪ ಕಾಲದವರೆಗೆ ಉಳಿದುಕೊಳ್ಳುತ್ತದೆ. ಆದರೆ ಒಂದಲ್ಲ ಒಂದು ದಿನ ಪೂರ್ಣವಾಗಿ ನಾಶವಾಗುತ್ತದೆ.

ಕೆಲವರು ಅನ್ಯಾಯ ಮಾಡುತ್ತಿದ್ದರೂ ಸುಖವಾಗಿರುತ್ತಾರೆಂದು ಕೆಲವರು ಭಾವಿಸುತ್ತಾರೆ. ಆದರೆ ಅನ್ಯಾಯಾರ್ಜಿತವಾದ ವಿತ್ತವು ಬಹಳ ಕಾಲದವರೆಗೆ ಉಳಿಯುವುದಿಲ್ಲ. ಒಂದಲ್ಲ ಒಂದು ದಿನ ಅದು ನಾಶವಾಗುತ್ತದೆ. ಅದೇ ಧರ್ಮದಿಂದ ಸ್ವಲ್ಪ ಹಣವನ್ನು ಗಳಿಸಿದರೂ ಸುಖವಾಗಿ ಬಹಳ ದಿನ ಬದುಕಬಹುದು.॥೬॥

अयुक्तं स्वामिनो युक्तं युक्तं नीचस्य दूषणम्।
अमृतं राहवे मृत्युर्विषं शंकरभूषणम्॥

ಒಡೆಯರಾದವರು ಯುಕ್ತವಲ್ಲದ ಕೆಲಸವನ್ನು ಮಾಡಿದರೂ, ಅದನ್ನು ಯುಕ್ತವಾಗಿ ಮಾಡಬಲ್ಲರು. ಅದೇ ನೀಚರು ಸರಿಯಾದುದನ್ನು ಕೂಡ ಕೆಡಿಸುತ್ತಾರೆ. ಅಮೃತದಂತಹ ವಸ್ತುವೂ ರಾಹುವಿಗೆ ಮೃತ್ಯುವಾಗಿ ಪರಿಣಮಿಸಿತು. ಅದೇ ಶಂಕರನು ವಿಷವನ್ನು ಕೂಡ ಕಂಠಭೂಷಣವಾಗಿ ಧರಿಸಿದನು.

ಸಮರ್ಥರಾದವರು ಬೇರೆಯವರು ಅಸಾಧ್ಯ ಅಥವಾ ಅಯುಕ್ತವೆಂದು ಭಾವಿಸುವ ಕೆಲಸವನ್ನು ಕೂಡ ಸರಿಯಾಗಿ ಮಾಡಿ ಮುಗಿಸಬಲ್ಲರು. ಅದೇ ಅಸಮರ್ಥರಿಗೆ ಸುಲಭವಾದುದನ್ನು ಸರಿಯಾಗಿ ಮಾಡಲು ಬರುವುದಿಲ್ಲ. ಅದನ್ನು ಕೆಡಿಸಿ ಹಾಳು ಮಾಡುತ್ತಾರೆ. ಇವೆರಡಕ್ಕೂ ಉದಾಹರಣೆಗಳಾಗಿ ಶಂಕರ ಮತ್ತು ರಾಹುವಿನ ವೃತ್ತಾಂತವನ್ನು ಕೊಡಲಾಗಿದೆ. ನೀಚನಾದ ರಾಹುವಿಗೆ ಅಮೃತವನ್ನು ಕೊಟ್ಟರೂ ಪ್ರಯೋಜನವಾಗಲಿಲ್ಲ. ಶ್ರೇಷ್ಠನಾದ ಶಂಕರನು ವಿಷವನ್ನು ಕುಡಿದರೂ ಅದು ಕಂಠಕ್ಕೆ ಅಲಂಕಾರವಾಯಿತು.॥೭॥

तद्भोजनं यद् द्विजभुक्तशेषं
तत्सौहृदं यत्क्रियते परस्मिन्।
सा प्राज्ञता या न करोति पापं
दम्भं विना यः क्रियते स धर्मः॥

ಬ್ರಾಹ್ಮಣರಿಗೆ ಭೋಜನ ಮಾಡಿಸಿದ ನಂತರ ಉಳಿಯುವ ಅನ್ನವನ್ನು ಊಟಮಾಡುವುದು ನಿಜವಾದ ಭೋಜನವು. ಶತ್ರುಗಳಲ್ಲಿಯೂ ತೋರಿಸುವ ಆದರವೇ ನಿಜವಾದ ಸ್ನೇಹವು. ಯಾವುದು ಪಾಪವನ್ನು ನಿವಾರಿಸುತ್ತದೆಯೋ ಅದೇ ವಿಶೇಷವಾದ ತಿಳುವಳಿಕೆ. ದಂಭಾಚಾರವಿಲ್ಲದೆ ಮಾಡುವುದೇ ಧರ್ಮವು.

ಗೃಹಸ್ಥರು ತಾವು ಊಟ ಮಾಡುವ ಮೊದಲು ಬ್ರಾಹ್ಮಣರಿಗೆ ಭೋಜನ ಮಾಡಿಸಿ ನಂತರ ಅನ್ನಶೇಷವನ್ನು ಮನೆಯವರು ಊಟಮಾಡಬೇಕು. ಶತ್ರುಗಳಲ್ಲಿಯೂ ಕೂಡ ದ್ವೇಷಭಾವನೆಯನ್ನು ತೋರಿಸದೇ ಮಿತ್ರತ್ವದಿಂದ ವರ್ತಿಸಬೇಕು. ಪಾಪಕಾರ್ಯಗಳು ಯಾವುದೆಂಬ ತಿಳುವಳಿಕೆಯನ್ನು ಹೊಂದಿದ್ದು ಅವುಗಳಿಂದ ದೂರವಿರಬೇಕು. ಧರ್ಮಕಾರ್ಯಗಳನ್ನು ಕೇವಲ ತೋರಿಕೆಗಾಗಿ, ಇನ್ನೊಬ್ಬರನ್ನು ಮೆಚ್ಚಿಸಲು ಮಾಡದೆ, ಮನಸ್ಸಿಟ್ಟು ಮಾಡಬೇಕು. ಇವೆಲ್ಲವೂ ಸತ್ಪುರುಷರ ಲಕ್ಷಣಗಳು.॥೮॥

मणिर्लुण्ठति पादाग्रे काचः शिरसि धार्यते।
क्रयविक्रयवेलायां काचः काचो मणिर्मणिः॥

ಅಯೋಗ್ಯ ವ್ಯಕ್ತಿಗಳು ಮಣಿಯನ್ನು ಕಾಲಿನಿಂದ ಒಡೆಯಬಹುದು. ಗಾಜಿನ ಮಣಿಯನ್ನು ತಲೆಯಲ್ಲಿ ಧರಿಸಬಹುದು. ಆದರೆ ವ್ಯಾಪಾರದಲ್ಲಿ ಬೆಲೆ ಕಟ್ಟುವ ಸಮಯ ಬಂದಾಗ ಗಾಜಿಗೆ ಗಾಜಿನ ಬೆಲೆಯೇ ಸಿಕ್ಕುತ್ತದೆ. ಮಣಿಯು ಮಣಿಯೇ ಆಗಿ ಹೆಚ್ಚಿನ ಬೆಲೆಯನ್ನು ಪಡೆಯುತ್ತದೆ.

ಕೆಲವು ಸಲ ಉತ್ತಮರಾದ ವ್ಯಕ್ತಿಗಳಿಗೆ ಸರಿಯಾದ ಸ್ಥಾನ ಮಾನ ಸಿಗದಿರುವುದು. ಅಯೋಗ್ಯರು ಉತ್ತಮವಾದ ಸ್ಥಾನಗಳನ್ನು ಅಲಂಕರಿಸಬಹುದು. ಆದರೆ ಪರೀಕ್ಷಾರೂಪದಂತಹ ಯಾವುದಾದರೂ ಸಂದರ್ಭವು ಒದಗಿ ಬಂದಾಗ ಅವರ ನಿಜವಾದ ಯೋಗ್ಯತೆ ಬಯಲಾಗುತ್ತದೆ. ||೯||

अनन्तशास्त्रं वहुलाश्च विद्याः
अल्पश्च कालो वहुविघ्नता च।
यत्सारभूतं तदुपासनीयं
हंसो यथा क्षीरमिवाम्वुमध्यात्॥

ಶಾಸ್ತ್ರಗಳು ಅನಂತವಾಗಿವೆ. ವಿದ್ಯೆಗಳಂತೂ ಲೆಕ್ಕವಿಲ್ಲದಷ್ಟಿವೆ. ನಮಗೆ ಇರುವ ಕಾಲಾವಕಾಶವೂ ಬಹಳ ಕಡಿಮೆ. ಜೊತೆಗೆ ವಿಘ್ನಗಳು ಬೇರೆ. ಆದುದರಿಂದ ಹಂಸವು ನೀರಿನ ಮಧ್ಯದಲ್ಲಿ ಹಾಲನ್ನು ಮಾತ್ರ ಸ್ವೀಕರಿಸುವಂತೆ ಸಾರವಾದುದನ್ನು ಮಾತ್ರ ಗ್ರಹಿಸಬೇಕು.

ವಿದ್ಯೆಯೆಂಬುದು ಅಪಾರವಾದ ಸಾಗರವಿದ್ದಂತೆ. ನಮ್ಮ ಜೀವಿತಾವಧಿಯಲ್ಲಿ ಅಷ್ಟನ್ನೂ ಕಲಿಯುವುದು ಅಸಾಧ್ಯ. ಆದುದರಿಂದ ಜ್ಞಾನಭಂಡಾರದಲ್ಲಿ ನಮಗೆ ಅವಶ್ಯವಾಗಿ ಬೇಕಾಗುವ ಸಾರವತ್ತಾದ ಭಾಗಗಳನ್ನು ಮಾತ್ರ ಕಲಿಯಬೇಕು. ಅನವಶ್ಯಕ ವಿಷಯಗಳಿಗಾಗಿ ಕಾಲವನ್ನು ವ್ಯರ್ಥಮಾಡಬಾರದು. ಇದಕ್ಕೆ ಹಂಸದ ದೃಷ್ಟಾಂತವನ್ನು ಕೊಟ್ಟಿದೆ. ಹಂಸವು ನೀರು ಬೆರೆತು ಹಾಲಿನಲ್ಲಿ ನೀರನ್ನು ಬಿಟ್ಟು ಹಾಲನ್ನು ಮಾತ್ರ ಸ್ವೀಕರಿಸುತ್ತದೆಂದು ಪ್ರತೀತಿ. ||೧೦||

दूरागतं पथि श्रान्तं वृथा च गृहमागतम्।
अनर्चयित्वा यो भुंक्ते स वै चाण्डाल उच्यते॥

ದೂರದಿಂದ ಬಂದಿರುವ, ದಾರಿಯಲ್ಲಿ ಬಳಲಿರುವ, ಸ್ವಾರ್ಥವೇನು ಇಲ್ಲದೆ (ಅತಿಥಿಯು) ಮನೆಗೆ ಬಂದಿರುವವನನ್ನು ಸತ್ಕರಿಸದೆ ಯಾರು ಊಟ ಮಾಡುತ್ತಾರೋ ಅವನು ಚಾಂಡಾಲನೆಂದು ಕರೆಯಲ್ಪಡುತ್ತಾನೆ.

ಹಿಂದೆ ಕಾಲ್ನಡಿಗೆಯಲ್ಲಿ ಪ್ರಯಾಣ ಮಾಡುತ್ತಿದ್ದರು ದಾರಿಯಲ್ಲಿ ಇಂದಿನಂತೆ ಉಪಾಹಾರ ಗೃಹಗಳೇ ಮುಂತಾದ ವ್ಯವಸ್ಥೆ ಇರಲಿಲ್ಲ. ದೂರದಿಂದ, ಬಳಲಿ ಬೆಂಡಾಗಿ, ಗೃಹಸ್ಥರ ಮನೆಯ ಬಾಗಿಲಿಗೆ ಬರುತ್ತಿದ್ದ ಇಂತಹವರನನ್ನೇ ಅತಿಥಿಗಳೆಂದು ಕರೆಯುತ್ತಿದ್ದುದು. ಕರೆಸಿಕೊಳ್ಳದೆ ಆಕಸ್ಮಿಕವಾಗಿ ಬರುವ ಇವರನ್ನು ಉಪನಿಷತ್ತು, 'ಅತಿಥಿ ದೇವೋ ಭವ' ಎನ್ನುತ್ತದೆ. ಇವರ ಜಾತಿ ನಾಮಾದಿಗಳನ್ನು ಕೂಡ ಕೇಳದೆ ಸತ್ಕರಿಸಿ, ಊಟ ಹಾಕಿ ನಂತರ ಮನೆಯವರು ಊಟ ಮಾಡಬೇಕೆಂಬುದು ಧರ್ಮಶಾಸ್ತ್ರದ ನಿಯಮ. ಹಾಗೆ ಮಾಡದಿದ್ದರೆ ಅವನನ್ನು ಚಾಂಡಾಲನೆಂದು ತಿಳಿಯಬೇಕು.॥೧೧॥

पठन्ति चतुरो वेदान् धर्मशास्त्राण्यनेकशः।
आत्मानं नैव जानन्ति दर्वी पाकरसं यथा॥

ನಾಲ್ಕೂ ವೇದಗಳನ್ನು ಓದಿರುತ್ತಾರೆ. ಅನೇಕ ಧರ್ಮಶಾಸ್ತ್ರಗಳನ್ನು ತಿಳಿದಿರುತ್ತಾರೆ. ಆದರೆ ಆತ್ಮಜ್ಞಾನವಿರುವುದಿಲ್ಲ. ಇದಕ್ಕೆ ಸೌಟಿನ ದೃಷ್ಟಾಂತವನ್ನು ಕೊಡುತ್ತಾರೆ. ಸೌಟನ್ನು ಸಾರಿನಲ್ಲಿ ಅದ್ದಿ ಅದ್ದಿ ತೆಗೆಯುತ್ತಿದ್ದರೂ, ಅದಕ್ಕೇನೂ ಸಾರಿನ ರುಚಿ ತಿಳಿಯುವುದಿಲ್ಲ.

ವೇದಾದಿಗಳು, ಧರ್ಮಶಾಸ್ತ್ರಗಳ ಪಾಂಡಿತ್ಯವೇ ಬೇರೆ, ಆತ್ಮಜ್ಞಾನವೇ ಬೇರೆ. ಇವುಗಳನ್ನು ಓದದೆಯೇ ಜ್ಞಾನಿಯಾಗಿರಬಹುದು. ಇವುಗಳನ್ನೆಲ್ಲ ಓದಿದ್ದರೂ ಅವುಗಳ ಗೂಡಾರ್ಥವನ್ನು ತಿಳಿಯದೆ ಕೇವಲ ಅಕ್ಷರ ಪಂಡಿತನಾಗಿರಬಹುದು. ಸೌಟು ಇದಕ್ಕೆ ಸರಿಯಾದ ದೃಷ್ಟಾಂತವು.॥೧೨॥

धन्या द्विजमयी नौका विपरीता भवार्णवे।
तरन्त्यधोगताः सर्वे उपरिस्थाः पतन्त्यधः॥

ಭವಸಾಗರದಲ್ಲಿ ವಿಪರೀತಗತಿಯಲ್ಲಿ ಚಲಿಸುವ ದ್ವಿಜರಿಂದ ಕೂಡಿದ ನಾವೆಯು ಧನ್ಯವಾದುದು. ಅದರೆ ಕೆಳಗೆ ಇಳಿದವರೆಲ್ಲ ದಾಟುತ್ತಾರೆ. ಮೇಲೆ ಇರುವವರು ಕೆಳಗೆ ಬೀಳುತ್ತಾರೆ.

ಭವಸಾಗರವೆಂದರೆ ಪ್ರಾಪಂಚಿಕವಾದ ಸಂಸಾರ ಬಂಧನವೆಂಬ ಸಾಗರ. ಇದನ್ನು ದಾಟುವ ನಾವೆಯು ವಿಚಿತ್ರವಾದುದು. ಈ ಸಂಸಾರವೆಂಬ ನಾವೆಯಿಂದ ಕೆಳಗೆ ಇಳಿದವರು. ಸಂಸಾರದಿಂದ ಪಾರಾಗಿ, ಭವಬಂಧನದಿಂದ ಕಳಚಿಕೊಳ್ಳುತ್ತಾರೆ. ಅವರೆಲ್ಲ ಮುಕ್ತರಾಗುತ್ತಾರೆ. ಆ ನಾವೆಯಲ್ಲಿಯೇ ಕುಳಿತಿರುವವರು ಸಂಸಾರ ಚಕ್ರದಲ್ಲಿಯೇ ತಿರುಗುತ್ತ ಇನ್ನೂ ಕೆಳಕ್ಕೆ ಹೋಗುತ್ತ, ಅಧಃಪತಿತರಾಗುತ್ತಾನೆ.॥೧೩॥

अयममृतनिधानं नायकोऽप्यौषधीनां
अमृतमयशरीरः कान्तियुक्तोऽपि चन्द्रः।
भवति विगतरश्मिर्मण्डलं प्राप्य भानोः
परसदननिविष्टः को लघुत्वं न याति॥

ಈ ಚಂದ್ರನು ಅಮೃತಕ್ಕೆ ಕಾರಣನಾದವನು. ಎಲ್ಲ ಔಷಧೀಯ ಸಸ್ಯಗಳಿಗೂ ನಾಯಕನು. ಇವನ ಶರೀರವೆಲ್ಲವೂ ಅಮೃತದಿಂದಲೇ ಕೂಡಿದೆ. ಬಹಳವಾದ ಕಾಂತಿಯಿಂದ ಕೂಡಿದವನು. ಇಂತಹ ಚಂದ್ರನೂ ಕೂಡ ಅಮಾವಾಸ್ಯೆಯ ದಿನ ಸೂರ್ಯನೊಡನೆ ಉದಯಿಸುವನು. ಆಗ ಅವನ ಕಿರಣಗಳೆಲ್ಲವೂ ಮರೆಯಾಗುತ್ತದೆ. ಇನ್ನೊಬ್ಬರ ಮನೆಗೆ ಸೇರಿಕೊಂಡವನು ತನ್ನ ಬೆಲೆಯನ್ನು ಕಳೆದುಕೊಳ್ಳುತ್ತಾನೆ.

ಚಂದ್ರನು ಅಮೃತದ ಜೊತೆಯಲ್ಲಿಯೇ ಉದಯಿಸಿದವನು. ಅವನು ಅಮೃತಕಿರಣನೆಂದು ಪ್ರಸಿದ್ಧನು. ಬಹಳ ಕಾಂತಿಯುಕ್ತನಾಗಿ ಜನಪ್ರಿಯನಾದವನು. ಇಷ್ಟೆಲ್ಲ ಪ್ರಸಿದ್ಧ ವ್ಯಕ್ತಿಯೂ ಕೂಡ ಸೂರ್ಯನ ಜೊತೆಗೆ ಹೋದಾಗ ಪೂರ್ಣ ಮಂಕಾಗುತ್ತಾನೆ. ಪರಗೃಹದಲ್ಲಿ ಹೋಗಿ ಸೇರಿಕೊಳ್ಳುವವನು ಎಷ್ಟು ಪ್ರಭಾವಶಾಲಿ ಯಾಗಿದ್ದರೂ ತನ್ನ ಸ್ಥಾನವನ್ನು ಕಳೆದುಕೊಳ್ಳುವುದನ್ನು ಆಚಾರ್ಯರು ಪರ್ಯಾಯವಾಗಿ ಸೂಚಿಸಿರುತ್ತಾರೆ.॥೧೪॥

अलिरयं नलिनीदलमध्यगः कमलिनीमकरन्दमदालसः।
विधिवशात्परदेशमुपागतः कुटजपुष्परसं बहु मन्यते॥

ಈ ದುಂಬಿಯು ಕಮಲದ ದಳಗಳ ಮಧ್ಯದಲ್ಲಿ ವಾಸಮಾಡುತ್ತ, ಕಮಲದ ಮಕರಂದವನ್ನು ಹೀರುತ್ತ ಸುಖವಾಗಿದ್ದಿತು. ಅದೃಷ್ಟವಶದಿಂದ ಅದು ಪರದೇಶಕ್ಕೆ ಹೋಗಬೇಕಾಯಿತು. ಈಗ ಅದು ಬೆಟ್ಟದ ಮಲ್ಲಿಗೆ (ಕಾಡುಮಲ್ಲಿಗೆ)ಯ ಮಕರಂದವನ್ನೇ ಅತಿಶಯವೆಂದು ಭಾವಿಸುತ್ತಿದೆ.

ಸುಖಿಯಾಗಿ ತನ್ನದೇಶದಲ್ಲಿದ್ದ ಒಬ್ಬ ಮನುಷ್ಯನು ದುರದೃಷ್ಟದಿಂದ ತನ್ನ ದೇಶವನ್ನು ಬಿಟ್ಟು ಬೇರೆಲ್ಲಿಗೋ ಹೋದರೆ, ಅಲ್ಲಿ ಸ್ವದೇಶದಲ್ಲಿದ್ದ ಸುಖವು ದೊರೆಯುವುದಿಲ್ಲ. ಆಗ ಏನು ಅಲ್ಲಿ ಸಿಕ್ಕುತ್ತದೆಯೋ ಅದರಲ್ಲಿಯೇ ತೃಪ್ತಿಪಟ್ಟುಕೊಳ್ಳಬೇಕಾಗುತ್ತದೆ. ಅಂತಹ ವ್ಯಕ್ತಿಯ ದುಃಸ್ಥಿತಿಯನ್ನು ಅನ್ಯೋಕ್ತಿಯ ಮೂಲಕ ದುಂಬಿಯ ವೃತ್ತಾಂತದಿಂದ ಆಚಾರ್ಯರು ಹೇಳಿರುತ್ತಾರೆ. ಇದೊಂದು ಅಲಂಕಾರಿಕವಾದ ವಿಧಾನವು.॥೧೫॥

पीतः क्रुद्धेन तातश्चरणतलहतो वल्लभो येन रोषाद्

आबाल्याद्विप्रवर्यैः स्ववदनविवरे धार्यते वैरिणी मे।
गेहं मे छेदयन्ति प्रतिदिवसमुमाकान्तपूजानिमित्तं
तस्मात्खिन्ना सदाहं द्विजकुलनिलयं नाथ युक्तं त्यजामि॥

ಲಕ್ಷ್ಮೀಯು ವಿಷ್ಣುವಿಗೆ ಹೇಳುತ್ತಾಳೆ. ಕೋಪಗೊಂಡ ಒಬ್ಬ ಬ್ರಾಹ್ಮಣನಿಂದ ನನ್ನ ತಂದೆಯಾದ ಸಾಗರನು ಕುಡಿಯಲ್ಪಟ್ಟನು. ಮತ್ತೊಬ್ಬನು ಕೋಪದಿಂದ ನನ್ನ ಪತಿಯನ್ನು ಕಾಲಿನಿಂದಲೇ ಒದೆದನು. ಬಾಲ್ಯದಿಂದಲೂ ವಿಪ್ರಶ್ರೇಷ್ಠರಿಂದ ನನ್ನ ಶತ್ರುವು ಬಾಯಿಯಲ್ಲಿಯೇ ಧರಿಸಲ್ಪಟ್ಟಿರುತ್ತಾಳೆ. ಪ್ರತಿದಿನವೂ ಉಮಾಪತಿಯಾದ ಈಶ್ವರನ ಪೂಜಾ ನಿಮಿತ್ತವಾದ ನನ್ನ ವಾಸಸ್ಥಳವನ್ನೇ ಧ್ವಂಸಮಾಡುತ್ತಾರೆ. ಅದ್ದರಿಂದ ದುಃಖಿತಳಾದ ಬ್ರಾಹ್ಮಣರ ಮನೆಗಳನ್ನು ತ್ಯಜಿಸುವುದು ಯುಕ್ತವೇ ಆಗಿದೆ.

ಅಗಸ್ತ್ಯ ಮಹರ್ಷಿಯು ಸಾಗರವನ್ನೇ ಆಪೋಶನವನ್ನಾಗಿ ತೆಗೆದುಕೊಂಡನೆಂದು ರಾಮಾಯಣದಲ್ಲಿ ಹೇಳಿದೆ. ಭೃಗುವು ವೈಕುಂಠಕ್ಕೆ ಹೋದಾಗ ಲಕ್ಷ್ಮೀಸಮೇತನಾಗಿದ್ದ ನಾರಾಯಣನು ತನ್ನನ್ನು ಆದರಿಸಲಿಲ್ಲವೆಂದು ಅವನ ವಕ್ಷಸ್ಥಲವನ್ನು ಕಾಲಿನಿಂದ ಪ್ರಹರಿಸಿದನೆಂದು ವೆಂಕಟೇಶ್ವರ ಮಹಾತ್ಮೆಯಲ್ಲಿದೆ. ಸರಸ್ವತಿಯು ಲಕ್ಷ್ಮಿಯ ಶತ್ರುವು. ಅವಳು ಬ್ರಾಹ್ಮಣರ ಮುಖದಲ್ಲಿಯೇ ಇರುತ್ತಾಳೆ. ಈಶ್ವರನ ಪೂಜೆಗೆಂದು ಲಕ್ಷ್ಮಿಯು ನಿವಾಸವಾದ ಕಮಲದ ಹೂಗಳನ್ನು ಈ ಬ್ರಾಹ್ಮಣರು ದಿನದಿನವೂ ಕೀಳುತ್ತಾರೆ. ಆದ್ದರಿಂದ ಬ್ರಾಹ್ಮಣರಿಗೆ ಲಕ್ಷ್ಮಿ ಒಲಿಯುವುದಿಲ್ಲ.

ಅನ್ಯೋಕ್ತಿಯಿಂದ ಇಲ್ಲಿ ಬ್ರಾಹ್ಮಣರ ಮಹಿಮೆಯನ್ನು ಹೊಗಳಿದೆ.॥೧೬॥

बन्धनानि खलु सन्ति बहूनि प्रेमरज्जुदृढबन्धनमन्यत्।
दारुभेदनिपुणोऽपि षडंघ्रिर्निष्क्रियो भवति पंकजकोशे॥

ಬಂಧನಗಳು ಬಹು ಪ್ರಕಾರವಾಗಿರುತ್ತವೆ. ಪ್ರೇಮವೆಂಬ ಹಗ್ಗದ ಬಂಧನವೇ ಬೇರೆಯ ರೀತಿಯದು. ಮರವನ್ನೇ ಕೊರೆಯುವ ದುಂಬಿಯು ಕಮಲದ ಕೋಶದೊಳಗೆ ಸಿಲುಕಿದಾಗ ನಿಷ್ಕ್ರಿಯವಾಗುತ್ತದೆ.

ಪ್ರೇಮವೆಂಬುದು ಸೂಕ್ಷ್ಮವಾದ ಸಂವೇದನೆಯನ್ನು ಕೊಡುವ ವಿಚಿತ್ರ ರೀತಿಯ ಬಂಧನವು. ಅದರಲ್ಲಿ ಸಿಲುಕಿದರೂ ಅದು ಬಂಧನವೆನಿಸುವುದಿಲ್ಲ. ದುಂಬಿಯು ತನ್ನ ಮುಳ್ಳಿನಂತಹ ಅಂಗದಿಂದ ಮರವನ್ನೇ ಕೊರೆಯಬಲ್ಲದು. ಅದು ಕಮಲದಲ್ಲಿ ಕುಳಿತು ಮಕರಂದವನ್ನು ಹೀರುತ್ತದೆ. ಕಮಲದ ಮೇಲೆ ದುಂಬಿಗೆ ಅನುರಾಗವಿದೆ. ಸಂಜೆಯಾಗುತ್ತಲೇ ಕಮಲವು ಮುಚ್ಚಿಕೊಳ್ಳುತ್ತದೆ. ಆಗ ದುಂಬಿ ಅದರ ಕೋಶದೊಳಗೆ

ಸಿಕ್ಕಿಹಾಕಿಕೊಳ್ಳುತ್ತದೆ. ಅದು ಕಮಲವನ್ನು ಕೊರೆದು ಹೊರಬರಬಹುದು. ಆದೆ ಹಾಗೆ ಮಾಡದೆ ಬೆಳಿಗ್ಗೆ ಕಮಲ ಅರಳಿದ ನಂತರವೇ ಹೊರಗೆ ಬರುತ್ತದೆ. ಇದೇ ನೈಜ ಪ್ರೇಮ.॥೧೭॥

छिन्नोऽपि चन्दनतरुर्न जहाति गन्धं
वृद्धोऽपि वारणपतिर्न जहाति लीलाम्।
यन्त्रार्पितो मधुरतां न जहाति चेक्षुः
क्षीणोऽपि न त्यजति शीलगुणान् कुलीनः॥

ಗಂಧದ ಮರವನ್ನು ಕಡಿದರೂ ಅದು ತನ್ನ ಸುಗಂಧವನ್ನು ಬಿಡುವುದಿಲ್ಲ. ಗಜರಾಜನು ವಯಸ್ಸಾದರೂ ತನ್ನ ಲೀಲೆಗಳನ್ನು ಬಿಡುವುದಿಲ್ಲ. ಯಂತ್ರಕ್ಕೆ ಹಾಕಿ ಅರೆದರೂ ಕಬ್ಬು ತನ್ನ ಸಿಹಿಯನ್ನು ತ್ಯಜಿಸುವುದಿಲ್ಲ. ಹಾಗೆಯೇ ಕುಲೀನನಾದ ವ್ಯಕ್ತಿಯು ಕ್ಷೀಣದಶೆಯಲ್ಲಿದ್ದರೂ ತನ್ನ ಒಳ್ಳೆಯ ಗುಣಗಳನ್ನು ತ್ಯಜಿಸುವುದಿಲ್ಲ.॥೧೮॥

## ಅಧ್ಯಾಯದ ಸಾರಾಂಶ

ಆರಂಭದಲ್ಲಿ ಆಚಾರ್ಯರು ದಯೆಯ ಮಹಿಮೆ ಬಗ್ಗೆ ವರ್ಣಿಸಿರುವರು. ಪ್ರಾಣಿಗಳ ವ್ಯಥೆ ಬಗ್ಗೆ ಕನಿಕರಿಸುವ ವ್ಯಕ್ತಿಗೆ ಸಾಯುಜ್ಯಕ್ಕೆ ಯತ್ನಿಸುವುದಾಗಲಿ ಅಥವಾ ಜಟಾಧಾರಿ ಸನ್ಯಾಸಿಯಂತೆ ತಪೋನಿಷ್ಠನಾಗುವ ಅವಶ್ಯಕತೆ ಇರದು.

ಗುರುವಿನ ಮಹತ್ವದ ಬಗ್ಗೆ ವಿವರಿಸುತ್ತಾ ಶಿಷ್ಯನು ತನ್ನ ಗುರುವಿಗೆ ಸಕಲ ಸಂಪತ್ತನ್ನು ಧಾರೆ ಎರೆದರೂ ಗುರು ಋಣದಿಂದ ಮುಕ್ತಿ ಪಡೆಯಲಾರನು. ಶಿವನನ್ನು ಆರಾಧಿಸಲು ಗುರುವು ಸನ್ಮಾರ್ಗ ತೋರಿರುವನು. ಆದ ಕಾರಣ ಗುರುವಿನ ಮಹತ್ವ ಅಧಿಕವೆಂದು ಆಚಾರ್ಯರು ತಿಳಿಸಿರುವರು.

ಕೊಳಕು ಉಡುಗೆ ತೊಟ್ಟು ಹಲ್ಲುಗಳನ್ನುಜ್ಜದೆ ಕಟು ವಾಕ್ಯವನ್ನು ನುಡಿಯುತ್ತಾ ಸೂರ್ಯೋದಯ ಮತ್ತು ಸೂರ್ಯಾಸ್ತದಲ್ಲಿ ನಿದ್ರಿಸುವ ವ್ಯಕ್ತಿ ಖಾಹಿಲೆಯಿಂದ ನರಳುವನು ಹಾಗೂ ಲಕ್ಷ್ಮಿಯ ಕೃಪಾ ಕಟಾಕ್ಷದಿಂದ ದೂರವಾಗುವನು. ಬದುಕನ್ನು ಪ್ರಜ್ವಲಿಸಲು ಪ್ರಕೃತಿ ನಿಯಮದಂತೆ ನಡೆದರೆ ಅವನ ಮಾರ್ಗ ಪ್ರಶಸ್ತವಾಗಬಲ್ಲದು.

ಧನವು ಮನುಷ್ಯನ ಬಂಧು ಮತ್ತು ಮಿತ್ರರಾದ ಕಾರಣ, ಶ್ರಮ ವಹಿಸಿ ಧಾರ್ಮಿಕ ಪ್ರವೃತ್ತಿ ಮೂಲಕ ಧನಾರ್ಜನೆ ನಡೆಸಬೇಕು. ಅನ್ಯಾಯ ಹಾಗೂ ಅನೃತ ಮಾರ್ಗದಿಂದ ಗಳಿಸಿದ ಹಣ ಅಧಿಕ ಸಮಯದವರೆಗೆ ಉಳಿಯದು.



## ॥ ಅಧ್ಯಾಯ - ೧೬ ॥

**ಸಂಸಾರವೆಂಬುದು ಒಂದು ವಿಷವೃಕ್ಷವು. ಅದರಲ್ಲಿ ಎರಡು ಹಣ್ಣುಗಳು ಮಾತ್ರ ಅಮೃತಕ್ಕೆ ಸಮಾನವು. ಅವುಗಳೆಂದರೆ ಸುಭಾಷಿತಗಳು ಮತ್ತು ಸತ್ಪುರುಷರ ಸಹವಾಸ.**

न ध्यातं पदमीश्वरस्य विधिवत्संसारविच्छित्तये
स्वर्गद्वारकपाटपाटनपटुर्धर्मोऽपि नोपार्जित:।
नारीपीनपयोधरोरुयुगलं स्वप्नेऽपि नालिंगितं
मातु: केवलमेव यौवनवनच्छेदे कुठारा वयम्॥

ಸಂಸಾರವೆಂಬ ಭವಸಾಗರವನ್ನು ದಾಟಲು ಅನುಕೂಲವಾಗುವಂತೆ ವಿಧ್ಯುಕ್ತವಾಗಿ ಈಶ್ವರನ ಪಾದಕಮಲಗಳನ್ನು ಧ್ಯಾನಿಸಲಿಲ್ಲ. ಸ್ವರ್ಗದ ಬಾಗಿಲನ್ನು ತೆರೆಯಲು ಸಮರ್ಥವಾದ ಧರ್ಮವನ್ನು ಸಂಗ್ರಹಿಸಲಿಲ್ಲ. ಸ್ತ್ರೀಯರ ವಕ್ಷಸ್ಥಳಗಳನ್ನು ಸ್ವಪ್ನದಲ್ಲಿಯೂ ಆಲಂಗಿಸಲಿಲ್ಲ. ಕೇವಲ ತಾಯಿಯ ಯೌವನವೆಂಬ ವನಕ್ಕೆ ನಾವು ಕೊಡಲಿಯಂತಾದೆವು.

ಮನುಷ್ಯನಾಗಿ ಹುಟ್ಟಿದ ಮೇಲೆ ಯಾವುದಾದರೂ ಸಾಧನೆಯನ್ನು ಮಾಡಬೇಕು. ಇದೆಲ್ಲವೂ ಕ್ಷಣಿಕವೆಂದು ತಿಳಿದು ಪರಮಾತ್ಮನ ಭಕ್ತಿಯಿಂದ ಭವಸಾಗರವನ್ನು ದಾಟಿ ಮುಕ್ತನಾಗುವುದು ಉತ್ತಮ ಪಕ್ಷವು. ಆದಾಗದಿದ್ದರೆ ವೇದೋಕ್ತ ಕರ್ಮಗಳನ್ನು ಮಾಡಿ ಪರಲೋಕಗಳಲ್ಲಿ ಸುಖನೀಡುವಂತಹ ಧರ್ಮವನ್ನು ಸಂಪಾದಿಸಬೇಕು. ಇದು ಮಧ್ಯಮ

ಪಕ್ಷವು. ಕೊನೆಗೆ ಭೂಲೋಕದ ಭೋಗಭಾಗ್ಯಗಳನ್ನಾದರೂ ಅನುಭವಿಸಬೇಕು. ಏನನ್ನೂ ಮಾಡದಿದ್ದರೆ ಹುಟ್ಟಿದ್ದು ವ್ಯರ್ಥ. ಕೇವಲ ತಾಯಿಗೆ ತೊಂದರೆ ಕೊಟ್ಟು ಅವಳ ಯೌವನವನ್ನು ಹಾಳು ಮಾಡಿದಂತೆ ಆಗುತ್ತದೆ. ॥೧॥

जल्पन्ति सार्धमन्येन पश्यन्त्यन्यं सविभ्रमाः।
हृदये चिन्तयन्त्यन्यं न स्त्रीणामेकतो रतिः॥

ಒಬ್ಬನ ಜೊತೆಯಲ್ಲಿ ಹರಟೆ ಹೊಡೆಯುತ್ತಾರೆ; ಇನ್ನೊಬ್ಬನನ್ನು ವಿಲಾಸದಿಂದ ನೋಡುತ್ತಿರುತ್ತಾರೆ; ಮೂರನೆಯವನನ್ನು ಮನಸ್ಸಿನಲ್ಲಿ ಚಿಂತಿಸುತ್ತಿರುತ್ತಾರೆ. ಸ್ತ್ರೀಯರಿಗೆ ಒಬ್ಬನಲ್ಲಿಯೇ ಪ್ರೇಮವಿರುವುದಿಲ್ಲ

ಪತಿವ್ರತೆಯರಲ್ಲದ ಸ್ತ್ರೀಯರ ನಡತೆಯನ್ನು ಆಚಾರ್ಯರು ಹೀಗೆ ವಿವರಿಸಿದ್ದಾರೆ. ॥೨॥

यो मोहान्मन्यते मूढो रक्तेयं मयि कामिनी।
स तस्य वशगो भूत्वा नृत्येत् क्रीडा-शकुन्तवत्॥

ಯಾವ ಮನುಷ್ಯನು ಮೋಹದಿಂದ ಈ ಸುಂದರಿಯು ತನ್ನಲ್ಲಿ ಅನುರಕ್ತಳಾಗಿರುವಳೆಂದು ಭಾವಿಸುತ್ತಾನೆಯೋ, ಅಂತಹವನು ಅವಳ ವಶವಾಗಿ, ಆಟಕ್ಕಾಗಿ ಹಿಡಿದಿಟ್ಟುಕೊಂಡಿರುವ ಪಕ್ಷಿಯಂತೆ, ಅವಳು ಹೇಳಿದಂತೆ ಕುಣಿಯುವನು.

ಸ್ತ್ರೀಯರ ಮನಸ್ಸನ್ನು ಅರ್ಥಮಾಡಿಕೊಳ್ಳುವುದು ಕಷ್ಟ. ಅವಳ ಪ್ರೀತಿಸುತ್ತಿರುವಂತೆ ನಟಿಸುತ್ತಿರಬಹುದು. ಅದನ್ನು ನಂಬಿದವನು ಮೂರ್ಖನಾಗುತ್ತಾನೆ ಮತ್ತು ಅವಳ ಕೈಗೊಂಬೆಯಾಗಿ ತನ್ನ ಸರ್ವಸ್ವವನ್ನು ಕಳೆದುಕೊಳ್ಳುತ್ತಾನೆ. ॥೩॥

कोऽर्थान् प्राप्य न गर्वितो विषयिणः कस्यापदोऽस्तं गताः
स्त्रीभिः कस्य न खण्डितं भुवि मनः को नाम राज्ञां प्रियः।
कः कालस्य न गोचरत्वमगमत्कोऽर्थी गतो गौरवं
को वा दुर्जनवागुरासु पतितः क्षेमेण यातः पथि॥

ಅತುಲವಾದ ಐಶ್ವರ್ಯವನ್ನು ಹೊಂದಿ ಗರ್ವಿತನಾಗದಿರುವವನು ಯಾರು? ವಿಷಯ ಸುಖದ ಅಭಿಲಾಷೆಯಿರುವ ಯಾರಿಗೆ ಆಪತ್ತುಗಳು ಬರದಿರುತ್ತವೆ? ಸ್ತ್ರೀಯರಿಂದ ಆಶಾಭಂಗವನ್ನು ಹೊಂದದವನು ಯಾರು? ರಾಜರಿಗೆ ಪ್ರಿಯನಾದವನು ಯಾರು? ಯಾರು ಕಾಲನಿಗೆ ಗೋಚರನಾಗದಂತಹ ವ್ಯಕ್ತಿಯು? ಯಾವ ಯಾಚಕನು

ಗೌರವವನ್ನು ಹೊಂದುತ್ತಾನೆ? ದುರ್ಜನರು ಹೇಳುವ ಆಸೆ ತೋರಿಸುವ ಮಾತುಗಳಿಗೆ ಲಕ್ಷ್ಯವಾದವನು ಯಾರು ತಾನೇ ಕ್ಷೇಮವಾಗಿರುವ ಮಾರ್ಗದಲ್ಲಿರುತ್ತಾನೆ?

ಮೇಲಿನ ಪ್ರಶ್ನಾರ್ಥಕ ವಾಕ್ಯಗಳು ನಿಷೇದಾರ್ಥದಲ್ಲಿ ಬಂದಿವೆ. ಅಂತಹ ವ್ಯಕ್ತಿಗಳು ಇರುವುದಿಲ್ಲ. ಐಶ್ವರ್ಯದ ಜೊತೆಗೆ ವಿನಯ, ಮುಂತಾದವು ಹೊಂದುವುದಿಲ್ಲ.॥೪॥

न निर्मितः केन न दृष्टपूर्वः न श्रूयते हेममयः कुरंगः।
तथाऽपि तृष्णा रघुनन्दनस्य विनाशकाले विपरीतबुद्धिः॥

ಚಿನ್ನದ ಜಿಂಕೆಯೆಂಬುದು ಯಾರಿಂದಲೂ ನಿರ್ಮಿಸಲ್ಪಟ್ಟಿಲ್ಲ; ಹಿಂದೆ ಯಾರೂ ಅದನ್ನು ನೋಡಿಲ್ಲ; ಕೇಳಿಯೂ ಇಲ್ಲ. ಇದೆಲ್ಲ ಗೊತ್ತಿದ್ದೂ, ಅಷ್ಟು ತಿಳುವಳಿಕೆಯುಳ್ಳ ರಾಮನೂ ಚಿನ್ನದ ಜಿಂಕೆಗೆ ಆಸೆಪಟ್ಟನು. ವಿನಾಶಹೊಂದುವ ಕಾಲದಲ್ಲಿ ಬುದ್ಧಿಯೂ ಕೆಡುತ್ತದೆಂಬುವುದು ಸತ್ಯವಾದುದು.

ಶ್ರೀರಾಮನಂತಹವರಿಗೂ ವಿನಾಶದ ಕಾಲಬಂದಾಗ ಬುದ್ಧಿ ಹಿಡಿತದಲ್ಲಿ ಇರುವುದಿಲ್ಲವೆಂದರೆ, ಜನಸಾಮಾನ್ಯರ ಪಾಡೇನು? ಗೊತ್ತಿದ್ದು ತಪ್ಪು ಮಾರ್ಗವನ್ನು ಅನುಸರಿಸುವಂತೆ ವಿಧಿ ಪ್ರೇರೇಪಿಸುತ್ತದೆ. ॥೫॥

गुणैरुत्तमतां याति नोच्चैरासनसंस्थिताः।
प्रासादशिखरस्थोऽपि काकः किं गरुडायते॥

ಮನುಷ್ಯನು ತನ್ನ ಗುಣಗಳಿಂದ ಉತ್ತಮನೆನಿಸುತ್ತಾನೆಯೋ ಹೊರತು, ಉನ್ನತವಾದ ಆಸನದಲ್ಲಿ ಅಂದರೆ ಮೇಲಿನ ಪದವಿಯಲ್ಲಿ ಇರುವುದರಿಂದಲ್ಲ. ಕಾಗೆಯೊಂದು ಮಹಡಿಯ ಮೇಲಿನ ಭಾಗದಲ್ಲಿ ಕುಳಿತರೂ ಗರುಡನಾಗುವುದಿಲ್ಲ.

ಮನುಷ್ಯನು ಶ್ರೇಷ್ಠನೆನಿಸಲು ಅವನ ಅಂತಸ್ತು, ಪದವಿ ಮುಂತಾದವು ಕಾರಣವಾಗುವುದಿಲ್ಲ. ಅವನ ಗುಣಗಳೇ ಮುಖ್ಯವಾದವು. ಕಾಗೆಯು ಎಲ್ಲಿ ಕುಳಿತರೂ ಕಾಗೆಯಾಗಿಯೇ ಇರುತ್ತದೆ. ಗರುಡನು ಕೆಳಗಿದ್ದರೂ ಗರುಡನೇ.॥೬॥

गुणाः सर्वत्र पूज्यन्ते न महत्योऽपि सम्पदः।
पूर्णेन्दु किं तथा वन्द्यो निष्कलंको यथा कृशः॥

ಗುಣಗಳು ಎಲ್ಲ ಕಡೆಗಳಲ್ಲಿಯೂ ಪೂಜಿಸಲ್ಪಡುತ್ತವೆ. ಎಷ್ಟೇ ಅಧಿಕವಾಗಿದ್ದರೂ ಸಂಪತ್ತಿಗೆ ಅಂತಹ ಗೌರವ ಸಲ್ಲುವುದಿಲ್ಲ. ಬಿದಿಗೆಯ ಕ್ಷೀಣ ಚಂದ್ರನನ್ನು ಜನರು ಕಳಂಕರಹಿತನೆಂದು ಗೌರವಿಸುತ್ತಾರೆ. ಅದೇ ಹುಣ್ಣಿಮೆಯ ಚಂದ್ರನು ಪೂರ್ಣನಾಗಿದ್ದರೂ

ಕಳಂಕವುಳ್ಳವನಾಗಿಯೇ ಇರುವನು.

ಸಂಪತ್ತಿಗಿಂತಲೂ ಗುಣವು ಹೆಚ್ಚು ಗೌರವಕ್ಕೆ ಪಾತ್ರವಾಗುವುದೆಂದು ಆಚಾರ್ಯರು ಇದರಲ್ಲಿ ಅಭಿಪ್ರಾಯಪಟ್ಟಿರುತ್ತಾರೆ.॥೭॥

पर-प्रोक्तगुणो यस्तु निर्गुणोऽपि गुणी भवेत्।
इन्द्रोऽपि लघुतां याति स्वयं प्रख्यापितैर्गुणैः॥

ಗುಣರಹಿತನಾದ ವ್ಯಕ್ತಿಯಾದರೂ ಅವನನ್ನು ಸದ್ಗುಣಿಯೆಂದು ಹೊಗಳಿ ಅಟ್ಟಕ್ಕೇರಿಸಿದರೆ ಗುಣವಂತನೇ ಆಗುತ್ತಾನೆ. ತನ್ನ ಗುಣವನ್ನು ತಾನೇ ಹೊಗಳಿಕೊಂಡವನು ಇಂದ್ರನೇ ಆದರೂ ಲಘುವಾಗುತ್ತಾನೆ.

ನಮ್ಮ ಗುಣಗಳನ್ನು ಇನ್ನೊಬ್ಬರು ಹೊಗಳಬೇಕೇ ಹೊರತು ನಾವೇ ಹೊಗಳಿಕೊಳ್ಳಬಾರದು. ಇನ್ನೊಬ್ಬರು ಹೊಗಳಿದಾಗ ನಾವು ಅದರಂತೆ ಆಗಬೇಕೆಂದು ಸದ್ಗುಣಿಗಳಾಗಲು ಪ್ರಯತ್ನಿಸುತ್ತೇವೆ. ಆದರೆ ನಮ್ಮ ಗುಣಗಳನ್ನು ನಾವೇ ಹೊಗಳಿಕೊಂಡರೆ ಅದು ಅಹಂಭಾವವಾಗುತ್ತದೆ. ಜನರು ಅಂತಹವನನ್ನು ಗೌರವಿಸುವುದಿಲ್ಲ.॥೮॥

विवेकिनमनुप्राप्ता गुणा यान्ति मनोज्ञताम्।
सुतरां रत्नमाभाति चामीकरनियोजितम्॥

ವಿವೇಕಿಯಾದವನನ್ನು ಸೇರಿದ ಗುಣಗಳು ಇನ್ನೂ ಹೆಚ್ಚು ಹೃದಯಹಾರಿಗಳಾಗುತ್ತವೆ. ರತ್ನವು ಚಿನ್ನದ ಜೊತೆಯಲ್ಲಿ ಸೇರಿದಾಗ ಮತ್ತೂ ಶೋಭಿಸುತ್ತದೆ.

ವಿವೇಕಿಯಾದವನು ತನ್ನ ಉತ್ತಮ ಗುಣಗಳಿಂದ ಲೋಕವಂದ್ಯನಾಗುತ್ತಾನೆ. ಅದು ಆ ಗುಣಗಳಿಗೂ ಭೂಷಣಪ್ರಾಯವು. ಅದಕ್ಕೆ ದೃಷ್ಟಾಂತವಾಗಿ ರತ್ನದ ಹರಳಿನ ವಿಷಯ ಹೇಳಲ್ಪಟ್ಟಿದೆ. ಹರಳುಗಳನ್ನು ಚಿನ್ನದ ಆಭರಣಗಳ ಮಧ್ಯೆ ಜೋಡಿಸಿದಾಗ ಅವು ಹೆಚ್ಚು ಶೋಭಿಸುತ್ತವೆ. ॥೯॥

गुणैः सर्वज्ञतुल्योऽपि सीदत्येको निराश्रयः।
अनर्घ्यमपि माणिक्यं हेमाश्रयमपेक्षते॥

ಗುಣವಂತನು ತನ್ನ ಗುಣಗಳಿಂದ ಸರ್ವಜ್ಞನಿಗೆ ಸಮಾನನಾಗಿದ್ದರೂ, ಒಂಟಿಯಾಗಿ ಆಶ್ರಯ ಹೀನನಾಗಿದ್ದರೆ ನಾಶವಾಗುತ್ತಾನೆ. ಮಾಣಿಕ್ಯದ ಹರಳು ಬಹಳ ಬೆಲೆ ಬಾಳುವುದಾದರೂ ಚಿನ್ನದ ಆಶ್ರಯವನ್ನು ಅಪೇಕ್ಷಿಸುತ್ತದೆ.

ಒಬ್ಬ ವ್ಯಕ್ತಿಯು ಎಷ್ಟೇ ಗುಣವಂತನೂ, ಪಂಡಿತನೂ ಆಗಿದ್ದರೂ, ಅವನ

ಪಾಂಡಿತ್ಯವನ್ನು ಅರ್ಥಮಾಡಿಕೊಳ್ಳುವ ಜನರು ಮತ್ತು ಆಶ್ರಯ ನೀಡುವ ರಾಜರು ಅಥವಾ ಧನಿಕರು ಬೇಕಾಗುತ್ತಾರೆ. ಅವರಿಲ್ಲದೆ ಅವನ ಪಾಂಡಿತ್ಯಕ್ಕೆ ಬೆಲೆ ಬರುವುದಿಲ್ಲ. ಮಾಣಿಕ್ಯವು ಬೆಲೆ ಬಾಳುವ ಹರಳಾದರೂ ಒಂಟಿಯಾಗಿದ್ದರೆ ಯಾರೂ ಅಪೇಕ್ಷಿಸುವುದಿಲ್ಲ. ಅದನ್ನು ಚಿನ್ನದ ಆಭರಣಗಳಿಗೆ ಹೊಂದಿಸಿದಾಗ ಎರಡಕ್ಕೂ ಬೆಲೆ ಹೆಚ್ಚಾಗುತ್ತದೆ.॥೧೦॥

अतिक्लेशेन ये चार्था धर्मस्यातिक्रमेण तु।
शत्रूणां प्रणिपातेन ते ह्यर्था मा भवन्तु मे॥

ಯಾವ ಹಣವು ಅತಿಯಾದ ಕಷ್ಟದಿಂದ ಸಂಪಾದಿಸಲ್ಪಡುತ್ತದೆಯೋ, ಯಾವ ಹಣವು ಧರ್ಮಕ್ಕೆ ವಿರುದ್ಧವಾದ ಕಾರ್ಯಗಳಿಂದ ಬರುತ್ತದೆಯೋ, ಯಾವ ಹಣವು ಶತ್ರುಗಳಿಗೆ ಶರಣಾಗುವುದರಿಂದ ದೊರಕುತ್ತದೆಯೋ ಅಂತಹ ಹಣವು ಬರುವುದು ನನಗೆ ಬೇಡ.

ಹಣವು ಎಲ್ಲರಿಗೂ ಅಪೇಕ್ಷಣೀಯವಾದುದು ಮತ್ತು ಅವಶ್ಯವಾದುದು ಕೂಡ ಆಗಿದೆ. ಆದರೆ ಹಣಕ್ಕಾಗಿ ನೀಚಕಾರ್ಯಗಳನ್ನು ಮಾಡುವುದು ಸರಿಯಲ್ಲ. ಬಹಳ ಕಷ್ಟಪಟ್ಟು ಹಣಕ್ಕಾಗಿಯೇ ಹಗಲಿರುಳೂ ತಪಿಸಿ ಸಂಪಾದಿಸುವ ಅವಶ್ಯಕತೆಯಿಲ್ಲ. ಹಾಗೆಯೇ ಧರ್ಮಕ್ಕೆ ವಿರುದ್ಧವಾದ ಕೆಲಸಗಳ ಮೂಲಕ ಹಣಸಂಪಾದನೆ ಅಯೋಗ್ಯತನ. ಶತ್ರುಗಳಿಗೂ ಹಣಕ್ಕಾಗಿ ಕೈ ಮುಗಿಯುವ ಪರಿಸ್ಥಿತಿ ಇನ್ನೂ ನೀಚವಾದುದು. ಇಂತಹ ಸ್ಥಿತಿಯು ಬಾರದಿರುವಂತೆ ಎಚ್ಚರ ವಹಿಸಬೇಕು.॥೧೧॥

किं तया क्रियते लक्ष्म्या या वधूरिव केवला।
या तु वेश्येव सा मान्या पथिकैरपि भुज्यते॥

ಕೇವಲ ಮನೆಯ ಸೊಸೆಯಂತೆ ಇರುವ ಹಣದಿಂದ ಏನು ಪ್ರಯೋಜನ? ಅದು ವೇಶ್ಯೆಯಂತೆ ಪ್ರಯಾಣಿಕರಿಂದಲೂ ಭೋಗಿಸಲ್ಪಟ್ಟಾಗಲೇ ಮಾನ್ಯತೆಯನ್ನು ಪಡೆಯುತ್ತದೆ.

ಹಣವನ್ನು ಮನೆಯಲ್ಲಿಯೇ ಇಟ್ಟುಕೊಂಡು ಮನೆಯ ಸೊಸೆಯಂತೆ ರಕ್ಷಣೆ ಮಾಡುತ್ತಿದ್ದರೆ ಏನು ಪ್ರಯೋಜನವಿಲ್ಲ. ಹಣವು ವ್ಯಯವಾಗಿ ಹೆಚ್ಚು ಜನರಿಗೆ ಉಪಯೋಗವಾದಾಗಲೇ ಅದಕ್ಕೆ ಪ್ರಯೋಜನ ಮತ್ತು ಮಾನ್ಯತೆ ದೊರೆಯುತ್ತದೆ. ॥೧೨॥

धनेषु जीवितव्येषु स्त्रीषु चाहारकर्मसु।
अतृप्ताः प्राणिनः सर्वे याता यास्यन्ति यान्ति च॥

ಹಣದ ವಿಷಯದಲ್ಲಿ, ಉದ್ಯೋಗದಲ್ಲಿ, ಸ್ತ್ರೀಯರ ಸಂಬಂಧವಾಗಿ, ಆಹಾರವಿಧಾನಗಳಲ್ಲಿ ಭೂತ-ಭವಿಷ್ಯದ-ವರ್ತಮಾನಗಳಲ್ಲಿರುವ ಎಲ್ಲ ಪ್ರಾಣಿಗಳೂ ಅತೃಪ್ತರೇ ಆಗಿರುತ್ತಾರೆ. ಮನುಷ್ಯರಿಗೆ ಎಷ್ಟು ಹಣ ಬಂದರೂ ತೃಪ್ತಿಯಿಲ್ಲ, ಅವನಿಗೆ ಸಿಕ್ಕಿರುವ ಉದ್ಯೋಗವೂ ಸಾಲದೆಂದೇ ಅವನ ಭಾವನೆ. ತನಗೆ ಇನ್ನೂ ಒಳ್ಳೆಯ ಉದ್ಯೋಗ ಸಿಗಬೇಕಿತ್ತು. ಇನ್ನು ಹೆಚ್ಚಿನ ಹಣ ಸಂಪಾದನೆಯಾಗಬೇಕೆಂದೇ ಅವನು ಭಾವಿಸುತ್ತಾನೆ. ಎಂತಹ ಸುಂದರ ಮತ್ತು ಸುಶೀಲೆಯಾದ ಮಡದಿಯಿದ್ದರೂ ಬೇರೆ ಸ್ತ್ರೀಯರು ಇನ್ನೂ ಉತ್ತಮವಾಗಿ ಕಾಣುತ್ತಾರೆ. ಎಷ್ಟು ಉತ್ತಮವಾದ ಆಹಾರ ದೊರೆತರೂ ಇನ್ನು ಒಳ್ಳೆಯ ಭೋಜನ ಅವನಿಗೆ ಬೇಕು. ಇದು ಇಂದಿನ ವಿಷಯವಲ್ಲ. ಹಿಂದೆಯೂ ಜನರು ಹೀಗೆಯೇ ಇದ್ದರು. ಈಗಲೂ ಅಂತೆಯೇ ಇರುತ್ತಾರೆ. ಮುಂದೆಯೂ ಈ ಸ್ವಭಾವದಲ್ಲಿ ಬದಲಾವಣೆಯೇನೂ ಇರುವುದಿಲ್ಲ.॥೧೩॥

क्षीयन्ते सर्वदानानि यज्ञहोमबलिक्रिया:।
न क्षीयते पात्रदानमभयं सर्वदेहिनाम्॥

ಎಲ್ಲ ಪ್ರಕಾರವಾದ ದಾನಗಳೂ, ಯಜ್ಞ, ಹೋಮ ಮುಂತಾದ ವೈದಿಕ ಧರ್ಮಕಾರ್ಯಗಳೂ ಕ್ಷಯಿಸುತ್ತವೆ. ಆದರೆ ಸತ್ಪಾತ್ರದಲ್ಲಿ ಮಾಡಿದ ದಾನ ಮತ್ತು ಎಲ್ಲ ಪ್ರಾಣಿಗಳಿಗೂ ಕೊಡುವ ಅಭಯವಚನಗಳು ಮಾತ್ರ ಎಂದಿಗೂ ಕ್ಷಯಿಸುವುದಿಲ್ಲ.

ಮನುಷ್ಯನು ಕಾಮ್ಯಾರ್ಥವಾಗಿ ದಾನಗಳನ್ನು, ಯಜ್ಞಯಾಗಾದಿಗಳನ್ನು ಮಾಡುತ್ತಾನೆ. ಅವುಗಳಿಂದ ದೊರಕುವ ಫಲವು ಅಶಾಶ್ವತವಾದವುಗಳು. ಆದರೆ ಯಾವುದೇ ಕಾಮನೆಗಳಿಲ್ಲದೆ ಸತ್ಪಾತ್ರನಿಗೆ ದಾನ ಮಾಡಿದರೆ ಮತ್ತು ಪ್ರಾಣಿಹಿಂಸೆ ಮಾಡದೆ ಅವುಗಳಿಗೆ ಅಭಯವನ್ನು ಕೊಟ್ಟರೆ ಅದರಿಂದ ದೊರಕುವ ಪುಣ್ಯವು ಅಕ್ಷಯವಾದುದು.॥೧೪॥

तृणं लघु तृणात्तूलं तूलादपि च याचक:।
वायुना किं न नीतोऽसौ मामयं याचयिष्यति॥

ಹುಲ್ಲು ಹಗುರವಾದುದು. ಹುಲ್ಲಿಗಿಂತಲೂ ಹತ್ತಿಯು ಹಗುರವು. ಹತ್ತಿಗಿಂತಲೂ ಯಾಚಕನು ಹಗುರನಾಗುವನು. ಹಾಗಾದರೆ ಯಾಚಕನನ್ನು ಗಾಳಿಯು ಏಕೆ ಹಾರಿಸಿಕೊಂಡು ಹೋಗಿಲ್ಲವೆಂದರೆ 'ನನ್ನನ್ನು ಬೇಡಿ ಪೀಡಿಸುತ್ತಾನೆ' ಎಂದು.

ಇಲ್ಲಿ ಹಗುರವೆಂಬುದನ್ನು ತುಚ್ಛವೆಂಬ ಅರ್ಥದಲ್ಲಿ ಯಾಚಕನ ವಿಷಯದಲ್ಲಿ ಉಪಯೋಗಿಸಿದೆ. ಅವನು ಎಲ್ಲರನ್ನೂ ಬೇಡುತ್ತಾ ಪೀಡಿಸುತ್ತಾ ಇರುವುದರಿಂದ ಅವನನ್ನು

ಯಾರೂ ಇಷ್ಟಪಡುವುದಿಲ್ಲ, ಅವನನ್ನು ಹಾರಿಸಿಕೊಂಡು ಹೋಗಲು ಗಾಳಿಯು ಬಂದರೆ, ಗಾಳಿಯನ್ನು ಬೇಡುವನಂತೆ!।।೧೫।।

वरं प्राणपरित्यागो मानभंगेन जीवनात्।
प्राणत्यागे क्षणं दु:खं मानभंगे दिने दिने॥

ಮಾನವನ್ನು ಕಳೆದುಕೊಂಡು ಬದುಕುವುದಕ್ಕಿಂತ ಪ್ರಾಣ ಕಳೆದುಕೊಳ್ಳುವುದು ಲೇಸು. ಪ್ರಾಣವನ್ನು ಕಳೆದುಕೊಳ್ಳುವಾಗ ಒಂದು ಕ್ಷಣ ದುಃಖವಾಗಬಹುದು. ಮಾನ ಭಂಗವಾದರೆ ಪ್ರತಿದಿನವೂ ದುಃಖವನ್ನು ಅನುಭವಿಸುತ್ತ ಇರಬೇಕಾದೀತು.

ಮನುಷ್ಯನು ಬದುಕಿದ್ದರೆ ಗೌರವವಾಗಿ ಬದುಕಬೇಕು. ಆಗ ಎಲ್ಲರೂ ಅವನನ್ನು ಇಷ್ಟಪಡುತ್ತಾರೆ. ಯಾವುದಾದರೂ ಕಾರಣದಿಂದ ಮಾನಭಂಗವಾಗುವ ಪರಿಸ್ಥಿತಿ ಬಂದರೆ ಮಾನಿಷ್ಠನಾದ ಮನುಷ್ಯನಿಗೆ ಅದಕ್ಕಿಂತ ಹೆಚ್ಚಿನ ದುಃಖವು ಇರುವುದಿಲ್ಲ. ಅದಕ್ಕಿಂತ ಸಾವೇ ಹೆಚ್ಚು ಸುಖವು.।।೧೬।।

प्रियवाक्यप्रदानेन सर्वे तुष्यन्ति जन्तव:।
तस्मात्तदेव वक्तव्यं वचने का दरिद्रता॥

ಪ್ರಿಯವಾಗಿ ಮಾತನಾಡುವುದರಿಂದ ಎಲ್ಲ ಜೀವಿಗಳಿಗೂ ಸಂತೋಷವಾಗುತ್ತದೆ. ಆದ್ದರಿಂದ ಪ್ರಿಯವಾಗಿಯೇ ಮಾತನಾಡಬೇಕು. ಮಾತಿನಲ್ಲಿ ದಾರಿದ್ರ್ಯವೇಕೆ?

ಕಟುವಾಗಿ ಮಾತನಾಡಿದರೆ ಜನರ ಮನಸ್ಸಿಗೆ ನೋವುಂಟು ಮಾಡಿದಂತೆ ಆಗುತ್ತದೆ. ಆದರೆ ಪ್ರಿಯವಾಗಿ ಮಾತನಾಡಿದರೆ ಎಲ್ಲರೂ ಸಂತೋಷಪಡುತ್ತಾರೆ. ಆದ್ದರಿಂದ ಪ್ರಿಯವಾಕ್ಯಗಳಲ್ಲಿ ಬಡತನ ತೋರದೆ ಧಾರಾಳವಾಗಿ ಬಳಸಬೇಕು.।।೧೭।।

संसारविषवृक्षस्य द्वे फले अमृतोपमे।
सुभाषितं च सुस्वादु संगति: सुजने जने॥

ಸಂಸಾರವೆಂಬುದು ಒಂದು ವಿಷವೃಕ್ಷವು. ಅದರಲ್ಲಿ ಎರಡು ಹಣ್ಣುಗಳು ಮಾತ್ರ ಅಮೃತಕ್ಕೆ ಸಮಾನವಾದವು. ಅವುಗಳೆಂದರೆ ಬಹಳ ಸವಿಯಾದ ಸುಭಾಷಿತಗಳು ಮತ್ತು ಸತ್ಪುರುಷರ ಸಹವಾಸವು.

ಸಂಸಾರದಲ್ಲಿ ಕಷ್ಟಕಾರ್ಪಣ್ಯಗಳು ಮತ್ತು ದುಃಖದುಮ್ಮಾನಗಳೇ ಹೆಚ್ಚಾದುದರಿಂದ ಅದನ್ನು ವಿಷ ವೃಕ್ಷಕ್ಕೆ ಹೋಲಿಸಿದೆ. ಆದರೂ ಅದರಲ್ಲಿ ಎರಡು ವಿಷಯಗಳು ಅಮೃತದಂತೆ

ಸುಖವನ್ನು ಕೊಡುತ್ತವೆ. ಅವುಗಳೆಂದರೆ ಸುಭಾಷಿತಗಳು ಮತ್ತು ಸಜ್ಜನರ ಸಹವಾಸವು.॥೧೮॥

**जन्म-जन्मन्यभ्यस्तं दानमध्ययनं तपः।**
**तेनैवाऽभ्यासयोगेन तदेवाभ्यस्यते पुनः॥**

ಹಿಂದಿನ ಜನ್ಮಗಳಲ್ಲಿ ಮಾಡಿರುವ ದಾನ, ಅಧ್ಯಯನ ಮತ್ತು ತಪಸ್ಸಿನ ಅಭ್ಯಾಸಗಳು ವ್ಯರ್ಥವಾಗುವುದಿಲ್ಲ. ಅದೇ ಅಭ್ಯಾಸಯೋಗದಿಂದ ಮುಂದಿನ ಜನ್ಮದಲ್ಲಿ ದಾನ ಮುಂತಾದವುಗಳೇ ಹೆಚ್ಚುಹೆಚ್ಚಾಗಿ ಅಭ್ಯಾಸ ಮಾಡಲ್ಪಡುತ್ತದೆ.

ಇದು ಭಗವದ್ಗೀತೆಯ ಭಾವವಾಗಿದೆ. ಅರ್ಜುನನು ಕೃಷ್ಣನನ್ನು ಯೋಗಭ್ರಷ್ಟನ ಗತಿಯು ಏನೆಂದು ಪ್ರಶ್ನಿಸಿದಾಗ, ಶ್ರೀ ಕೃಷ್ಣನು ಅವನಿಗೆ 'ನ ಹಿ ಕಲ್ಯಾಣಕೃತ ಕಶ್ಚಿತ್ ದುರ್ಗತಿಂತಾತ ಗಚ್ಛತಿ' ಎಂದು ಒಳ್ಳೆಯ ಕೆಲಸಗಳು ಎಂದೂ ಹಾಳಾಗುವುದಿಲ್ಲ. ಮುಂದಿನ ಜನ್ಮದಲ್ಲಿ ಅವನು ಯೋಗಿಗಳ ವಂಶದಲ್ಲಿ ಜನಿಸಿ ತನ್ನ ಸಾಧನೆಯನ್ನು ಮುಂದುವರಿಸುತ್ತಾನೆಂದು ಆಶ್ವಾಸನೆ ಕೊಟ್ಟಿರುತ್ತಾನೆ. ॥೧೯॥

**पुस्तकेषु च या विद्या परहस्तेषु यद्धनम्।**
**उत्पन्नेषु च कार्येषु न सा विद्या न तद्धनम्॥**

ಪುಸ್ತಕದಲ್ಲಿರುವ ವಿದ್ಯೆ ಮತ್ತು ಬೇರೆಯವರ ಕೈಯಲ್ಲಿ ಕೊಟ್ಟ ಹಣ ಇವುಗಳು ಕಾರ್ಯದ ಸಂದರ್ಭದಲ್ಲಿ ಪ್ರಯೋಜನಕ್ಕೆ ಬರದೆ ಇರುವುದರಿಂದ ಅದು ವಿದ್ಯೆಯೂ ಅಲ್ಲ, ಅದು ಧನವೂ ಅಲ್ಲ.

ವಿದ್ಯೆಯನ್ನು ಓದಿ ಕಲಿಯಬೇಕೇ ಹೊರತು ಕೇವಲ ಪುಸ್ತಕದಲ್ಲಿದ್ದರೆ ಉಪಯೋಗಕ್ಕೆ ಬರುವುದಿಲ್ಲ. ಹಾಗೆಯೇ ಹಣವು ನಮ್ಮ ಹತ್ತಿರ ಇದ್ದರೆ ಬೇಕಾದಾಗ ಉಪಯೋಗಿಸಬಹುದೇ ಹೊರತು, ಬೇರೆಯವರ ಕೈಯಲ್ಲಿ ಕೊಟ್ಟರೆ ನಮ್ಮ ಸಮಯಕ್ಕೆ ಅವನು ಹಿಂತಿರುಗಿ ಕೊಡುವುದಿಲ್ಲ. ಅದ್ದರಿಂದ ಪ್ರಯೋಜನಕ್ಕೆ ಬಾರದ ಅವುಗಳು ವಿದ್ಯೆ ಮತ್ತು ಧನವೆಂದು ಪರಿಗಣಿತವಾಗುವುದಿಲ್ಲ.॥೨೦॥

## ಅಧ್ಯಾಯದ ಸಾರಾಂಶ

ಪ್ರಭುವಿನ ಪ್ರಾಪ್ತಿಗೆ ನಾಮಸ್ಮರಣೆ ಮಾಡದ ಅಥವಾ ಇಂದ್ರಿಯ ಸುಃಖಾನುಭವವೋ ಇಲ್ಲದ ಬದುಕು ನಿಷ್ಪ್ರಯೋಜಕ.

ವೇಶ್ಯೆ ನಿರ್ದಿಷ್ಟ ವ್ಯಕ್ತಿಯನ್ನು ವರಿಸಳು. ಅವಳ ಪ್ರೇಮದ ಸೋಗು ಹಣದ ಗಳಿಕೆಗೆ



## ॥ ಅಧ್ಯಾಯ - ೧೭ ॥

**ಮನೆಯಲ್ಲಿ ಪತಿವ್ರತೆಯಾದ ಪತ್ನಿ, ಧನ, ಸಂಪತ್ತು, ವಿನಯ ಮೂರ್ತಿ ಪುತ್ರ ಮತ್ತು ಮೊಮ್ಮಗ-ಮೊಮ್ಮಗಳು, ಇತ್ಯಾದಿ ಇದ್ದರೆ ಸ್ವರ್ಗಲೋಕದಲ್ಲೂ ಇದಕ್ಕಿಂದ ಹೆಚ್ಚು ಸುಖ ಸಿಗದು.**

पुस्तकप्रत्ययाधीतं नाधीतं गुरुसन्निधौ।
सभामध्ये न शोभन्ते जारगर्भा इव स्त्रिय:॥

ಗುರುಗಳ ಸನ್ನಿಧಿಯಲ್ಲಿ ಅಭ್ಯಾಸಮಾಡದೆ ಕೇವಲ ಪುಸ್ತಕಗಳಲ್ಲಿರುವ ವಿಷಯವನ್ನು ಓದಿ ಕೊಂಡಿರುವವನು ವೇಶ್ಯಾಸ್ತ್ರೀಯ ಮಕ್ಕಳಂತೆ ಸಭೆಯ ಮಧ್ಯದಲ್ಲಿ ಗೌರವಕ್ಕೆ ಪಾತ್ರನಾಗಲಾರನು.

ಕೇವಲ ಪುಸ್ತಕ ಪಾಂಡಿತ್ಯದಿಂದ ವಿದ್ಯೆ ಕರಗತವಾಗಲಾರದು. ಅದರಲ್ಲಿ ಇರುವ ಅಂತರಾರ್ಥವನ್ನು ತಿಳಿಯಬೇಕಾದರೆ ಗುರುಗಳ ಬಳಿ ಅಧ್ಯಯನ ಮಾಡಬೇಕು. ಪುಸ್ತಕ ಪಂಡಿತನು ಸಭೆಯಲ್ಲಿ ಮಾತನಾಡಲು ಹೋದರೆ ಅಪಾರ್ಥಗಳು ಉಂಟಾಗಿ ವಿದ್ವಜ್ಜನರ ಹಾಸ್ಯಕ್ಕೆ ಪಾತ್ರನಾಗಬೇಕಾಗುತ್ತದೆ. ಇದಕ್ಕೆ ಜಾರಿಣಿಯ ಮಕ್ಕಳನ್ನು ದೃಷ್ಟಾಂತವಾಗಿ ಕೊಡಲಾಗಿದೆ. ಸಭ್ಯ ಸಮಾಜದಲ್ಲಿ ಅವರಿಗೆ ಮನ್ನಣೆ ದೊರೆಯಲಾರದು. ಆದುದರಿಂದ ವಿದ್ಯಾಕಾಂಕ್ಷಿಯಾದವನು ಸರಿಯಾದ ಗುರುವನ್ನು ಅರಸಿ, ಅವನಿಂದ ಶಾಸ್ತ್ರಾರ್ಥಗಳನ್ನು ತಿಳಿಯಬೇಕು. ॥೧॥

कृते प्रतिकृतं कुर्याद् हिंसने प्रतिहिंसनम्।
तत्र दोषो न पतति दुष्टे दुष्टं समाचरेत्॥

ಯಾರಾದರೂ ಅಪಕಾರವನ್ನು ಮಾಡಿದರೆ ಅದಕ್ಕೆ ಪ್ರತೀಕಾರವನ್ನು ಮಾಡಬಹುದು. ಹಿಂಸೆಗೆ ಪ್ರತಿಹಿಂಸೆಯೇ ಸರಿ. ಅದರಿಂದ ದೋಷವೇನೂ ಉಂಟಾಗುವುದಿಲ್ಲ. ದುಷ್ಟನನ್ನು ದುಷ್ಟತನದಿಂದಲೇ ಮಣಿಸಬೇಕು.

ಒಳ್ಳೆಯವರೊಂದಿಗೂ ದುಷ್ಟರೊಂದಿಗೂ ಒಂದೇ ರೀತಿಯ ವ್ಯವಹಾರವು ಸಲ್ಲದು. ದುಷ್ಟರು ಒಳ್ಳೆಯತನವನ್ನು ಅರ್ಥಮಾಡಿಕೊಳ್ಳುವುದಿಲ್ಲ. ನಾವು ಮೊದಲು ಹಿಂಸೆ ಮಾಡಬಾರದು; ಆದರೆ ನಮಗೆ ಹಿಂಸೆ ಮಾಡಿದವರನ್ನೂ ಸಹಿಸಿಕೊಂಡರೆ ಹೇಡಿತನವಾಗುವುದಲ್ಲದೆ, ದುಷ್ಟನಿಗೆ ಇನ್ನು ಹೆಚ್ಚು ದುಷ್ಕಾರ್ಯ ಮಾಡಲು ಅವಕಾಶ ಕೊಟ್ಟಂತೆ ಆಗುತ್ತದೆ. ಆದುದರಿಂದ ನಮಗೆ ಅಪಕಾರ ಮಾಡಿದ ಜನರಿಗೆ ಹಾಗೆಯೇ ಮಾಡಿ ಬುದ್ಧಿ ಕಲಿಸಬೇಕು. ಅದರಿಂದ ಸಮಾಜಕ್ಕೆ ಹಿತವಾಗುವುದರಿಂದ ಹಿಂಸೆಯ ದೋಷವೇನೂ ನಮಗೆ ತಟ್ಟುವುದಿಲ್ಲ. ಅಪರಾಧಿಗೆ ಶಿಕ್ಷೆಯಾಗಬೇಕಾದುದು ನ್ಯಾಯಸಂಮತವಾದುದು.॥೨॥

यद्दूरं यद्दुराराध्यं यच्च दूरे व्यवस्थितम्।
तत्सर्वं तपसा साध्यं तपो हि दुरतिक्रमम्॥

ಯಾವುದು ದೂರವೋ, ಯಾವುದು ಆರಾಧಿಸಲು ಕಠಿನವಾದುದೋ ಯಾವುದು ದೂರದಲ್ಲಿ ಸಿದ್ಧಗೊಳಿಸಲ್ಪಟ್ಟಿದೆಯೋ ಅವೆಲ್ಲವೂ ತಪಸ್ಸಿನಿಂದ ಲಭಿಸುತ್ತವೆ. ತಪಸ್ಸು ಅತಿಕ್ರಮಿಸಲು ಅಸಾಧ್ಯವಾದುದು.

ಯಾವ ಕೆಲಸಕ್ಕೆ ಯಾವ ನಿರಂತರ ಸಾಧನೆಯ ಅಗತ್ಯವಿದೆಯೋ ಅದೇ ತಪಸ್ಸು. ದೂರದಲ್ಲಿರುವ ವಸ್ತುವನ್ನು ಪರಿಶ್ರಮವೆಂಬ ತಪಸ್ಸಿನಿಂದ, ಆರಾಧಿಸಲು ಕಠಿನವಾದುದನ್ನು ನಿರಂತರ ಸೇವೆಯಿಂದ, ದೂರದಲ್ಲಿ ಸಿದ್ಧವಾದುದನ್ನು ಪ್ರಯತ್ನದಿಂದ ಪಡೆಯಬಹುದು.॥೩.॥

लोभश्चेदगुणेन किं पिशुनता यद्यस्ति किं पातकैः
सत्यं चेत्तपसा च किं शुचि मनो यद्यस्ति तीर्थेन किम्।
सौजन्यं यदि किं गुणैः सुमहिमा यद्यस्ति किं मण्डनैः
सद्विद्या यदि किं धनैरपयशो यद्यस्ति किं मृत्युना॥

ಲೋಭವೊಂದು ಇದ್ದುದಾದರೆ ಬೇರಾವ ದುರ್ಗುಣವೂ ಬೇಕಿಲ್ಲ. ಚಾಡಿ

ಕ್ರೂರತನಕ್ಕಿಂತ ದೊಡ್ಡ ಪಾಪವಿಲ್ಲ, ಸತ್ಯವಿದ್ದರೆ ಬೇರೆ ತಪಸ್ಸಿನ ಅಗತ್ಯವಿಲ್ಲ, ಮನಸ್ಸು ಶುದ್ಧವಾಗಿದ್ದರೆ ಬೇರೆ ತೀರ್ಥಯಾತ್ರೆ ಏಕೆ ಬೇಕು? ಸೌಜನ್ಯವಿದ್ದರೆ ಎಲ್ಲ ಸದ್ಗುಣಗಳೂ ಇದ್ದಂತೆ. ಒಳ್ಳೆಯ ಮಹಿಮೆಯಿದ್ದರೆ ಬೇರೆ ಅಲಂಕಾರಗಳು ವ್ಯರ್ಥ. ಒಳ್ಳೆಯ ವಿದ್ಯೆಯಿದ್ದರೆ ಅದೇ ಧನವಿದ್ದಂತೆ. ಅಪಕೀರ್ತಿಯು ಮೃತ್ಯುವಿಗೆ ಸಮಾನವು.

ದುರಾಸೆಯು ದುರ್ಗುಣಗಳಿಗೆಲ್ಲ ಮೂಲಕಾರಣವು. ಹಾಗೆಯೇ ಚಾಡಿ ಮಾತು ಪಾಪಗಳಿಗೆ ದಾರಿಮಾಡಿಕೊಡುತ್ತದೆ. ಸತ್ಯ, ಶುಚಿತ್ವ, ಸೌಜನ್ಯ, ಸದ್ವಿದ್ಯೆಗಳು ಪಡೆಯಬೇಕಾದ ಅಂಶಗಳು. ಇವುಗಳಿದ್ದರೆ ಬೇರಾವುದೂ ಬೇಕಿಲ್ಲ. ಅಪಕೀರ್ತಿಯು ಮಾತ್ರ ಮೃತ್ಯುವಿಗೆ ಆಹ್ವಾನ ಕೊಟ್ಟಂತೆ ಅಂತಹ ಕೆಲಸವನ್ನು ಮಾಡಬಾರದು.॥೪॥

**पिता रत्नाकरो यस्य लक्ष्मीर्यस्य सहोदरा।**
**शंखो भिक्षाटनं कुर्यान्नाऽदत्तमुपतिष्ठते॥**

ಶಂಖದ ತಂದೆಯು ರತ್ನಗಳ ಒಡೆಯನಾದ ಸಮುದ್ರನು. ಲಕ್ಷ್ಮಿಯು ಒಡ ಹುಟ್ಟಿದವಳು. ಇಷ್ಟಾದರೂ ಶಂಖವು ಭಿಕ್ಷಾಟನೆ ಮಾಡುತ್ತ ತಿರುಗುತ್ತದೆ. ದಾನ ಮಾಡದೆ ಇದ್ದರೆ ಏನು ಫಲಿಸುವುದಿಲ್ಲ.

ಶಂಖವು ಸಮುದ್ರದಲ್ಲಿ ಜನಿಸುವುದು. ಸಮುದ್ರದಲ್ಲಿ ಬೇಕಾದಷ್ಟು ಮುತ್ತುರತ್ನಗಳು ದೊರೆಯುವುವು. ಲಕ್ಷ್ಮಿಯೂ ಕೂಡ ಇಲ್ಲಿಯೇ ಹುಟ್ಟಿದುದು. ಆದರೂ ಭಿಕ್ಷುಕರು ಶಂಖವನ್ನು ಊದಿ ತಮಗೆ ಬೇಕಾದ ಭಿಕ್ಷೆ ಬೇಡಲು ಅದನ್ನು ಸಾಧನವಾಗಿ ಬಳಸುತ್ತಾರೆ. ಇದನ್ನು ನೋಡಿ ಆಚಾರ್ಯರು ಹಣೆಯಬರಹವನ್ನು ಮೀರುವುದು ಸಾಧ್ಯವಿಲ್ಲ. ಅವರವರ ಕರ್ಮದಂತೆ ಜೀವನವೆಂಬುದನ್ನು ತೋರಿಸಿಕೊಟ್ಟಿರುತ್ತಾರೆ. ॥೫॥

**अशक्तस्तु भवेत्साधुर्ब्रह्मचारी च निर्धनः।**
**व्याधिष्ठो देवभक्तश्च वृद्धा नारी पतिव्रता॥**

ಅಶಕ್ತನಾದವನು ಸಾಧುವಾಗಬೇಕಾಗುತ್ತದೆ. ಹಣವಿಲ್ಲದವನಿಗೆ ಬ್ರಹ್ಮಚರ್ಯ ಸರಿಯಾಗುತ್ತದೆ. ರೋಗಿಯಾದವನು ದೇವರ ಭಕ್ತನಾಗುತ್ತಾನೆ. ವೃದ್ಧಳಾದ ಹೆಂಗಸು ಪತಿವ್ರತೆಯಾಗುತ್ತಾಳೆ.

ಅಶಕ್ತನಾದವನು ಯಾರ ಮೇಲೂ ಸೇಡುತೀರಿಸಿಕೊಳ್ಳಲಾರದವನಾಗಿರುತ್ತಾನೆ. ಆದ್ದರಿಂದ ಅವನಿಗೆ ಸಾಧು ಸ್ವಭಾವವೇ ಯುಕ್ತವಾಗುತ್ತದೆ. ಹಣವಿಲ್ಲದೆ ಸಂಸಾರವನ್ನು ಸಾಕುವ ಶಕ್ತಿ ಇರುವುದಿಲ್ಲ. ಆದ್ದರಿಂದ ಅವನು ಬ್ರಹ್ಮಚರ್ಯವನ್ನು ಅವಲಂಬಿಸುತ್ತಾನೆ. ರೋಗಿಯಾದವನು ತನ್ನ ರೋಗವನ್ನು ವಾಸಿ ಮಾಡಿಕೊಳ್ಳಲು

ದೇವರನ್ನು ಶರಣು ಹೋಗುತ್ತಾನೆಯೇ ಹೊರತು ನಿಷ್ಕಲ್ಮಶವಾದ ಭಕ್ತಿಯಿಂದಲ್ಲ. ವೃದ್ಧೆಯಾದ ಹೆಂಗಸನ್ನು ಯಾವ ಪುರುಷನೂ ಬಯಸುವುದಿಲ್ಲವಾಗಿ ಅವಳು ಪತಿವ್ರತೆಯಂತೆ ತೋರುತ್ತಾಳೆ. ಇವೆಲ್ಲವೂ ಪರಿಸ್ಥಿತಿಯಿಂದ ಬಂದ ಗುಣಗಳೇ ಹೊರತು ಸಹಜ ಸ್ವಭಾವದಿಂದಲ್ಲ.॥೬॥

नाऽन्नोदकसमं दानं न तिथिर्द्वादशी समा।
न गायत्र्याः परो मन्त्रो न मातुः पर दैवतम्॥

ಅನ್ನ ಮತ್ತು ನೀರು ಇವುಗಳಿಗೆ ಸಮನಾದ ದಾನವಿಲ್ಲ, ದ್ವಾದಶಿಗೆ ಸಮನಾದ ತಿಥಿಯಿಲ್ಲ. ಗಾಯತ್ರಿಗಿಂತ ಶ್ರೇಷ್ಠವಾದ ಮಂತ್ರವಿಲ್ಲ. ತಾಯಿಗಿಂತ ಹಿರಿದಾದ ದೈವವಿಲ್ಲ.

ಅನ್ನ ಮತ್ತು ನೀರು ಎಲ್ಲರ ಮೂಲಭೂತವಾದ ಅವಶ್ಯಕತೆಗಳು. ಅದನ್ನು ದಾನಮಾಡುವುದರಿಂದ ಹಸಿದವರು ಮತ್ತು ಬಾಯಾರಿದವರು ತೃಪ್ತರಾಗುತ್ತಾರೆ. ಏಕಾದಶಿ ವ್ರತದ ಫಲ ಸಿಗುವುದು ದ್ವಾದಶಿಯ ಪಾರಣೆಯಿಂದೆಂದು ಹೇಳುತ್ತಾರೆ. ಆದ್ದರಿಂದ ದ್ವಾದಶಿಯು ಉತ್ತಮವಾದ ತಿಥಿಯು. ಗಾಯತ್ರಿಯು ಎಲ್ಲ ವಿಪ್ರರೂ ಪಠಿಸುವ ಸೂರ್ಯಸಂಬಂಧವಾದ ಮಂತ್ರವು. ಸೂರ್ಯನು ಅತಿ ಪ್ರಮುಖವಾದ ದೈವತವು. ತಾಯಿಯು ದೇವರೆಂದು ಎಲ್ಲ ವೇದಗಳು ಸಾರುತ್ತವೆ.॥೭॥

तक्षकस्य विषं दन्ते मक्षिकायास्तु मस्तके।
वृश्चिकस्य विषं पुच्छे सर्वांगे दुर्जने विषम्॥

ಹಾವುಗಳಿಗೆ ಹಲ್ಲುಗಳಲ್ಲಿ ವಿಷವಿರುತ್ತದೆ. ನೊಣಕ್ಕೆ ತಲೆಯಲ್ಲಿ ವಿಷವು ಇರುತ್ತದೆಂದು ಹೇಳುತ್ತಾರೆ. ಚೇಳಿಗೆ ಕೊಂಡಿಯಲ್ಲಿ ವಿಷ ತುಂಬಿರುತ್ತದೆ. ಆದರೆ ದುಷ್ಟನಾದವನ ಎಲ್ಲ ಅಂಗಗಳಲ್ಲಿಯೂ ವಿಷವಿರುತ್ತದೆ.

ವಿಷಜಂತುಗಳೆಂದು ಪ್ರಸಿದ್ಧವಾಗಿರುವ ಪ್ರಾಣಿಗಳಲ್ಲಿ ಎಲ್ಲೋ ಒಂದು ಅಂಗದಲ್ಲಿ ಮಾತ್ರ ವಿಷವಿರುತ್ತದೆ. ಆದರೆ ಮನುಷ್ಯನು ದುಷ್ಟನಾದರೆ ಅವನು ತನ್ನ ಎಲ್ಲ ರೀತಿಗಳಿಂದಲೂ ಪರರಿಗೆ ಹಾನಿಮಾಡಬಲ್ಲನು.॥೮॥

पत्युराज्ञां विना नारी उपोष्य व्रतचारिणी।
आयुष्यं हरते भर्तुः सा नारी नरकं व्रजेत्॥

ಪತಿಯ ಅಪ್ಪಣೆಯಿಲ್ಲದೆ ಹೆಂಗಸು ಉಪವಾಸ ಮತ್ತು ವ್ರತಗಳನ್ನು ಕೈಗೊಂಡರೆ ಪತಿಯ ಆಯಸ್ಸನ್ನು ಅಪಹರಿಸುತ್ತಾಳೆ. ಅಂತಹ ಸ್ತ್ರೀಯು ನರಕಕ್ಕೆ ಹೋಗುತ್ತಾಳೆ.

ಇದು ಧರ್ಮಶಾಸ್ತ್ರದ ನಿಯಮ. ಪತ್ನಿಯಾದವಳು ಪತಿಯ ಅಪ್ಪಣೆಯಿಲ್ಲದೆ ವ್ರತ, ದಾನ, ಉಪವಾಸಗಳನ್ನು ಮಾಡುವಂತಿಲ್ಲ. ಅವಳು ಅವನಿಗೆ ಅಧೀನಳು.॥೯॥

न दानैः शुध्यते नारी नोपवासशतैरपि।
न तीर्थसेवया तद्वद् भर्तुः पादोदकैर्यथा॥

ಸ್ತ್ರೀಯು ದಾನಗಳಿಂದಲೂ, ನೂರಾರು ಬಗೆಯ ಉಪವಾಸ ವ್ರತಗಳಿಂದಲಾಗಲೀ, ತೀರ್ಥಕ್ಷೇತ್ರಗಳನ್ನು ಸೇವಿಸುವುದರಿಂದಲಾಗಲೀ ಶುದ್ಧಳಾಗುವುದಿಲ್ಲ. ಪತಿಯ ಪಾದೋದಕದಿಂದಲೇ ಅವಳಿಗೆ ಶುದ್ಧಿಯು.

ಸ್ತ್ರೀಯಾದವಳಿಗೆ ಪತಿಯೇ ಪರದೈವವು. ಮನಮುಟ್ಟಿ ಪತಿಸೇವೆ ಮಾಡುವುದರಿಂದಲೇ ಅವಳು ದಾನ, ವ್ರತ, ತೀರ್ಥಕ್ಷೇತ್ರಗಳ ಪುಣ್ಯವೆಲ್ಲವನ್ನೂ ಪಡೆಯುತ್ತಾಳೆ. ॥೧೦॥

दानेन पाणिर्न तु कंकणेन
स्नानेन शुद्धिर्न तु चन्दनेन।
मानेन तृप्तिर्न तु भोजनेन
ज्ञानेन मुक्तिर्न तु मण्डनेन॥

ಕೈಗಳಿಗೆ ದಾನವು ಭೂಷಣಪ್ರಾಯವೇ ಹೊರತು ಬಳೆಗಳಲ್ಲ. ದೇಹಕ್ಕೆ ಸ್ನಾನದಿಂದ ಶುದ್ಧಿಯೇ ಹೊರತು, ಸ್ನಾನವಿಲ್ಲದೆ ಚಂದನವನ್ನು ಹಚ್ಚಿಕೊಳ್ಳುವುದರಿಂದ ಶುದ್ಧವಾಗುವುದಿಲ್ಲ. ಗೌರವದಿಂದ ಸಿಗುವ ತೃಪ್ತಿಯು ಭೋಜನದಿಂದ ಸಿಕ್ಕುವುದಿಲ್ಲ. ಜ್ಞಾನದಿಂದ ಮುಕ್ತಿಯೇ ಹೊರತು ಅಲಂಕಾರಗಳಿಂದಲ್ಲ.

ದೈಹಿಕವಾದ ಆಭರಣಗಳನ್ನು ತೊಡುವುದು, ಸುಗಂಧದ್ರವ್ಯಗಳನ್ನು ಬಳಸುವುದು, ಮುಂತಾದವುಗಳು ವ್ಯಕ್ತಿಯ ಗೌರವ ಘನತೆಯನ್ನು ಹೆಚ್ಚು ಮಾಡುವುದಿಲ್ಲ. ಅದಕ್ಕೆ ಬದಲಾಗಿ, ದಾನ, ತೀರ್ಥಸ್ನಾನ, ಜ್ಞಾನ ಮುಂತಾದವುಗಳನ್ನು ಅಭ್ಯಾಸ ಮಾಡಿಕೊಳ್ಳಬೇಕು.॥೧೧॥

सद्यः प्रज्ञाहरा तुण्डी सद्यः प्रज्ञाकरी वचा।
सद्यः शक्तिहरा नारी सद्यः शक्तिकरं पयः॥

ಬಾಯಿಯು ಕೂಡಲೇ ಪ್ರಜ್ಞೆಯನ್ನು ಅಪಹರಿಸುವಂತಹುದು. ಮಾತು ಕೂಡಲೇ ಪ್ರಜ್ಞೆಯನ್ನು ಉಂಟುಮಾಡಬಲ್ಲದು. ಹೆಂಗಸು ಕೂಡಲೇ ಶಕ್ತಿಯನ್ನು ಅಪಹರಿಸುತ್ತಾಳೆ.

ಹಾಲು ಕೂಡಲೇ ಶಕ್ತಿಯನ್ನು ಕೊಡುತ್ತದೆ.

ಬಾಯಿಯೆಂದರೆ ತಿನ್ನುವ ಚಪಲವೆಂದು ಅರ್ಥಮಾಡಬಹುದು.ಅತಿ ಭುಕ್ತಿ ಕೂಡಲೇ ಪ್ರಾಣವನ್ನು ಅಪಹರಿಸುತ್ತದೆಯೆಂಬ ಸೂಕ್ತಿಯಿದೆ. ರುಚಿಯಾದ ವಸ್ತುಗಳನ್ನು ತಿನ್ನುವ ಬಾಯಿ ಚಪಲವಿರುವವನು ಯುಕ್ತಾಯುಕ್ತ ವಿವೇಚನೆಯನ್ನು ಕಳೆದುಕೊಳ್ಳುತ್ತಾನೆ. ಅದೇ ಬಾಯಿಯು ಮತ್ತೊಂದು ಶಕ್ತಿಯನ್ನು ಹೊಂದಿದೆ. ಅದು ವಾಕ್ ಶಕ್ತಿ. ಸರಿಯಾಗಿ ಉಪಯೋಗಿಸಿದ ಈ ಶಕ್ತಿಯು ತಿಳುವಳಿಕೆಯನ್ನು ಹೆಚ್ಚಿಸುತ್ತದೆ. ಸ್ತ್ರೀಯಾದವಳು ಪುರುಷನ ಶಕ್ತಿಯನ್ನು ಅಪಹರಿಸಬಲ್ಲಳು. ಮತ್ತೆ ಶಕ್ತಿಯನ್ನು ಪಡೆಯಲು ಹಾಲು ಮುಂತಾದವನ್ನು ಸೇವಿಸಬೇಕು. ಹಾಲು ವೈಜ್ಞಾನಿಕವಾಗಿಯೂ ಒಳ್ಳೆಯ ಆಹಾರವು.॥೧೨॥

परोपकरणं येषां जागर्ति हृदये सताम्।
नश्यन्ति विपदस्तेषां सम्पदः स्युः पदे पदे॥

ಯಾವ ಸತ್ಪುರುಷರ ಹೃದಯದಲ್ಲಿ ಪರೋಪಕಾರ ಬುದ್ಧಿಯು ಜಾಗೃತವಾಗುವುದೋ ಅವರ ವಿಪತ್ತುಗಳು ನಾಶವಾಗುತ್ತವೆ. ಹೆಜ್ಜೆ ಹೆಜ್ಜೆಗೂ ಸಂಪತ್ತು ಅಭಿವೃದ್ಧಿಯಾಗುತ್ತದೆ.

ಪರೋಪಕಾರವೆಂಬುದು ವಿಶಿಷ್ಟವಾದ ಗುಣ. ಅವನನ್ನು ಎಲ್ಲರೂ ಪ್ರೀತಿಸುತ್ತಾರೆ. ಆದ್ದರಿಂದ ವಿಪತ್ಕಾಲದಲ್ಲಿ ನೆರವಿಗೆ ಬರುವವರು ಇರುತ್ತಾರೆ. ಹಾಗೆ ವಿಪತ್ತುಗಳು ನಾಶವಾಗುತ್ತವೆ. ಎಲ್ಲರಿಗೂ ಒಳಿತನ್ನು ಬಯಸುವವನಿಗೆ ಒಳ್ಳೆಯದೇ ಆಗುತ್ತದೆ.॥೧೩॥

आहारनिद्राभयमैथुनं च सामान्यमेतत् पशुभिर्नराणाम्।
धर्मो हि तेषामधिको विशेषो धर्मेण हीनाः पशुभिः समानाः॥

ಊಟ, ನಿದ್ದೆ, ಭಯ, ಸಂಭೋಗ ಅಥವಾ ಸಂತಾನೋತ್ಪತ್ತಿ ಈ ನಾಲ್ಕು ಕ್ರಿಯೆಗಳು ಮನುಷ್ಯರಿಗೂ ಪ್ರಾಣಿಗಳಿಗೂ ಸಮಾನವಾಗಿರುವುವು. ಆದರೆ ಧರ್ಮವೆಂಬುದು ಮನುಷ್ಯರಿಗೆ ವಿಶೇಷವಾದ ಅಂಶ. ಅಧರ್ಮಿಗಳಾದವರು ಪ್ರಾಣಿಗಳಿಗೆ ಸಮನಾಗುವರು.

ಜೀವನದಲ್ಲಿ ಸಾಧಾರಣವಾದ ದೈಹಿಕ ಕ್ರಿಯೆಗಳಲ್ಲಿ ವಿಶೇಷವೇನೂ ಇರುವುದಿಲ್ಲ. ಎಲ್ಲ ಪ್ರಾಣಿಗಳೂ ಆ ಕ್ರಿಯೆಗಳನ್ನು ನಡೆಸುತ್ತಲೇ ಇರುತ್ತವೆ. ಆದರೆ ಮನುಷ್ಯನಾದವನು ತನ್ನ ಜೀವನವನ್ನು ಸಾರ್ಥಕಪಡಿಸಿಕೊಳ್ಳಬೇಕಾದರೆ ಧರ್ಮಕಾರ್ಯಗಳನ್ನು ಮಾಡಬೇಕು. ಅಧರ್ಮಿಯಾದವನು ಪ್ರಾಣಿಗಳಿಗಿಂತ ಕೀಳೆಂದು ಹೇಳಬಹುದು. ॥೧೪॥

दानार्थिनो मधुकरा यदि कर्णतालैर्
दूरीकृताः करिवरेण मदान्धबुद्ध्या।
तस्यैव गण्डयुगमण्डनहानिरेषा
भृंगाः पुनर्विकचपद्मवने वसन्ति॥

ಮದದಿಂದ ಕುರುಡಾದ ಬುದ್ಧಿಯುಳ್ಳ ಗಜರಾಜನಿಂದ, ಮದೋದಕಕ್ಕಾಗಿ ಬರುತ್ತಿರುವ ದುಂಬಿಗಳು ಕಿವಿಯ ಚಲನೆಯಿಂದ ದೂರಮಾಡಲ್ಪಟ್ಟರೆ ದುಂಬಿಗಳಿಗೇನೂ ನಷ್ಟವಿಲ್ಲ. ಅದರ ಕಪೋಲಗಳ ಭೂಷಣತೆಗೆ ಹಾನಿಯಾಗುತ್ತದೆ. ದುಂಬಿಗಳು ಅರಳಿದ ಕಮಲಗಳ ವನದಲ್ಲಿ ಹೋಗಿ ವಾಸ ಮಾಡುತ್ತವೆ.

ಹಣವಿದ್ದೂ ದಾನವಮಾಡದೆ ಇರುವ ಮನುಷ್ಯನ ವಿಚಾರವನ್ನು ಇಲ್ಲಿ ಅನ್ಯೋಕ್ತಿಯಿಂದ ಹೇಳಿದೆ. ದಾನ ಬೇಡಲು ಬಂದವರನ್ನು ಮದದಿಂದ ಕುರುಡಾಗಿ, ದಾನ ನೀಡದೆ ಕಳಿಸಿದರೆ ಅರ್ಥಿಗಳಿಗೇನೂ ನಷ್ಟವಿಲ್ಲ. ಅವರು ಬೇರೆಯ ದಾನಿಗಳ ಬಳಿಗೆ ಹೋಗುತ್ತಾರೆ. ಅಹಂಕಾರಿಯಾದ ಮನುಷ್ಯನ ಬೆಲೆಯೇ ಕಡಿಮೆಯಾಗುತ್ತದೆ. ||೧೫||

राजा वेश्या यमो ह्यग्निस्तस्करो बालयाचकौ।
परदुःखं न जानन्ति अष्टमो ग्रामकण्टकः॥

ರಾಜ, ವೇಶ್ಯೆ, ಯಮ, ಅಗ್ನಿ, ಕಳ್ಳ, ಬಾಲಕರು, ಭಿಕ್ಷುಕರು ಮತ್ತು ಎಂಟನೆಯವನಾದ ಗ್ರಾಮಕ್ಕೆ ಮುಳ್ಳಿನಂತೆ ತೊಂದರೆ ಕೊಡುವವನು ಇವರೆಲ್ಲರೂ ಇನ್ನೊಬ್ಬರ ದುಃಖವನ್ನು ಅರ್ಥಮಾಡಿಕೊಳ್ಳುವುದಿಲ್ಲ.

ರಾಜ, ವೇಶ್ಯೆಯರು ಸ್ವಸುಖದಲ್ಲಿ ಆಸಕ್ತರು. ಯಮನ ತನ್ನ ಕರ್ತವ್ಯದಲ್ಲಿ ನಿರತನು. ಅಗ್ನಿಗೂ ತನ್ನವರು ಪರರೆಂಬ ಭೇದವಿಲ್ಲದೆ ಸುಡುವುದೇ ಕೆಲಸ. ಕಳ್ಳನಿಗೆ ಹಣ ಮುಖ್ಯ. ಬಾಲಕರು ಅಜ್ಞರು. ಭಿಕ್ಷುಕರು ತಮ್ಮ ಜೀವನಕ್ಕೆ ಬೇಡಬೇಕಾಗುವುದರಿಂದ ಅನ್ಯರ ಬಗ್ಗೆ ಚಿಂತಿಸುವುದಿಲ್ಲ. ಇವರೆಲ್ಲರಿಗಿಂತ ಗ್ರಾಮಕಂಟಕನನ್ನು ಬೇರೆಯಾಗಿ ಹೇಳಿರುವುದು ವಿಶೇಷವನ್ನು ತೋರಿಸಲು. ಉಳಿದ ಏಳರಲ್ಲಿ ದುರ್ಭಾವನೆಯಿರುವುದಿಲ್ಲ. ಅನಾಸಕ್ತಿಯಿರುತ್ತದೆ. ಗ್ರಾಮಕಂಟಕನು ಬೇಕೆಂದೇ ಜನರಿಗೆ ತೊಂದರೆ ಕೊಟ್ಟು ಆನಂದ ಪಡುತ್ತಾನೆ. ||೧೬||

अधः पश्यसि किं वृद्धे पतितं तव किं भुवि।
रे रे मूर्ख न जानासि गतं तारुण्यमौक्तिकम्॥

ವೃದ್ಧೆಯನ್ನು ಯುವಕನು ಪ್ರಶ್ನಿಸುತ್ತಾನೆ. ಕೆಳಗೆ ನೋಡುತ್ತ ಏಕೆ ಇರುವೆ?.

ನಿನ್ನದೇನಾದರೂ ಭೂಮಿಯ ಮೇಲೆ ಬಿದ್ದಿದೆಯೆ? ಮುದುಕಿಯು ಉತ್ತರಿಸುತ್ತಾಳೆ. ಎಲೈ ಮೂರ್ಖನೆ ನಿನಗೆ ತಿಳಿಯದೆ, ಯೌವನವೆಂಬ ಮುತ್ತು ಕಳೆದುಹೋಗಿದೆ.

ವೃದ್ಧೆಯೊಬ್ಬಳು ವಯೋಧರ್ಮಕ್ಕೆ ಅನುಸಾರವಾಗಿ ಬಗ್ಗಿದ ಸೊಂಟದಿಂದ, ಕೆಳಮುಖವಾಗಿ ನೋಡುತ್ತ ನಡೆಯುತ್ತಿದ್ದಾಳೆ. ಅದನ್ನು ಕಂಡು ಯುವಕನೊಬ್ಬನು ಅಪಹಾಸ್ಯ ಮಾಡುತ್ತ, 'ನೆಲದ ಮೇಲೆ ಏನನ್ನು ಹುಡುಕುತ್ತಿರುವೆ'?ಎಂದು ಪ್ರಶ್ನಿಸುತ್ತಾನೆ. ವೃದ್ಧೆಯು ಚತುರಳು. ಅವಳು ಯುವಕನ ಹಾಸ್ಯವನ್ನು ಅರ್ಥಮಾಡಿಕೊಂಡು, ಯೌವನವೆಂಬ ಮುತ್ತು ಕಳೆದುಹೋಗಿದೆ. ಅದನ್ನು ಹುಡುಕುತ್ತಿದ್ದೇನೆ ಎನ್ನುತ್ತಾಳೆ. 'ಮೂರ್ಖ' ಎಂಬ ಸಂಬೋಧನೆಯಿಂದ ನಿನ್ನ ಯೌವನವೂ ಕೆಲವೇ ದಿನಗಳಲ್ಲಿ ಕಳೆದುಹೋಗುತ್ತದೆ. ನೀನೂ ಹೀಗೆಯೇ ಮುದಿತನವನ್ನು ಅನುಭವಿಸ ಬೇಕಾಗುತ್ತದೆಯೆಂಬ ಅರ್ಥ ಅಡಗಿದೆ. ॥೧೭॥

व्यालाश्रयाऽपि विफलापि सकण्टकाऽपि।
वक्राऽपि पंकिल-भवाऽपि दुरासदाऽपि।
गन्धेन बन्धुरसि केतकि सर्वजन्तोर्
एको गुण: खलु निहन्ति समस्तदोषान्॥

ಎಲೈ ತಾಳೆಯ ಹೂವೇ, ನೀನು ಹಾವುಗಳಿಂದ ಸುತ್ತುವರಿಯಲ್ಪಟ್ಟಿರುವೆ. ನಿನ್ನಲ್ಲಿ ಹಣ್ಣುಗಳು ಇರುವುದಿಲ್ಲ. ಮುಳ್ಳಿನಿಂದ ಕೂಡಿರುವೆ. ಕುಯ್ಯುವುದಕ್ಕೆ ಕಷ್ಟನಾಗುವಂತೆ ವಕ್ರವಾಗಿ ಬೆಳೆದಿರುವೆ. ಸುತ್ತ ಕೆಸರಿನಲ್ಲಿ ಜನಿಸಿರುವೆ. ನಿನ್ನನ್ನು ಪಡೆಯುವುದು ಕಷ್ಟಸಾಧ್ಯ. ಆದರೂ ನಿನ್ನ ಸುವಾಸನೆಯಿಂದ ಎಲ್ಲ ಜನರಿಗೂ ಪ್ರಿಯಳಾಗಿರುವೆ. ಒಂದು ಒಳ್ಳೆಯ ಗುಣವು ಎಲ್ಲ ದೋಷಗಳನ್ನು ನಿವಾರಿಸುತ್ತದೆ.

ಒಳ್ಳೆಯ ಗುಣವೊಂದು ಪ್ರಮುಖ ಆಕರ್ಷಣೆಯಾದಾಗ ಎಷ್ಟೇ ದುರ್ಗುಣಗಳಿದ್ದರೂ ಗಣನೆಗೆ ಬರುವುದಿಲ್ಲ. ॥೧೮॥

## ಅಧ್ಯಾಯದ ಸಾರಾಂಶ

ಆಚಾರ್ಯರು ಸಂಕ್ಷೇಪದಲ್ಲಿ ಪ್ರಮುಖ ಸಂಗತಿಗಳ ಬಗ್ಗೆ ಚರ್ಚಿಸಿರುವರು. ಪುಸ್ತಕಗಳಿಂದ ಸ್ವಯಂ ಅಧ್ಯಯನ ನಡೆಸುವ ಬದಲು ಗುರುವಿನ ಬೋಧೆಯಿಂದ ವಿದ್ಯಾರ್ಜನೆ ಪಡೆಯುವುದು ಲೇಸು ಎಂದು ತಿಳಿಸಿರುವರು. ಸ್ವಾಧ್ಯಾಯದಿಂದ ಗುರುವಿನ ದೃಷ್ಟಿ ಹಾಗೂ ಮೇಲ್ವಿಚಾರಣೆಯ ಪ್ರಯೋಜನ ಸಿಗದು.